# ಕಡಿದಾಳ್ ಮಂಜಪ್ಪ: ಮಲೆನಾಡಿನ ಸ್ವಾತಂತ್ರ್ಯೋತ್ತರ ಭೂ ಹೋರಾಟ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಆಂಶಿಕ ಪದವಿಗಾಗಿ
ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕರು
ರೇವಿಣ ಡಿ.ಜಿ.

ಮಾರ್ಗದರ್ಶಕರು
ಡಾ. ಟಿ. ವಿಜಯ್ ಪೂಣಚ್ಚ
ಪ್ರಾಧ್ಯಾಪಕರು





ಚರಿತ್ರೆ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಅಕ್ಟೋಬರ್ ೨೦೦೮

264

# ಕಡಿದಾಳ್ ಮಂಜಪ್ಪ: ಮಲೆನಾಡಿನ ಸ್ವಾತಂತ್ರ್ಯೋತ್ತರ ಭೂ ಹೋರಾಟ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್.ಆಂಶಿಕ ಪದವಿಗಾಗಿ
ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕರು
ರೇವಿಣ ಡಿ.ಜಿ.



ಮಾರ್ಗದರ್ಶಕರು
ಡಾ. ಟಿ. ವಿಜಯ್ ಪೂಣಚ್ಚ
ಪ್ರಾಧ್ಯಾಪಕರು





ಚರಿತ್ರೆ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಅಕ್ಟೋಬರ್ ೨೦೦೮

264

# ಮಾರ್ಗದರ್ಶಕರ ದೃಢೀಕರಣ ಪತ್ರ

**ಕಡಿದಾಳ್ ಮಂಜಪ್ಪ: ಮಲೆನಾಡಿನ ಸ್ವಾತಂತ್ರ್ಯೋತ್ತರ ಭೂ ಹೋರಾಟ** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್.ಪದವಿಗಾಗಿ **ರೇವಿಣ ಡಿ.ಜಿ.** ಅವರು ನನ್ನ ಮಾರ್ಗದರ್ಶನ ದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಟಿ.ವಿಜಯ್ ಪೂಣಚ್ಚ
ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 10.10.08

## ಸಂಶೋಧಕರ ಪ್ರಮಾಣ ಪತ್ರ

**ಕಡಿದಾಳ್ ಮಂಜಪ್ಪ:** ಮಲೆನಾಡಿನ ಸ್ವಾತಂತ್ರ್ಯೋತ್ತರ ಭೂ ಹೋರಾಟ ಎಂಬ ನಿಬಂಧವನ್ನು ಡಾ.ಟಿ.ವಿಜಯ್ ಪೂಣಚ್ಚ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್.ಪದವಿಗಾಗಿ ಸಮಾಜವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Revina

ಸ್ಥಳ : ವಿದ್ಯಾರಣ್ಯ

ದಿನಾಂಕ : 10.10.08

ರೇವಿಣ ಡಿ.ಜಿ.
ಸಂಶೋಧಕಿ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಕೃತಜ್ಞತೆಗಳು

ನಿಬಂಧವನ್ನು ಸಿದ್ಧಪಡಿಸಲು ಸೂಕ್ತ ಸಲಹೆಗಳೊಂದಿಗೆ ಮಾರ್ಗದರ್ಶನ ನೀಡಿದ ಪ್ರೊ.ಟಿ.ವಿಜಯ್ ಪೂಣಚ್ಚ ಅವರಿಗೆ ಕೃತಜ್ಞತೆಗಳನ್ನು ಅರ್ಪಿಸುತ್ತಿದೇನೆ. ನಿಬಂಧದ ಅಧ್ಯಯನಕ್ಕೆ ಎಲ್ಲಾ ರೀತಿಯ ನೆರವು ನೀಡಿದ ಚರಿತ್ರೆ ವಿಭಾಗದ ಮುಖ್ಯಸ್ಥರಾದ ಡಾ.ವಿರೂಪಾಕ್ಷಿ ಪೂಜಾರಹಳ್ಳಿ ಅವರಿಗೆ ಕೃತಜ್ಞತೆಗಳು. ಅಧ್ಯಯನದ ಅವಧಿಯಲ್ಲಿ ವಿವಿಧ ಆಯಾಮಗಳನ್ನು ಪರಿಚಯಿಸಿದ ಪ್ರೊ.ಲಕ್ಷ್ಮಣ್ ತೆಲಗಾವಿ, ಪ್ರೊ.ಸಿ.ಆರ್.ಗೋವಿಂದರಾಜು, ಡಾ.ಕೆ.ಮೋಹನಕೃಷ್ಣ ರೈ, ಡಾ.ಚಿನ್ನಸ್ವಾಮಿ ಸೋಸಲೆ ಅವರುಗಳಿಗೆ ಕೃತಜ್ಞತೆಗಳು ಹಾಗೂ ಜಾನಪದ ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ ಡಾ.ಸ.ಚಿ.ರಮೇಶ ಅವರಿಗೆ ನಾನು ಆಬಾರಿಯಾಗಿರುತ್ತೇನೆ.

ನನ್ನ ಸಂಶೋಧನೆಯನ್ನು ನಡೆಸಲು ಸೂಕ್ತ ವಾತಾವರಣವನ್ನು ಕಲ್ಪಿಸಿದ ಮಾನ್ಯ ಕುಲಪತಿಗಳಿಗೆ, ಕುಲಸಚಿವರಿಗೆ, ಅಧ್ಯಯನಾಂಗದ ನಿರ್ದೇಶಕರಿಗೆ ಹಾಗೂ ಗ್ರಂಥಾಲಯದ ಸಿಬ್ಬಂಧಿಗಳಿಗೆ ನನ್ನ ಕೃತಜ್ಞತೆಗಳು.

ನಿಬಂಧಕ್ಕೆ ಸಂಬಂಧಿಸಿದ ಸೂಕ್ತ ಕೃತಿಗಳನ್ನು ನೀಡಿ ಸಹಕರಿಸಿದ ಡಾ.ಜೆ.ಕೆ.ರಮೇಶ, ಡಾ.ಸೋಮಶೇಖರ್, ಡಾ.ಗಣಪತಿ ಅವರಿಗೆ ನನ್ನ ಕೃತಜ್ಞತೆಗಳು.

ನಿಬಂಧಕ್ಕೆ ಸಂಬಂಧಿಸಿದ ಮಾಹಿತಿಯನ್ನು ಒದಗಿಸಿ ಕೊಟ್ಟ ಶ್ರೀ ದಯಾನಂದ ಕಡಿದಾಳ್, ಶ್ರೀ ವಿಶ್ವನಾಥ ಕಡಿದಾಳ ಅವರ ಸಹಕಾರವನ್ನು ನೆನೆಯುತ್ತೇನೆ. ಹಾಗೂ ನಿಬಂಧ ರಚಿಸುವಲ್ಲಿ ಸಹಕಾರ ನೀಡಿದ ರಾಘುವೇಂದ್ರ ಸಿ.ಎಸ್., ಗುರುರಾಜ ಅ.ಮೊಗಳಿ ಅವರಿಗೆ ಮತ್ತು ನನ್ನ ಮಿತ್ರ ವೃಂದದವರಿಗೆ ನನ್ನ ಕೃತಜ್ಞತೆಗಳು.

ನಮ್ಮೆನ್ನಗಲಿ ಚಿರಸ್ಮರಣೆಯಲ್ಲಿ ಉಳಿದಿರುವ ನನ್ನ ಪ್ರೀತಿಯ ಅಣ್ಣನಾದ ರವೀಂದ್ರನಿಗೆ, ಸದಾ ಮಗಳ ಏಳ್ಗೆಯನ್ನು ಬಯಸುವ ತಂದೆ ತಾಯಿಯವರಾದ ಗಿಡ್ಡಯಗೌಡ ಮತ್ತು ಪದ್ಮಾವತಿ ಅವರಿಗೆ, ನನ್ನ ಪ್ರೀತಿಯ ಅಣ್ಣಂದಿರಾದ ಉದಯ್, ಯೋಗೇಂದ್ರ ಅವರಿಗೆ ಮತ್ತು ಮಾವನಾದ ಸುಬ್ರಹ್ಮಣ್ಯ ಅವರಿಗೆ ಹಾಗೂ ದೇವಿಕಾನ್ ಕುಟುಂಬ ವರ್ಗದವರಿಗೆ ನನ್ನ ಕೃತಜ್ಞತೆಗಳು. ಹಾಗೂ ಅಕ್ಷರ ಸಂಯೋಜಿಸಿದ ಶ್ರೀಮತಿ ಬಿ.ರಶ್ಮಿಕೃಪಾಶಂಕರ್ ಅವರಿಗೆ ಕೃತಜ್ಞತೆಗಳು.

ರೇವಿಣ ಡಿ.ಜಿ.

# ಪರಿವಿಡಿ

ಕಡಿದಾಳ್ ಮಂಜಪ್ಪನವರು ೧೯೫೬ನೇ ಇಸವಿಯಲ್ಲಿ ಕರ್ನಾಟಕದ (ಮೈಸೂರು ರಾಜ್ಯದ) ಮುಖ್ಯಮಂತ್ರಿಗಳಾಗಿ ವಿಧಾನಸೌಧವನ್ನು ಉದ್ಘಾಟಿಸಿರುವ ಕಾರಣಕ್ಕಾಗಿ ಅವರ ವ್ಯಕ್ತಿತ್ವವನ್ನು ಹಾಗೂ ಅವರ ಹೋರಾಟದ ಮಾರ್ಗಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಅಭ್ಯಸಿಸುತ್ತಿಲ್ಲ. ಮಂತ್ರಿಯಾಗಿ ಅವರನ್ನು ಅರ್ಥ ಮಾಡಿಕೊಳ್ಳುವುದಕ್ಕಿಂತ ಮಿಗಿಲಾಗಿ ಅವರನ್ನು ಮಲೆನಾಡಿನ ಒಬ್ಬ ಅಭೂತಪೂರ್ವ ರೈತ ಹೋರಾಟಗಾರರಾಗಿ, ಗೇಣಿದಾರರ ನಾಯಕರಾಗಿ, ಭೂಸುಧಾರಣಾ ರೂವಾರಿಯಾಗಿ, ಅವರು ಕೈಗೊಂಡ ಭೂಹೋರಾಟಗಳ ಮಾದರಿಗಳು ಅಧ್ಯಯನ ಯೋಗ್ಯವಾಗಿವೆ. ೧೯೪೫ರಲ್ಲಿ ಮಲೆನಾಡಿನ ತೀರ್ಥಹಳ್ಳಿ, ಹೊಸನಗರ ಮತ್ತು ಸಾಗರ ತಾಲೂಕುಗಳ ವ್ಯಾಪ್ತಿಗೆ ಒಳಪಟ್ಟ ಗೇಣಿದಾರರ ಹಿತರಕ್ಷಣೆಗಾಗಿ ಮಂಜಪ್ಪನವರು ಸ್ಥಾಪಿಸಿದ **'ಮಲೆನಾಡಿನ ಗೇಣಿದಾರರ ಸಂಘ'** ಈ ನಿಟ್ಟಿನಲ್ಲಿ ಮಹತ್ವಪೂರ್ಣ ವಿಚಾರವಾಗಿದೆ. ೧೯೪೭ರಲ್ಲಿ ಮಲೆನಾಡು ಗೇಣಿದಾರ ಸಂಘದ ಸಮ್ಮೇಳನವನ್ನು ಮಂಜಪ್ಪನವರು ಸಾಗರದಲ್ಲಿ ಯಶಸ್ವಿಯಾಗಿ ಸಂಘಟಿಸಿರುವುದು ಅವರ ಕಾರ್ಯಕ್ಷಮತೆಗೆ ಸಾಕ್ಷಿಯಾಗಿದೆ. ಈ ಸಮ್ಮೇಳನವನ್ನು ಕಮಲಾದೇವಿ ಚಟ್ಟೋಪಾಧ್ಯಾಯರು ಉದ್ಘಾಟಿಸಿದರು. ಇದರಲ್ಲಿ ಸುಪ್ರಸಿದ್ಧ ಸಮಾಜವಾದಿ ನಾಯಕ ರಾಮಾನಂದ ಮಿಶ್ರಾ ಅವರು ಮುಖ್ಯ ಅತಿಥಿಗಳಾಗಿದ್ದರು. ಈ ಹೋರಾಟಗಳೆಲ್ಲವನ್ನು ಸ್ವಾತಂತ್ರ್ಯಪೂರ್ವ ಕಾಲದಲ್ಲಿ ಸಂಘಟಿಸಿರುವುದು ಇಲ್ಲಿ ಬಹಳ ಮುಖ್ಯವಾಗಿ ಗಮನಿಸಬೇಕಾದ ಅಂಶವಾಗಿದೆ. ಕರ್ನಾಟಕದ ಸ್ವಾತಂತ್ರಪೂರ್ವ ಭೂಹೋರಾಟಗಳ ಅಧ್ಯಯನಗಳ ಸಂದರ್ಭದಲ್ಲಿ ಕಡಿದಾಳ್ ಮಂಜಪ್ಪನವರ ಗೇಣಿದಾರರ ಹೋರಾಟಗಳ ಅಧ್ಯಯನ ಮುಖ್ಯವಾಗುತ್ತದೆ.

ಮಲೆನಾಡ ಗೇಣಿದಾರರ ಸಂಘಟನೆಯೊಂದಿಗೆ ಸಾಗರ ತಾಲ್ಲೂಕಿಗೆ ಸೀಮಿತವಾಗಿರುವಂತೆ ಪ್ರತ್ಯೇಕವಾದ 'ಸಾಗರ ತಾಲ್ಲೂಕು ರೈತಸಂಘವನ್ನು ಕಡಿದಾಳ್‌ರ ನೇತೃತ್ವದಲ್ಲಿ ಗಣಪತಿಯಪ್ಪನವರು ೧೯೪೮ರಲ್ಲಿ ಸ್ಥಾಪಿಸಿದರು. ಇದನ್ನೇ ಮುಂದೆ 'ಮಲೆನಾಡ ರೈತ ಸಂಘವಾಗಿ' ಪರಿವರ್ತನೆಗೊಳಿಸಿದ್ದು ಮಹತ್ವದ್ದೆನಿಸಿದೆ. ಇಲ್ಲಿಯ ಸಂಘಟನೆಗಳ ನಾಯಕತ್ವ ಕಡಿದಾಳ್‌ರು ವಹಿಸಿಕೊಂಡು ಕಾಗೋಡು ಚಳುವಳಿಯಲ್ಲಿ ಸರ್ಕಾರದ ವಿರುದ್ಧವಾಗಿ ಸತ್ಯಾಗ್ರಹದಲ್ಲಿ ಭಾಗಿಯಾಗಿದ್ದ ವಿಚಾರ ಗಮನಾರ್ಹವಾದದ್ದು. ಈ ಎಲ್ಲ ಸಂಘಟನೆಗಳನ್ನು ಮತ್ತು ಹೋರಾಟಗಳನ್ನು ಕಡಿದಾಳ್‌ರು ಗಾಂಧಿತತ್ವಕ್ಕೆ ನಿಷ್ಠರಾಗಿದ್ದುಕೊಂಡು ಅದೇ ಮಾದರಿಯಲ್ಲಿ ಹೋರಾಟ ಮಾಡಿರುವುದು ಮುಖ್ಯವಾಗಿದೆ. ಕಡಿದಾಳ್‌ರು ಕೈಗೊಂಡ ಕಾಗೋಡು ಚಳುವಳಿಯು ಮುಂದೆ ಕರ್ನಾಟಕದಲ್ಲಿ ಭೂಸುಧಾರಣೆಯು ರೂಪುಗೊಳ್ಳಲು ಸ್ಫೂರ್ತಿಯಾಯಿತು.

೧೯೩೪ರಲ್ಲಿ ವಕೀಲರಾಗಿ ತಮ್ಮ ವೃತ್ತಿಯನ್ನು ಆರಂಭಿಸಿದ ಕಡಿದಾಳ್ ಮಂಜಪ್ಪನವರು ೧೯೩೭ರಲ್ಲಿ ಜಿಲ್ಲಾ ಕಾಂಗ್ರೆಸಿನ ಕಾರ್ಯದರ್ಶಿಯಾಗಿದ್ದರು. ಈ ಸಮಯದಲ್ಲಿ ಮೊಹರೆ

ಹನುಮಂತರಾಯರು, ಡಾ. ಹರ್ಡೇಕರ್ ಮಂಜಪ್ಪ, ಪಾರ್ಥನಾರಾಯಣ ಮತ್ತು ಮಾಧವರಾಯರ ಪ್ರಭಾವಕ್ಕೆ ಅವರು ಒಳಗಾಗಿದ್ದರು.[೯] ಇದೇ ಸಮಯದಲ್ಲಿ ಅರಣ್ಯ ಸತ್ಯಾಗ್ರಹದಲ್ಲಿ ಪಾಲ್ಗೊಂಡಿರುವ ವಿಚಾರ ಗಮನಾರ್ಹವಾದದ್ದು. ೧೯೪೧ರಲ್ಲಿ ಮೈಸೂರು ರಾಜ್ಯದ ಪ್ರಜಾಪ್ರತಿನಿಧಿ ಸಭೆಗೆ ತೀರ್ಥಹಳ್ಳಿ ಕ್ಷೇತ್ರದಿಂದ ಆಯ್ಕೆಯಾದ ಕಡಿದಾಳ್ ಮಂಜಪ್ಪನವರು ೧೯೪೨ರಲ್ಲಿ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿ ಸೆರೆಮನೆ ವಾಸವನ್ನು ಅನುಭವಿಸಿದರು. ೧೯೪೨ರಲ್ಲಿ ಮೈಸೂರು ರಾಜ್ಯದ ನ್ಯಾಯ ವಿಧೇಯಕ ಸಭೆಗೆ[೬] ಶಿವಮೊಗ್ಗ ಜಿಲ್ಲೆಯಿಂದ ಅವಿರೋಧವಾಗಿ ಆಯ್ಕೆಯಾದರು. ೧೯೫೨ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ತೀರ್ಥಹಳ್ಳಿ ಕ್ಷೇತ್ರದಿಂದ ಆಯ್ಕೆಯಾಗಿ, ಕೆಂಗಲ್ ಹನುಮಂತಯ್ಯನವರ ಸಂಪುಟದಲ್ಲಿ ಮಂತ್ರಿಯಾಗಿದ್ದರು. ಅವರಿಗೆ ಕಂದಾಯ ಇಲಾಖೆ, ಮುಜರಾಯಿ, ಲೋಕೋಪಯೋಗಿ ನೀರಾವರಿ, ಸರ್ಕಾರಿ ನೌಕರರ ನೇಮಕ ಸ್ಟ್ಯಾಂಪ್, ರಿಜಿಸ್ಟ್ರೇಷನ್ ಇಲಾಖೆ, ಲಂಚ ವಿರೋಧ ಇಲಾಖೆ, ಕ್ಷಾಮ ನಿವಾರಣೆ ಇಲಾಖೆಗಳನ್ನು ಕಡಿದಾಳ್‌ರಿಗೆ ವಹಿಸಿದ್ದರು. ಈ ಸಂದರ್ಭದಲ್ಲಿ ಅವರು ತಂದ ಅನೇಕ ಆಡಳಿತಾತ್ಮಕ ಸುಧಾರಣೆಗಳು ಸುಭದ್ರ ಕರ್ನಾಟಕವನ್ನು ಕಟ್ಟಲು ಸಾಧ್ಯವಾಯಿತು. ಅವುಗಳಲ್ಲಿ ಮುಖ್ಯವಾಗಿ ೧೯೫೨ರಿಂದ ೧೯೫೬ರವರೆಗೆ ರೆವಿನ್ಯೂ ಮತ್ತು ರಿವಿಜನ್ ಪ್ರಕರಣಗಳಲ್ಲಿ ಅವರೇ ನ್ಯಾಯಧೀಶರಾಗಿ ಅನೇಕ ತೀರ್ಪುಗಳನ್ನು ನೀಡಿದ್ದಾರೆ. ತೀರ್ಪು ನೀಡುವುದರಲ್ಲಿ ಯಾವುದೇ ರಾಜಕೀಯ ಪ್ರಭಾವ ಬಂದರೂ ಕೂಡ ಯಾರ ಪ್ರಭಾವಕ್ಕೂ ಒಳಗಾಗದೆ ನ್ಯಾಯಯುತವಾದ ತೀರ್ಪನ್ನು ನೀಡಿದ್ದಾರೆಂಬುದು ಮಹತ್ವದ ವಿಚಾರ.

ಕಾಯ್ದೆ, ಕಾನೂನುಗಳಲ್ಲಿ ನಂಬಿಕೆ ಇಟ್ಟಿದ್ದ ಕಡಿದಾಳ್‌ರು ಕಂದಾಯ ಮಂತ್ರಿಯಾದ ಸಂದರ್ಭದಲ್ಲಿ ರಾಷ್ಟ್ರೀಯ ಕಾಂಗ್ರೆಸಿನ ನೀತಿಯ ಆಧಾರದಲ್ಲಿ ಭೂಸುಧಾರಣೆಯನ್ನು ಜಾರಿಗೊಳಿಸಿದರು. ಪರಿಣಾಮವಾಗಿ ದೇವದಾಯ, ಧರ್ಮದಾಯ, ಇನಾಂಗಳು ರದ್ದಾದವು. ಈ ಕ್ರಮವು ಶೃಂಗೇರಿ ಪೀಠವನ್ನು ಅಲ್ಲಾಡಿಸಿತು.[೭]

ಯಾವುದೇ ಪ್ರಭಾವಕ್ಕೆ ಅವರು ಜಗ್ಗದೆ ಕ್ರಾಂತಿಕಾರಿ ಕ್ರಮ ಕೈಗೊಂಡಿರುವುದು ಅವರ ದಕ್ಷತೆಗೆ ಸಾಕ್ಷಿಯಾಗಿದೆ. ೧೯೫೩ರಲ್ಲಿ ಕೃಷ್ಣರಾಜಸಾಗರ ಜಲಾಶಯದ ನೀರಿನ ಮಟ್ಟ ಕುಸಿದು ಹೋಗಿತ್ತು. ಇದರಿಂದ ಮಂಡ್ಯದ ರೈತರಿಗೆ ಬೇಸಿಗೆ ಬೆಳೆ ಬೆಳೆಯಲು ನೀರಿರಲಿಲ್ಲ. ಮದ್ರಾಸಿನ ಮುಖ್ಯ ಮಂತ್ರಿಗಳಾದ ರಾಜಾಜಿ ಅವರಿಗೆ ಸಮಸ್ಯೆಗಳನ್ನು ವಿವರಿಸಿ ಒಂದು ವಾರದ ಮಟ್ಟಿಗೆ ಮಾತ್ರ ನೀರನ್ನು ತಡೆ ಹಿಡಿದು ಮಂಡ್ಯ ರೈತರಿಗೆ ನೀರನ್ನು ಒದಗಿಸುವಲ್ಲಿ ಮಹತ್ವದ ಪಾತ್ರ ವಹಿಸಿದರು. ಇವರ ಅಧಿಕಾರಾವಧಿಯಲ್ಲಿ ಹೆಚ್ಚಿನದಾಗಿ ರೈತಪರ ಸುಧಾರಣೆಯನ್ನು ಮಾಡಿದ್ದಾರೆ. ನಂತರ ೧೯೫೬ರಲ್ಲಿ ಅಂದಿನ ಮೈಸೂರು ರಾಜ್ಯದ ಮುಖ್ಯಮಂತ್ರಿಗಳಾಗಿ ಕಾರ್ಯ ನಿರ್ವಹಿಸಿದರು. ಈ ಹಿನ್ನೆಲೆಯಲ್ಲಿ ಕಡಿದಾಳ್ ಮಂಜಪ್ಪನವರನ್ನು ಮಲೆನಾಡಿನ ಭೂಹೋರಾಟಗಳು ಕಾಂಗ್ರೆಸ್ ಚಳುವಳಿ ಮತ್ತು ಕಂದಾಯ ಮಂತ್ರಿಗಳಾಗಿ ಮಾಡಿದ ಸುಧಾರಣೆಗಳ ಮೂಲಕ ರೆವಿನ್ಯೂ ಬೋರ್ಡ್ ರಚನೆ, ಮೈಸೂರು ಗೇಣಿ ಶಾಸನ, ಮೈಸೂರು ಇನಾಂ

ರದ್ಧತಿ ಶಾಸನ ಕಾಯ್ದೆ, ೧೯೬೧ರಲ್ಲಿ ಜಾರಿಗೆ ತಂದ ಕರ್ನಾಟಕ ಭೂಸುಧಾರಣಾ ಮಸೂದೆಯನ್ನು ಅರ್ಥ ಮಾಡಿಕೊಳ್ಳುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

## ಅಧ್ಯಯನದ ಉದ್ದೇಶ

ಕಡಿದಾಳ್ ಮಂಜಪ್ಪನವರ ವ್ಯಕ್ತಿತ್ವವನ್ನು ಮತ್ತು ರೈತಪರ ಹೋರಾಟದ ಸಂದರ್ಭದಲ್ಲಿ ಕಂಡುಕೊಂಡ ನಿಲುವು ಮತ್ತು ವಿಶಿಷ್ಟತೆಯನ್ನು ಸೂಕ್ಷ್ಮವಾಗಿ ದೊರೆತಂತ ಆಧಾರಗಳ ಹಿನ್ನೆಲೆಯಲ್ಲಿ ಪರಿಶೀಲಿಸಲಾಗಿದೆ.

ಕಡಿದಾಳ್ ಮಂಜಪ್ಪನವರ ಭೂಸುಧಾರಣೆ ಕುರಿತಂತೆ ಸಂಶೋಧನ ಬರಹಗಳ ಚರ್ಚೆ ವ್ಯಾಪಕವಾಗಿಲ್ಲ. ಈಗಾಗಲೇ ಅಲ್ಲಲ್ಲಿ ಇವರ ಕುರಿತಂತೆ ಅಧ್ಯಯನವಾಗಿದ್ದರೂ ಕೂಡ ಅವುಗಳ ಗಂಭೀರವಾದ ವಿಮರ್ಶೆ ನಡೆದಿಲ್ಲ. ಇವರ ನಾಯಕತ್ವದಲ್ಲಿ ನಡೆದ ಭೂಹೋರಾಟಗಳ ಸತ್ಯಾಸತ್ಯತೆಗಳನ್ನು ಸಭೆ ಸಮಾರಂಭಗಳಲ್ಲಿ, ಭಾಷಣಗಳಲ್ಲಿ, ಲೇಖನಗಳಲ್ಲಿ, ಸ್ವರಚಿತ ಪುಸ್ತಕಗಳಲ್ಲಿ ಮಾತ್ರ ನೋಡುವಂತಾಗಿದೆ. ಕಡಿದಾಳ್ ಮಂಜಪ್ಪನವರನ್ನು ಕೇಂದ್ರ ಬಿಂದುವನ್ನಾಗಿರಿಸಿಕೊಂಡು ನಡೆದಿರುವ ಸಂಶೋಧನೆಗಳ ಬರವಣಿಗೆಗಳು ವಿರಳ. ಭೂಹೋರಾಟ ಕುರಿತಂತೆ ಅಲ್ಲಲ್ಲಿ ಕೆಲವು ಬರಹಗಳು ಪ್ರಕಟವಾದರೂ ಅವುಗಳ ಸಮಗ್ರ ಅಧ್ಯಯನವಾಗಿಲ್ಲ. ಇಲ್ಲಿಯವರೆಗೂ ಪ್ರಕಟಗೊಂಡಿರುವ ಕೃತಿಗಳು ಕಡಿದಾಳ್‌ರ ರಾಜಕೀಯ ಅಂಶಗಳ ಬಗ್ಗೆ ಹಾಗೂ ಅವರ ನಾಯಕತ್ವದಲ್ಲಿ ನಡೆದ ಭೂಹೋರಾಟ ಮತ್ತು ಭೂಸುಧಾರಣೆಯ ಬಗ್ಗೆ ಬಿಡಿಬಿಡಿಯಾಗಿ ಬಂದಿವೆ. ಈ ಹಿನ್ನೆಲೆಯಲ್ಲಿ ಒಂದು ಆಮೂಲಾಗ್ರವಾದ ಅಧ್ಯಯನ ಅಗತ್ಯವಿರುವುದರಿಂದ ಪ್ರಸ್ತುತ ಈ ಹಿನ್ನೆಲೆಯಲ್ಲಿ ಮಂಜಪ್ಪನವರ ಸಾಮಾಜಿಕ, ಆರ್ಥಿಕ ಮತ್ತು ಸೈದ್ಧಾಂತಿಕ ನಿಲುವುಗಳೊಂದಿಗೆ ಮಲೆನಾಡಿನ ಭಾಗದಲ್ಲಿ ಜಮೀನ್ದಾರರು ಗೇಣಿದಾರರನ್ನು ಶೋಷಣೆಗೆ ಒಳಪಡಿಸಿದಂತಹ ಅಂಶಗಳನ್ನು ಅವಲೋಕಿಸುವ ಉದ್ದೇಶಗಳನ್ನು ಪ್ರಸ್ತುತ ಅಧ್ಯಯನವು ಒಳಗೊಂಡಿದೆ. ಕಡಿದಾಳ್‌ರು ಒಬ್ಬ ಗೇಣಿದಾರರ ಮಗನಾಗಿ ಭೂ ಮಾಲೀಕ ವ್ಯವಸ್ಥೆಯಿಂದಾಗುವ ಅನ್ಯಾಯಗಳನ್ನು ಪ್ರತಿಭಟಿಸಿದ ಹಾಗೂ ಜೀವನವಿಡಿ ಭೂಹೋರಾಟಕ್ಕೆಂದು ಶ್ರಮಿಸಿದ ಮಂಜಪ್ಪನವರ ಕಾರ್ಯಕ್ಷಮತೆಯನ್ನು ವಿಮರ್ಶಾತ್ಮಕವಾಗಿ ಚರ್ಚಿಸುವ ಉದ್ದೇಶವನ್ನು ಇಲ್ಲಿ ಇಟ್ಟುಕೊಳ್ಳಲಾಗಿದೆ.

## ಅಧ್ಯಯನದ ವ್ಯಾಪ್ತಿ ಮತ್ತು ವಿಧಿ-ವಿಧಾನಗಳು

ಈ ಅಧ್ಯಯನವು ಕಡಿದಾಳ್ ಮಂಜಪ್ಪನವರ ಭೂಹೋರಾಟಕ್ಕೆ ಸಂಬಂಧಿಸಿದ ಚಿಂತನೆಗಳನ್ನು ಮಾತ್ರ ದಾಖಲಿಸಿ ವಿಮರ್ಶಾತ್ಮಕವಾಗಿ ವಿಶ್ಲೇಷಣೆ ನಡೆಸುವಂತದ್ದು. ಅಲ್ಲದೇ ಸಮಕಾಲೀನ ಸಂದರ್ಭದಲ್ಲಿ ಎಲ್ಲಾ ಆಗು-ಹೋಗುಗಳ ನಡುವೆ ತೌಲನಿಕವಾಗಿ ವಿಶ್ಲೇಷಣೆ ಮಾಡಲು ಪ್ರಯತ್ನಿಸುವಂತದ್ದು. ಹೀಗಾಗಿ ಕಡಿದಾಳ್ ಅವರ ಭೂಹೋರಾಟ ಚಿಂತನೆ ಕುರಿತು ನೇರವಾಗಿ ಹಾಗೂ ಪೂರಕವಾಗಿ ದೊರೆಯುವ ಎಲ್ಲಾ

ಬಗೆಯ ಪ್ರಾಥಮಿಕ ಹಾಗೂ ಇತರ ಆಕರ ಸಾಮಗ್ರಿಗಳನ್ನು ಇಲ್ಲಿ ಬಳಸಿಕೊಳ್ಳಲಾಗುವುದು. ಈ ಹಿನ್ನೆಲೆಯಲ್ಲಿ ರಾಜ್ಯದ ಪತ್ರಾಗಾರಗಳು, ಕಡತಗಳು ಸರ್ಕಾರಿ ಹಾಗೂ ಖಾಸಗಿ ಗ್ರಂಥಾಲಯಗಳಲ್ಲಿನ ಗ್ರಂಥಗಳು, ಸಂಘ ಸಂಸ್ಥೆಗಳಲ್ಲಿನ ದಾಖಲಾತಿ ಪತ್ರಗಳನ್ನು ಮತ್ತು ಸಂದರ್ಶನ ಆಧಾರಿಸಿದ ಮಾಹಿತಿಗಳನ್ನು ಬಳಸಿಕೊಳ್ಳಲಾಗಿದೆ. ಸಂಗ್ರಹಿಸಿದ ಮಾಹಿತಿ ವಿವರಗಳನ್ನು ಚರಿತ್ರೆಯ ಶಿಸ್ತಿನ ವಿಧಿ ವಿಧಾನಗಳ ಮೂಲಕ ವಿಶ್ಲೇಷಿಸುವ ಪ್ರಯತ್ನವೊಂದನ್ನು ಇಲ್ಲಿ ಮಾಡಲಾಗಿದೆ.

## ಅಧ್ಯಯನದ ಸ್ವರೂಪ

ಕಡಿದಾಳ್ ಮಂಜಪ್ಪನವರು ಕೈಗೊಂಡ ಭೂಹೋರಾಟಗಳನ್ನು ಕುರಿತು ವಿಶ್ಲೇಷಿಸುವುದೇ ಈ ಅಧ್ಯಯನದ ಸ್ವರೂಪವಾಗಿದೆ. ಪ್ರಸ್ತುತ ಅಧ್ಯಯನವು ಐದು ಅಧ್ಯಾಯಗಳನ್ನು ಒಳಗೊಂಡಿದೆ.

ಮೊದಲನೆಯ ಅಧ್ಯಾಯವು ಪ್ರಸ್ತಾವನೆ, ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ವಿಧಿ ವಿಧಾನಗಳನ್ನು ಹಾಗೂ ಮಿತಿಗಳನ್ನು ಕುರಿತದ್ದಾಗಿದೆ. ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಮಲೆನಾಡಿನ ಭೌಗೋಳಿಕ ಹಿನ್ನೆಲೆ ಭೂಹೋರಾಟಕ್ಕೆ ಹೇಗೆ ಕಾರಣವಾಯಿತು ಎಂಬುದರ ವಿವರವನ್ನು, ಹಾಗೆಯೇ ಸ್ವಾತಂತ್ರ್ಯಪೂರ್ವದಲ್ಲಿನ ಮಲೆನಾಡಿನ ಭೂಹೋರಾಟಗಳ ಕುರಿತು ಅಧ್ಯಯನ ಮಾಡಲಾಗಿದೆ.

ಎರಡನೆಯ ಅಧ್ಯಾಯವು ವ್ಯಕ್ತಿ ಪರಿಚಯವನ್ನು ಮತ್ತು ಭೂಹೋರಾಟಕ್ಕೆ ಪ್ರೇರಣೆ ನೀಡಿದ ಮಲೆನಾಡಿನ ಸಾಮಾಜಿಕ, ಆರ್ಥಿಕ ಕಾರಣಗಳು, ಶಾಲಾ ಕಾಲೇಜುಗಳ ದಿನದಲ್ಲಿ ಕಡಿದಾಳ್‌ರ ಮೇಲೆ ಪ್ರಭಾವ ಬೀರಿದ ಮಹಾನ್ ವ್ಯಕ್ತಿಗಳಿಂದ ಸೈದ್ಧಾಂತಿಕವಾಗಿ ರೂಪುಗೊಂಡಿರುವ ಕುರಿತಂತೆ, ನಂತರದ ವೃತ್ತಿ ಜೀವನ, ಸಮಕಾಲೀನ ಘಟ್ಟದಲ್ಲಿ ನಡೆದಂತ ಭೂಹೋರಾಟದಿಂದ ಪ್ರೇರಣೆಗೊಂಡ ಅಂಶಗಳ ಕುರಿತಂತೆ ಹಾಗೂ ಮೈಸೂರು ಕಾಂಗ್ರೆಸ್‌ನೊಂದಿಗಿನ ಸಂಬಂಧ, ಅದರ ಮೂಲಕ ರಾಜಕಾರಣ ಪ್ರವೇಶ ಮಾಡಿದ್ದು, ನಂತರ ಹಲವು ಖಾತೆಗಳ ಮಂತ್ರಿ ಪದವಿಗಳನ್ನು ಪಡೆದು ಆಡಳಿತ ನಡೆಸಿದ್ದನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಮೂರನೆಯ ಅಧ್ಯಾಯವು ಕಡಿದಾಳ್ ಮಂಜಪ್ಪನವರು ಗೇಣಿದಾರರ ಸಂಘಟನೆಗೋಸ್ಕರ ಕೈಗೊಂಡಂತಹ ಕ್ರಮಗಳನ್ನು ಕುರಿತಂತೆ ತಿಳಿಸಲಾಗಿದೆ. ಈ ಸಂಘಟನೆಗಳ ಮೂಲಕ ಕಾಗೋಡು ಚಳುವಳಿಯನ್ನು ಕಡಿದಾಳ್‌ರ ನಾಯಕತ್ವದಲ್ಲಿ ನಡೆಸಿರುವುದನ್ನು ಚರ್ಚಿಸಲಾಗಿದೆ. ಇದರಲ್ಲಿ ಸಮಾಜವಾದಿಗಳ ಭಾಗವಹಿಸುವಿಕೆಯನ್ನು ಕುರಿತು ಚರ್ಚಿಸಲಾಗಿದೆ. ಚಳುವಳಿಯಲ್ಲಿ ಪತ್ರಿಕೆಯ ಪಾತ್ರ ಹಾಗೂ ಕ್ಷೇತ್ರಕಾರ್ಯದಲ್ಲಿ ಕೈಗೊಂಡ ಸಂದರ್ಶನಕಾರರ ಅಭಿಪ್ರಾಯವನ್ನು ದಾಖಲು ಮಾಡಲಾಗಿದೆ.

ನಾಲ್ಕನೆಯ ಅಧ್ಯಾಯವು ಕಡಿದಾಳ್ ಮಂಜಪ್ಪನವರು ಕಾಗೋಡು ಚಳವಳಿಯ ನಂತರ ಗೇಣಿದಾರರಿಗೆ ಅನುಕೂಲವಾಗುವಂತೆ ಮಾಡಿದಂತಹ ಭೂಸುಧಾರಣೆಯನ್ನು ಕುರಿತಂತೆ ಅಧ್ಯಯನ

ನಡೆಸಲಾಗಿದೆ. ಇಲ್ಲಿ ಪ್ರಮುಖವಾಗಿ ೧೯೫೨ರಿಂದ ೧೯೬೧ರವರೆಗೆ ಕಡಿದಾಳರು ಕಂದಾಯ ಮಂತ್ರಿಯಾಗಿ ಭೂಮಾಲೀಕರು ಮತ್ತು ರೈತರ ನಡುವಿನ ಸಮಸ್ಯೆ ಇತ್ಯಾರ್ಥಪಡಿಸಲು ಮೈಸೂರು ಗೇಣಿಶಾಸನ, ಧರ್ಮದಾಯ, ದೇವಾದಾಯ ಇನಾಂ ರದ್ಧತಿ ಶಾಸನಗಳು, ೧೯೬೧ರ ಭೂಸುಧಾರಣಾ ಕಾಯ್ದೆಯ ಅಂಶವನ್ನು ಚರ್ಚಿಸಲಾಗುವುದು. ರೆವಿನ್ಯೂ ಬೋರ್ಡ್ ರಚನೆಯ ಬಗ್ಗೆ ವಿವರಣೆಯನ್ನು ನೀಡಲಾಗಿದೆ.

ಹಾಗೆಯೇ ಕೊನೆಯ ಅಧ್ಯಾಯದಲ್ಲಿ (ಐದನೆಯ) ಪ್ರಸ್ತುತ ಅಧ್ಯಯನದಿಂದ ತಳೆದ ನಿಲುವುಗಳನ್ನು ಸಮಾರೋಪದಲ್ಲಿ ವಿವರಿಸಲಾಗಿದೆ.

## ೧.೧. ಚರಿತ್ರೆ ಬರವಣಿಗೆ ಕ್ರಮಗಳು

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ಬಂದಂತಹ ಕೃತಿಗಳು ವಿರಳ. ಆದರೆ ಕಡಿದಾಳ್‌ರ ಜೀವನ ಮತ್ತು ಅವರ ಸಾಧನೆಗಳನ್ನು ಕುರಿತಂತೆ ಮಲೆನಾಡಿನ ಭೂಹೋರಾಟ ಮತ್ತು ಒಟ್ಟಾರೆಯಾಗಿ ಭೂಸುಧಾರಣೆಯ ಮಾಹಿತಿ ನೀಡುವ ಸಾಕಷ್ಟು ಗ್ರಂಥಗಳು ಲಭ್ಯವಾಗಿವೆ. ಇದಕ್ಕೆ ಪೂರಕವಾಗಿ ಚಾರಿತ್ರಿಕ ಮತ್ತು ಮೌಖಿಕ ಆಕರಗಳೊಂದಿಗೆ ಪ್ರಕಟಿತ ಮತ್ತು ಅಪ್ರಕಟಿತ ಗ್ರಂಥಗಳನ್ನು ಪರಿಶೀಲಿಸಲಾಗಿದೆ. ಈ ಗ್ರಂಥಗಳಲ್ಲಿ ಕಡಿದಾಳರ ಭೂ ಹೋರಾಟದ ಸಾಧನೆಯನ್ನು ಹೆಚ್ಚು ಪ್ರಸ್ತಾಪಿಸಿಲ್ಲದಿರುವುದು ಕಂಡುಬರುತ್ತದೆ. ಮಲೆನಾಡಿನ ಭೂಹೋರಾಟವಾದ ಕಾಗೋಡು ಚಳುವಳಿಯ ಬಗ್ಗೆ ಜನರಿಗೆ ಹೆಚ್ಚು ಪರಿಚಿತವಾಗಿದೆ ಹೊರತು ಚಳುವಳಿಗೆ ಪ್ರೇರಣೆ ನೀಡಿದ ಕಡಿದಾಳ್‌ರ ಸಾಧನೆಗಳು ಮತ್ತು ಭೂಸುಧಾರಣೆಯ ಅಂಶಗಳು ಸೇರದೆ ಹೊರಗುಳಿದಿದೆ. ಆದ್ದರಿಂದ ಅಲ್ಲಲ್ಲಿ ದೊರೆತ ಲೇಖನಗಳು, ಗ್ರಂಥಗಳು, ಸಂದರ್ಶನದಿಂದ ದೊರೆತಂಥ ಮಾಹಿತಿಯನ್ನು ಒಂದೆಡೆ ಕಲೆ ಹಾಕಲು ಪ್ರಯತ್ನಿಸುವುದರ ಜೊತೆಗೆ ಪ್ರಾಥಮಿಕ ಮತ್ತು ಇತರ ಆಕರಗಳಾಗಿ ವಿಭಾಗಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈ ಅಧ್ಯಯನಕ್ಕೆ ಪ್ರಾಥಮಿಕ ಆಕರಗಳಾಗಿ, ಕಡಿದಾಳರ ಆತ್ಮಕಥನವನ್ನು ಕ್ಷೇತ್ರಕಾರ್ಯದಿಂದ ದೊರೆತ ಮಾಹಿತಿ ಮತ್ತು ರಾಜ್ಯ ಪತ್ರಗಾರ ಇಲಾಖೆಗಳಿಂದ ದೊರೆತಂಥ ಆಕರಗಳನ್ನು ಮೂಲ ಮಾಹಿತಿಯನ್ನಾಗಿ ಬಳಸಿಕೊಳ್ಳಲಾಗಿದೆ. ಅಲ್ಲದೆ ಆನುಷಂಗಿಕವಾಗಿ ಪ್ರಕಟಿತ ಚಾರಿತ್ರಿಕ ಅಂಶಗಳ ವಿಮರ್ಶಾ ಲೇಖನಗಳು, ಗ್ರಂಥಗಳು, ಎಂ.ಫಿಲ್. ಮತ್ತು ಪಿಎಚ್.ಡಿ.ಪ್ರಬಂಧಗಳು, ಪತ್ರಿಕೆಗಳ ಮಾಹಿತಿಗಳು, ಕಡಿದಾಳ್‌ರ ಭಾಷಣಗಳನ್ನು, ಅಧ್ಯಯನ ಮಾಡಲಾಗಿದ್ದು, ಇವುಗಳಲ್ಲಿ ಕಡಿದಾಳರ ಭೂಹೋರಾಟಕ್ಕೆ ಸಂಬಂಧಿಸಿದ ವಿಷಯವನ್ನು ಆಯ್ದುಕೊಳ್ಳಲಾಗಿದೆ.

ಕರ್ನಾಟಕ ರಾಜ್ಯ ಪತ್ರಗಾರ ಇಲಾಖೆ, ಬೆಂಗಳೂರು ಇಲ್ಲಿ ದೊರೆತಿರುವಂತಹ ಪ್ರಾಥಮಿಕ ಆಕರಗಳಲ್ಲಿ ಕಡಿದಾಳರು ಕಂದಾಯ ಮಂತ್ರಿಯಾಗಿದ್ದ(೧೯೫೧-೧೯೬೧) ಸಂದರ್ಭದಲ್ಲಿ ಮಂಡಿಸಿದ ಮಸೂದೆಗಳ ಮಾಹಿತಿಯನ್ನು ಒಳಗೊಂಡಿದೆ. ಇಲ್ಲಿ ಪ್ರಮುಖವಾಗಿ ಭೂಸುಧಾರಣೆಯ ಮಸೂದೆಗಳ

ಕುರಿತಂತೆ ನಡೆದಂಥ ಚರ್ಚೆಯ ಅಂಶಗಳು ಕಂಡುಬಂದಿದೆ. "ಮೈಸೂರು ರಾಜ್ಯ ಭೂಸುಧಾರಣ ವಿಧೇಯಕ, ರೇವಿನ್ಯೂ ಮಂತ್ರಿಗಳಾದ ಕಡಿದಾಳ್ ಮಂಜಪ್ಪ ಅವರು ಕೊಟ್ಟ ವಿವರಣೆ"(೧೯೬೧) ಭೂಸುಧಾರಣ ವಿಧೇಯಕದ ಪರಿಶೀಲನಾ ಸಮಿತಿಯ ವಿಧೇಯಕದ ಅಂಶಗಳ ಕುರಿತು ತಿಳಿಸಲ್ಪಟ್ಟಿದೆ.

ಕಡಿದಾಳ್‌ರ 'ಪಂಜರವಳ್ಳಿಯ ಪಂಜು'(೧೯೬೨) ಕಾದಂಬರಿಯು ಮಲೆನಾಡಿನ ಭೂಮಾಲೀಕರ ಸಾಮಾಜಿಕ ಶೋಷಣೆಯನ್ನು ಕುರಿತು ತಿಳಿಸುತ್ತದೆ. ಈ ಗ್ರಂಥವು ಕಡಿದಾಳ್‌ರ ಆತ್ಮಕಥೆಯಂತಿದ್ದು, ಅವರ ಗೇಣಿದಾರಿಕೆ ಜೀವನದ ನೋವು ಮತ್ತು ಅಧಿಕಾರವನ್ನು ಕಾದಂಬರಿ ರೂಪದಲ್ಲಿ ಬರೆದಿರುವುದಾಗಿದೆ. ಸಾಮಾಜಿಕ, ರಾಜಕೀಯ ನೆಲೆಗಳ ಚರಿತ್ರೆಯನ್ನು ದರ್ಶಿಸುವ ಕಾದಂಬರಿಯಾಗಿದ್ದು ಚಿಕ್ಕಹಳ್ಳಿಯ ರಾಜಕಾರಣವನ್ನು ಚಿತ್ರಿಸುವ ಮೂಲಕ ರಾಷ್ಟ್ರ ರಾಜಕಾರಣದ ಸ್ವರೂಪವನ್ನು ಒಳಗೊಂಡಿದೆ.

ಕಡಿದಾಳ್‌ರದೇ ಆದಂತಹ 'ನಾಳೆಯ ನೆಳಲು'(೧೯೬೬) ಮತ್ತು 'ಕಾಂತ್ರಿಕೂಟ'(೧೯೭೫) ಕಾದಂಬರಿಗಳಲ್ಲಿ ರಾಜಕಾರಣವು ಭ್ರಷ್ಟಗೊಳ್ಳುತ್ತಿರುವುದರ ಬಗ್ಗೆ ಬರೆದಿದ್ದಾರೆ. ರೈತರ ಪರವಾದ ಚಿಂತನೆ, ಸಮಾಜದಲ್ಲಿ ನಡೆಯುತ್ತಿರುವ ಕೃತ್ಯಗಳ ಬಗ್ಗೆ ಹಾಗೂ ತನ್ನ ಜೀವನದ ದಿನನಿತ್ಯದ ಅನುಭವಗಳನ್ನು ಕುರಿತ ಮಾಹಿತಿಯನ್ನು ಈ ಕಾದಂಬರಿಗಳು ಒಳಗೊಂಡಿವೆ.

ಮಂಜಪ್ಪನವರ ಬಿಡಿಬರಹಗಳು ಮತ್ತು ಭಾಷಣಗಳು ಒಳಗೊಂಡಿರುವಂಥ ಪ್ರಮುಖ ಅಂಶಗಳೆಂದರೆ ನಮ್ಮ ಸಮಾಜ ಶೋಷಣೆಗೆ ಒಳಗಾಗುತ್ತಿರುವ ಕಾರಣಗಳನ್ನು ಕೊಡುತ್ತಾ ರಾಷ್ಟ್ರದಲ್ಲಿ ತುರ್ತಾಗಿ ನಡೆಯಬೇಕಾಗಿರುವ "ಹೊಸ ಸಾಂಸ್ಕೃತಿಕ ರಾಜಕೀಯ ವಿಚಾರ ಕ್ರಾಂತಿಯ" ಬಗ್ಗೆ ಒತ್ತಿ ಹೇಳಿದ್ದಾರೆ. ರಾಜಕಾರಣಗಳು, ರಾಜಕೀಯ ಪಕ್ಷಗಳು, ಚುನಾವಣೆಗಳು ಜನತೆ ಮುಂತಾದ ಅತಿ ಮುಖ್ಯ ವಿಚಾರಗಳನ್ನು ಪ್ರಸ್ತಾಪಿಸಿದ್ದಾರೆ (ಅನಿತಾ, ೧೯೯೪:೮೫).

ಜಿ.ರಾಜಶೇಖರ ಅವರು ನಿರೂಪಿಸಿರುವ "ಕಾಗೋಡು ಸತ್ಯಾಗ್ರಹ"(೧೯೮೦) ಕೃತಿಯು ವೈಚಾರಿಕ ಘಟನೆಗಳ ಸತ್ಯಾಂಶವನ್ನು ಪರಿಶೀಲನೆ ಮಾಡಿ ತಿಳಿಸಿದ್ದಾರೆ. ಸತ್ಯಾಗ್ರಹದ ಒಳಿತು, ಕೆಡಕುಗಳನ್ನು ಸರ್ಕಾರದ ಕ್ರಮ, ಸಮಾಜವಾದಿ ಪಕ್ಷದ ಸ್ಥಿತಿಗತಿ, ಭೂಸುಧಾರಣೆ ಕುರಿತು ವಿವರವಾಗಿ ಬರೆದಿದ್ದಾರೆ.

"ಮಂಜಪ್ಪ ಕಡಿದಾಳ್ ಲ್ಯಾಂಡ್ ರಿಫಾರ್ಮ್ಸ್ ಇನ್ ಕರ್ನಾಟಕ ೧೯೮೪ ಡೆಕ್ಕನ ಹೆರಾಲ್ಡ್ ಭಾನುವಾರ ೧೧ ಜನವರಿ ೧೯೮೪, ಸಂಚಿಕೆ ೫" ರಲ್ಲಿ ಕರ್ನಾಟಕದ ಒಟ್ಟಾರೆ ಭೂ ಸುಧಾರಣೆಯನ್ನು ಕುರಿತಂತೆ ಬರೆದಿದ್ದಾರೆ.

ಸಂಶೋಧಕ ಕ್ಷೀರಸಾಗರ ಅವರ "ದಿಕ್ಕು ತಪ್ಪಿದ ಕರ್ನಾಟಕದ ಭೂಸುಧಾರಣೆ"(೧೯೮೫)ಗ್ರಂಥದಲ್ಲಿ ಕರ್ನಾಟಕದ ಭೂಸುಧಾರಣೆಯ ಸಂದರ್ಭದಲ್ಲಿ ಕಾಂಗ್ರೆಸ್ ಪಕ್ಷ, ಸರ್ಕಾರ ನಡೆದುಕೊಂಡ ರೀತಿ, ರಾಜಕೀಯ ವ್ಯವಸ್ಥೆಯ ಕುರಿತಂತೆ ಮತ್ತು ಭೂನ್ಯಾಯ ಮಂಡಳಿಯ ವ್ಯವಸ್ಥೆಯ ಬಗ್ಗೆ ಹೇಳಿರುವುದು ಕಂಡುಬಂದಿದೆ.

ಎಂ.ಎ.ಎಸ್.ರಾಜನ್ ಅವರ "ಕರ್ನಾಟಕದಲ್ಲಿ ಭೂ ಸುಧಾರಣೆ"(೧೯೮೭) (ನಾನು ಹತ್ತಿರದಿಂದ ಕಂಡಂತೆ) ಕೃತಿ ರಚಿಸಿದ್ದಾರೆ. ಭೂಸುಧಾರಣೆ ಕಾಯ್ದೆ ರಚಿಸುವಾಗ ಇಲಾಖೆಯಲ್ಲಿ ಕಾರ್ಯನಿರ್ವಹಿಸಿದ್ದವರು ಹಾಗೂ ಕಾಯ್ದೆಯ ರೂಪಗಳನ್ನು ಕುರಿತು ಕಂಡುಬಂದ ಭೂನ್ಯಾಯಮಂಡಲಗಳ ಕಾರ್ಯಚಟುವಟಿಕೆಯ ಬಗೆಯನ್ನು ವಿವರಿಸಿದ್ದಾರೆ.

ಪ್ರಾಥಮಿಕ ಆಕರವಾಗಿ ಬಳಸಿಕೊಂಡಿರುವ ಕಡಿದಾಳ್ ಅವರ ಆತ್ಮಕಥೆಯಾದ 'ನನಸಾಗದ ಕನಸು'(೧೯೯೦) ಗ್ರಂಥದಲ್ಲಿ ಕಡಿದಾಳರು ತಮ್ಮ ವ್ಯಕ್ತಿತ್ವವನ್ನು ವಿನಾಕರಣ ಎಲ್ಲಿಯೂ ವೈಭವೀಕರಿಸದೆ, ಬದುಕಿನ ವಾಸ್ತವ ಚಿತ್ರಣವನ್ನು ನೀಡಿದ್ದಾರೆ. ಅವರ ಬಾಲ್ಯ, ಯೌವನ, ಪ್ರೌಢವ್ಯಸ್ಥೆಯ ದಿನಗಳ ಮಾಹಿತಿಯನ್ನು ನೀಡುವುದರೊಂದಿಗೆ ಕಡಿದಾಳರು ಅವರ ಧ್ಯೇಯ-ಧೋರಣೆ, ಸೋಲು-ಗೆಲುವು, ಆದರ್ಶ-ಆಕಾಂಕ್ಷೆಗಳು, ಭೂಮಾಲಿಕರು ದಬ್ಬಾಳಿಕೆಯಿಂದ ಸೋತು ಹೋದ ಗೇಣಿದಾರಿಕೆಯ ಜೀವನ ಹೋರಾಟ ಮತ್ತು ನೋವು-ನಲಿವುಗಳನ್ನು ಹಂಚಿಕೊಂಡಿದ್ದಾರೆ. ಹಾಗೆಯೇ ಅವರ ಹೋರಾಟಗಳನ್ನ, ರಾಜಕೀಯ ಸುಧಾರಣೆಗಳ ಎಳೆಗಳನ್ನ ಪ್ರಮುಖವಾಗಿ ಚಿತ್ರಿಸಿದ್ದು ಇದಕ್ಕೆ 'ಚಾರಿತ್ರಿಕ' ಮಹತ್ವವು ದೊರೆತಿದೆ.

ಹೊ.ಶ್ರೀನಿವಾಸಯ್ಯನವರ 'ಹೋರಾಟ ಶ್ರೀ'(೧೯೯೬)(ಸಂ)ಕೃತಿಯು ವಸ್ತುನಿಷ್ಠ ಘಟನಾತ್ಮಕ ವಿವರಣೆಯನ್ನು ಒಳಗೊಂಡಿದೆ. ಕಡಿದಾಳ್ ಮಂಜಪ್ಪ ಅವರು ಹುಟ್ಟು ರೈತರು ಮತ್ತು ಹೋರಾಟಗಾರರು ಎಂಬ ಅಂಶಗಳನ್ನು ಒಳಗೊಂಡಿದೆ. ಬಡತನ, ಅನಕ್ಷರತೆಗಳ ನಡುವೆ ಸುಸಂಸ್ಕೃತ ವ್ಯಕ್ತಿಯಾಗಿ ಗಾಂಧೀಜಿಯವರ ಆದರ್ಶಕ್ಕೆ ಪಟ್ಟುಬಿದ್ದು ಅದೇ ಮಾದರಿಯಲ್ಲಿ ಜೀವನ ಮತ್ತು ಹೋರಾಟವನ್ನು ನಡೆಸಿರುವುದರ ಕುರಿತು ಲೇಖಕರು ವಿವೇಚಿಸಿದ್ದಾರೆ.

ಮುಝಾಫರ ಅಸ್ಸಾದಿ ಅವರ "ಪೆಸೆಂಟ್ ಮೂವ್‌ಮೆಂಟ್ ಇನ್ ಕರ್ನಾಟಕ"(೧೯೯೭) ಕೃತಿಯಲ್ಲಿ ಸೈದ್ಧಾಂತಿಕ ನೆಲೆಗಟ್ಟಿನ ಮೂಲಕ ರೈತ ಹೋರಾಟವನ್ನು ನೋಡುವ ಬಗೆಯನ್ನು ಕಾಣಬಹುದು. ಈ ಲೇಖಕರು ಕರ್ನಾಟಕದಲ್ಲಿ ೮೦ರ ದಶಕದಲ್ಲಿ ಹಾಗೂ ೯೦ರ ದಶಕದಲ್ಲಿ ರೈತ ಚಳುವಳಿಗಳು ಕೈಗೊಂಡ ನಿರ್ಣಯಗಳು ಹಾಗೂ ಸರ್ಕಾರದ ಕಾರ್ಯಕ್ರಮಗಳನ್ನು ವಿಮರ್ಶಿಸಿದ್ದಾರೆ. ಜಾಗತೀಕರಣ, ಉದಾರೀಕರಣದ ಪರಿಣಾಮಗಳನ್ನು ಕುರಿತು ತಾತ್ವಿಕವಾಗಿ ಚಿಂತಿಸಿದ್ದಾರೆ.

ಧನಂಜಯಕುಮಾರ್ ಅವರ ಕೃತಿಯು "ಕರ್ನಾಟಕ ರಾಜ್ಯ ರೈತ ಸಂಘ ಎಸೋಶಿಯಾಲಾಜಿಕಲ್ ಸ್ಟಡಿ ಆಫ್ ಪೆಸೆಂಟ್ ಆರ್ಗನೈಸೇಶನ್"(1998) ಕೃತಿಯು ಸಾಮಾಜಿಕ ನೆಲೆಯಲ್ಲಿ ರಾಜ್ಯ ರೈತ ಸಂಘಟನೆಯು ನಡೆದು ಬಂದ ದಾರಿ", ವಿವಾಹ, ಸಾಮಾಜಿಕ ಸೇವೆ ಮುಂತಾದ ಆಶಯಗಳನ್ನು ಒಳಗೊಂಡಿದೆ. ಮುಖ್ಯವಾಗಿ ರೈತ ಸಂಘಟನೆಗಳು ರೈತ ಹೋರಾಟವನ್ನಲ್ಲದೆ ಸಮಾಜ ಸೇವಾ ಕಾರ್ಯಕ್ರಮಗಳನ್ನು ಜಾರಿಗೊಳಿಸಿದ ಬಗೆಯನ್ನು ಈ ಅಧ್ಯಯನ ಶೋಧಿಸುತ್ತದೆ.

ಎಸ್.ಎಚ್.ಕವಂಟಿ ಮತ್ತು ವಿ.ಜ.ಪೂಜಾರ ಅವರ 'ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ' ಮಾಲಿಕೆ 'ಕಡಿದಾಳ್ ಮಂಜಪ್ಪ'(೧೯೯೯) ಕೃತಿಯಲ್ಲಿ ಕಂದಾಯ ಮಂತ್ರಿಗಳಾಗಿ ಕಡಿದಾಳರು ಮಾಡಿದಂಥ ಸಾಧನೆಯನ್ನು ವಿವರವಾಗಿ ತಿಳಿಸುವುದರೊಂದಿಗೆ ಅವರ ವ್ಯಕ್ತಿತ್ವವನ್ನು ತಿಳಿಸಲು ಪ್ರಯತ್ನಿಸಿದ್ದಾರೆ.

ತಂಬಂಡ ವಿಜಯ್ ಪೂಣಚ್ಚ ಅವರ "ರೈತ ಚಳುವಳಿಗಳು(ಸಂಪುಟ-೬)"(೧೯೯೯)ಕೃತಿಯಲ್ಲಿ ಕರ್ನಾಟಕದಲ್ಲಿ ನಡೆದಂತ ಎಲ್ಲ ರೈತ ಹೋರಾಟಗಳನ್ನು ಸ್ಥೂಲವಾಗಿ ವಿವರಿಸಲಾಗಿದೆ. ಸ್ವಾತಂತ್ರ್ಯಪೂರ್ವದಲ್ಲಿನ ರೈತ ಸಂಘಗಳು, ಸ್ವಾತಂತ್ರ್ಯೋತ್ತರ ಭಾರತ ಹಾಗೂ ಕರ್ನಾಟಕದ ರೈತ ಹೋರಾಟಗಳನ್ನು ಇತ್ತೀಚಿನ ರೈತ ಹೋರಾಟಗಳ ಕುರಿತು ವಿವರಿಸಿದ್ದು ಕಂಡುಬಂದಿದೆ.

ವಿಷ್ಣುಮೂರ್ತಿ ಹೆಚ್.ಸಿ. ಅವರ "ಗೋಪಾಲಗೌಡ ಅಂತರಂಗ-ಬಹಿರಂಗ"(೧೯೯೯) ಗೋಪಾಲಗೌಡ ಡೈರಿ ಪತ್ರಗಳು ಎಂಬೆರಡು ಕೃತಿಗಳಲ್ಲಿ ಕಾಗೋಡು ರೈತ ಹೋರಾಟದ ಆಶಯಗಳನ್ನು ತಿಳಿಸಿದ್ದಾರೆ.

ಜಿ.ವಿ.ಜೋಷಿಯವರ "ಆಗ್ರೇರಿಯನ್ ಸ್ಟ್ರಕ್ಚರ್ ಟೆನನ್ಸಿ"ಎಂಬುದು(೨೦೦೦)ಸಂಶೋಧನೆ ಕೃತಿಯಾಗಿದ್ದು, ಗೇಣಿ ಕಾಯ್ದೆಯ ಬಗ್ಗೆ ಇದರಲ್ಲಿ ವಿವರಗಳಿವೆ.

ಎಸ್.ಚಂದ್ರಶೇಖರ್ ಅವರ "ದಕ್ಷಿಣ ಭಾರತದ ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ" (೨೦೦೦)ದಲ್ಲಿ ಬ್ರಿಟೀಷರ ಆಡಳಿತ ಅವಧಿಯಲ್ಲಿ ರೈತರ ಸ್ಥಿತಿಗತಿ ಭೂಮಿಗೆ ಸಂಬಂಧಿಸಿದಂತೆ ವರ್ಗಗಳು ಹುಟ್ಟಲು ಕಾರಣಗಳು ಕಂಡುಬಂದಿದೆ. ಸ್ವಾತಂತ್ರ್ಯ ಹೋರಾಟದಲ್ಲಿ ರೈತರ ಪಾತ್ರವಿತ್ತೆಂದು ತಿಳಿಯುತ್ತದೆ.

ಕೋಣಂದೂರು ವೆಂಕಪ್ಪಗೌಡ ಅವರ "ಕಾಗೋಡು ಹೋರಾಟ ರುವಾರಿ"(೨೦೦೧) ಕೃತಿಯಲ್ಲಿ ಗಣಪತಿಯಪ್ಪನವರ ಜೀವನವನ್ನು ಅಧ್ಯಯನ ಮಾಡುವುದರೊಂದಿಗೆ ಕಾಗೋಡು ಚಳುವಳಿಯಲ್ಲಿ ಕಡಿದಾಳರ ಪಾತ್ರವನ್ನು ಹಾಗೂ ಅಂದಿನ ಸಾಮಾಜಿಕ, ಆರ್ಥಿಕ, ಜನಜೀವನ ಚಳುವಳಿಗೆ ಹೇಗೆ ಕಾರಣವಾಯಿತ್ತೆಂಬ ಅಂಶಗಳನ್ನು ವಿಶ್ಲೇಷಿಸಿದ್ದಾರೆ.

ಹಿ.ಚಿ.ಬೋರಲಿಂಗಯ್ಯ ಮತ್ತು ಹುಚ್ಚಪ್ಪ ಮಾಸ್ತರು ಅವರ ಸಂಪಾದಕತ್ವದ 'ಕಾಗೋಡು ಚಳುವಳಿ ಸುವರ್ಣ ಸಂಪುಟ' ಗ್ರಂಥವನ್ನು ಕನ್ನಡ ವಿಶ್ವವಿದ್ಯಾಲಯ ೨೦೦೨ರಲ್ಲಿ ಪ್ರಕಟಿಸಿದೆ. ಈ ಸಂಪುಟದ ಲೇಖನಗಳನ್ನು ಬರೆದಿರುವ ಲೇಖಕರಲ್ಲಿ, ಅನುಭವಗಳು, ರೈತ ಹೋರಾಟದಲ್ಲಿ ತೊಡಗಿಸಿಕೊಂಡ ನಾಯಕರು, ವಿದ್ವಾಂಸರು ಬರೆದ ಬರೆವಣಿಗೆಗಳನ್ನು ಇದರಲ್ಲಿ ಒಟ್ಟುಗೂಡಿಸಲಾಗಿದೆ. ಕಾಗೋಡು ಚಳುವಳಿ ಹಾಗೂ ಇತರೆ ರೈತ ಹೋರಾಟಗಳ ಸಮಗ್ರತೆಯನ್ನು ತರುವ ನಿಟ್ಟಿನಲ್ಲಿ ಸಂಪಾದಕರ ಪ್ರಯತ್ನ ಗಮನಾರ್ಹವಾದುದಾಗಿದೆ. ಸಂಪುಟದ ಮೊದಲ ಭಾಗದಲ್ಲಿ ಕಾಗೋಡು ಚಳುವಳಿಯ ಸಮಗ್ರ

ಇತಿಹಾಸ, ಚಾರಿತ್ರಿಕ ಘಟನೆ, ಕಾಗೋಡಿನ ಸಾಂಸ್ಕೃತಿಕ ನೆಲೆ, ಭೌಗೋಳಿಕ ವಿವರ, ಜನಾಂಗದ ಇತಿಹಾಸ, ಭೂಸುಧಾರಣೆ, ಕಾಗೋಡು ಚಳುವಳಿಯಲ್ಲಿ ತೊಡಗಿಸಿಕೊಂಡ ನಾಯಕರುಗಳ ವಿವರಗಳನ್ನು ಕಾಣಬಹುದಾಗಿದೆ. ಸಂಪುಟದ ಭಾಗ ಎರಡರಲ್ಲಿ ಕರ್ನಾಟಕದಲ್ಲಾದ ಪ್ರಮುಖ ರೈತ ಹೋರಾಟಗಳ ಕುರಿತಂತೆ ವೈಚಾರಿಕ, ತಾತ್ವಿಕ ಮತ್ತು ಸೈದ್ಧಾಂತಿಕ ನಿಲುವುಗಳನ್ನು ಚರ್ಚಿಸಿದ್ದಾರೆ. ಮೂರನೆಯ ಭಾಗದಲ್ಲಿ ಸಮಾಜವಾದ ಹಾಗೂ ರಾಷ್ಟ್ರೀಯವಾದದ ಉದಯ ಮೊದಲಾದ ವಿಚಾರಗಳನ್ನು ವಿಶ್ಲೇಷಿಸಲಾಗಿದೆ. ಇದೇ ಸಂಪುಟದಲ್ಲಿ ಕಾಗೋಡು ಚಳುವಳಿಯಲ್ಲಿ ಭಾಗವಹಿಸಿದ "ಸತ್ಯಾಗ್ರಹಿಗಳ ಜೀವನ ಚಿತ್ರಗಳು" ಭಾಗದಲ್ಲಿ ಕಬಸೆ ಅಶೋಕ ಅವರ ಕಡಿದಾಳ್ ಮಂಜಪ್ಪನವರ ಸಾಧನೆಯ ಕುರಿತಂತೆ ಕಾಗೋಡು ಚಳುವಳಿಯಲ್ಲಿ ಅವರ ಪಾತ್ರವನ್ನು ವಿವರಿಸಿದ್ದಾರೆ. ಕಡಿದಾಳ್ ಮಂಜಪ್ಪ ಅವರು ಕಾಗೋಡು ಚಳುವಳಿ ನಡೆಯುತ್ತಿದ್ದ ಸಂದರ್ಭದಲ್ಲಿ "ಗೇಣಿ ರೈತರ ಬಗ್ಗೆ ಸರ್ಕಾರದ ಸಹಾನುಭೂತಿ ಇರಲಿಲ್ಲ" ಎಂಬ ಲೇಖನವನ್ನು ಬರೆದಿದ್ದಾರೆ. ಈ ಲೇಖನದಲ್ಲಿ ಮಲೆನಾಡಿನ ಸ್ಥಿತಿಗತಿಗಳು ಗೇಣಿದಾರರ ಸಂಘಗಳು ಮತ್ತು ಕಾಗೋಡು ಚಳುವಳಿಯ ಬಗ್ಗೆ ವಿಮರ್ಶಾತ್ಮಕವಾಗಿ ಚರ್ಚಿಸಿದ್ದು ಕಂಡುಬಂದಿದೆ.

ಕಡಿದಾಳ್ ಮಂಜಪ್ಪನವರ ಜನ್ಮ ಶತಮಾನೋತ್ಸವ ಸಮಿತಿ ಪ್ರಕಟಿಸಿರುವ 'ಭೂಸುಧಾರಣಾ ರುವಾರಿ ಕಡಿದಾಳ್ ಮಂಜಪ್ಪ'(೨೦೦೭) ಎಂಬ ಸ್ಮರಣ ಕೃತಿಯಲ್ಲಿ ಬಡತನ ಶೋಷಣೆಗಳನ್ನು ಸ್ವತಃ ಅನುಭವಿಸಿದ ಕಡಿದಾಳ್ ಅವರು ರೈತರ ಶೋಷಣೆಯನ್ನು ಕೊನೆಗಾಣಿಸಿದ ಬಗ್ಗೆ ಹಾಗೂ ಕಡಿದಾಳರ ಸಾಧನೆಯ ಕುರಿತು ಸಂಕ್ಷಿಪ್ತವಾಗಿ ಪರಿಚಯ ಮಾಡುವ ಪ್ರಯತ್ನ ಮಾಡಿದ್ದಾರೆ.

ಅರುಣ್ ಜೋಳದ ಕೂಡ್ಲಿಗಿ ಅವರ "ಸೊಂಡೂರು ಭೂ ಹೋರಾಟ"(೨೦೦೭) ಕೃತಿಯಲ್ಲಿ ಉಳುವವನೆ ಭೂ ಒಡೆಯ ಎಂಬ ಹೋರಾಟವನ್ನು ಸಮಾಜವಾದಿ ಪಕ್ಷವು ನಡೆಸಿದ ಬಗೆಗಿನ ವಿವರಗಳನ್ನು ಒಳಗೊಂಡಿದೆ.

ಸಿ.ಬಿ.ಚಂದ್ರಶೇಖರ ಅವರ "ಕಾಗೋಡು ಒಂದು ನೆನಪು"(೨೦೦೭)ಎಂಬ ಗ್ರಂಥದಲ್ಲಿ ಸ್ವತಃ ಕಾಗೋಡು ಚಳುವಳಿಯಲ್ಲಿ ಭಾಗವಹಿಸಿದ್ದ ಅನುಭವವನ್ನು ವ್ಯಕ್ತಪಡಿಸಿದ್ದಾರೆ. ಈ ಕೃತಿಯು ಸತ್ಯಾಗ್ರಹ ಕುರಿತಂತೆ ವಾಸ್ತವಾಂಶಗಳನ್ನು ವ್ಯಕ್ತಪಡಿಸಿದೆ.

ಜಿ.ರಾಜಶೇಖರ ಅವರ "ತೆಲಂಗಾಣ ರೈತ ಹೋರಾಟ" ಎಂಬ ಗ್ರಂಥದಲ್ಲಿ ಭೂಹೋರಾಟದ ಘಟನೆಗಳನ್ನು ಒಳಗೊಂಡಿರುವ ಚಿಕ್ಕ ಕೃತಿಯಾಗಿದೆ. ರೈತರ ಸಶಸ್ತ್ರ ಹೋರಾಟ ಕುರಿತಂತೆ ಸಂಕ್ಷಿಪ್ತವಾಗಿ ವಿವೇಚಿಸಲಾಗಿದೆ. ನಿಜಾಮರ, ಭೂಮಾಲೀಕರ, ಪಾಳೇಗಾರರ, ಸಣ್ಣ ರೈತರ ಸ್ಥಿತಿಗತಿಗಳನ್ನು ವಿವೇಚಿಸಿದ್ದಾರೆ.

ಪ್ರಸ್ತುತ ನಿಬಂಧ ರಚನೆಗೆ ಸಂಬಂಧಿಸಿದಂತೆ ವಿವರಿಸಿದ ಕೃತಿಗಳಲ್ಲದೆ, ಭೂಹೋರಾಟ ಮತ್ತು ಭೂ ಸುಧಾರಣೆಗೆ ಸಂಬಂಧಿಸಿದಂತೆ ಹಲವಾರು ಕೃತಿಗಳು, ಲೇಖನಗಳು ಕಂಡುಬಂದಿವೆ. ನಿಬಂಧ ರಚನೆಗೆ ಕೆಲವು ಮುಖ್ಯವಾಗಿ ದೊರೆತಿರುವಂತಹ ಕೃತಿಗಳ ಸಮೀಕ್ಷೆ ಮಾಡಲಾಗಿದೆ. ದೊರೆತಂಥ ಈ ಎಲ್ಲ ಕೃತಿಗಳಲ್ಲಿ ಸಮಗ್ರವಾದ ವಿಷಯ ಒಳಗೊಂಡಿರುವುದು ತಿಳಿದಿದೆ.

## ೧.೨. ಮಲೆನಾಡು ಪ್ರದೇಶದ ಭೌಗೋಳಿಕ ಹಿನ್ನೆಲೆ

ಕರ್ನಾಟಕವು ಪ್ರಾಕೃತಿಕವಾಗಿ ವಿಶಿಷ್ಟ ಲಕ್ಷಣಗಳನ್ನು ಹೊಂದಿದೆ. ಇಲ್ಲಿಯ ಭೂಮಿಯ ಗುಣ, ಹವಾಮಾನ, ಮಳೆ ಮುಂತಾದುವನ್ನು ಆಧಾರವಾಗಿಟ್ಟುಕೊಂಡು ಕರ್ನಾಟಕವನ್ನು ಮುಖ್ಯವಾಗಿ ನಾಲ್ಕು ವಿಭಾಗಗಳನ್ನಾಗಿ ಮಾಡಲಾಗಿದೆ. ಇದರಲ್ಲಿ ಕರಾವಳಿ ಪ್ರದೇಶ, ಮಲೆನಾಡು ಪ್ರದೇಶ, ಉತ್ತರದ ಬಯಲು ಪ್ರದೇಶ, ದಕ್ಷಿಣದ ಬಯಲು ಪ್ರದೇಶವೆಂದು ವಿಭಾಗಿಸಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಮಲೆನಾಡಿನ ಭೌಗೋಳಿಕ ಹಿನ್ನೆಲೆಯನ್ನು ಮಾತ್ರ ಆಯ್ದುಕೊಳ್ಳಲಾಗಿದೆ.

ಯಾವುದೇ ಒಂದು ಪ್ರದೇಶದ ಹೋರಾಟಗಳು, ಚಳುವಳಿಗಳು, ಜನರ ಜೀವನ ಕ್ರಮಗಳು ಬೌದ್ಧಿಕ ಮತ್ತು ಇತ್ಯಾದಿಗಳೆಲ್ಲ ಅಲ್ಲಿಯ ಭೌಗೋಳಿಕ ಅಂಶಗಳನ್ನು ಒಳಗೊಂಡಿರುತ್ತವೆ. ಅದೇ ತರಹ ಮಲೆನಾಡಿನ ಭಾಗದಲ್ಲೂ ಇದರ ಪ್ರಭಾವ ಉಂಟಾಗಿರುವುದನ್ನ ಗುರುತಿಸಬಹುದು.

ಮಲೆನಾಡು ಪ್ರದೇಶ ಕರ್ನಾಟಕದ ದಕ್ಷಿಣ ಭಾಗದಲ್ಲಿದೆ. ಇದು ಸಹ್ಯಾದ್ರಿ ಶ್ರೇಣಿ ಎಂದು ಕರೆಯುವ ಪಶ್ಚಿಮ ಘಟ್ಟಸಾಲು ಮತ್ತು ಎತ್ತರವಾದ ಗಿರಿಪರ್ವತಗಳಿಂದ ಕೂಡಿದೆ. ಬಯಲು ಪ್ರದೇಶಕ್ಕೂ ಮತ್ತು ಘಟ್ಟ ಪ್ರದೇಶಕ್ಕೂ ಸೇತುವೆಯಂತಿರುವುದು ಕಂಡುಬಂದಿದೆ. ಈ ಭಾಗದ ವಿಶಿಷ್ಟ ಲಕ್ಷಣವೆಂದರೆ ಕಡಿದಾದ ಘಟ್ಟ ಶ್ರೇಣಿಗಳು, ನದಿತೊರೆಗಳು ಪ್ರಸ್ಥಭೂಮಿಗಿಂತಲೂ ಎತ್ತರವಾಗಿದ್ದು ಸಮತಟ್ಟಾಗಿಲ್ಲ. ಏರುತಗ್ಗುಗಳಿಂದ ಹಾಗೂ ದಟ್ಟವಾದ ಅರಣ್ಯ ಪ್ರದೇಶ ಹೊಂದಿರುವ ಸ್ಥಳವೇ ಮಲೆನಾಡಾಗಿದೆ. ಈ ಪ್ರದೇಶದಲ್ಲಿ ಹಲವಾರು ಕಣಿವೆಗಳಿದ್ದು ಇವು ಸಂಪರ್ಕ ಮಾರ್ಗಕ್ಕೆ ಸಹಕಾರಿಯಾಗಿದೆ. ಈ ಎಲ್ಲ ಅಂಶಗಳಿಂದ ಮಲೆನಾಡು ಶ್ರೀಮಂತವಾಗಿ ಅದು ಕರ್ನಾಟಕದ ಆರ್ಥಿಕ ಮತ್ತು ಸಾಂಸ್ಕೃತಿಕ ಸಮೃದ್ಧಿಗೆ ಕಾರಣವಾಗಿದೆ (ಪುಟ್ಟಣ್ಣ, ೧೯೯೪:೧).

ಮಲೆನಾಡಿನ ಪ್ರದೇಶದ ವಿಸ್ತೀರ್ಣ ವ್ಯಾಪಕವಾಗಿದೆ. ಕ್ಷೀರಸಾಗರ ಅವರ ಅಭಿಪ್ರಾಯದಂತೆ ಇದರ ವಿಸ್ತೀರ್ಣವು "ಸುಮಾರು ೬೫೦ ಕಿ.ಮೀ.ಗಳಷ್ಟು ಕಾಡು ಬೆಟ್ಟಗಳಿಂದ ಕೂಡಿದ ಪ್ರದೇಶವಾಗಿದೆ." ಕೊಡಗು, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ, ಧಾರವಾಡ, ಬೆಳಗಾವಿ ಮತ್ತು ಉತ್ತರ ಕನ್ನಡ ಜಿಲ್ಲೆಗಳ ಹಲವು ಭಾಗಗಳನ್ನು ಪ್ರಮುಖವಾಗಿ ಮಲೆನಾಡು ಪ್ರದೇಶವೆಂದು ಗುರುತಿಸಲಾಗಿದೆ. ಮಲೆನಾಡಿನ ಕೇಂದ್ರಸ್ಥಳಗಳೆಂದು ಶಿವಮೊಗ್ಗ ಜಿಲ್ಲೆಯ-ಸಾಗರ, ತೀರ್ಥಹಳ್ಳಿ, ಹೊಸನಗರ ಚಿಕ್ಕಮಗಳೂರು, ಜಿಲ್ಲೆಯ ಕೊಪ್ಪ, ಶೃಂಗೇರಿ, ನರಸಿಂಹರಾಜಪುರ, ಮೂಡಿಗೆರೆ ಹಾಗೂ ಹಾಸನ ಜಿಲ್ಲೆಯ ಬೇಲೂರು, ಸಕಲೇಶಪುರಗಳನ್ನು ಮಾತ್ರ ಕರೆಯಲಾಗುತ್ತದೆ.[೫]

ಭೌಗೋಳಿಕ ಅಂಶಗಳಲ್ಲಿ ಒಂದಾದ ವಾಯುಗುಣ ಮಲೆನಾಡಿನ ಭಾಗದಲ್ಲಿ ಹಿತಕರವಾಗಿದೆ. ಇಲ್ಲಿಯ ಹವಮಾನ ಉತ್ತಮವಾಗಿರಲು ಮುಖ್ಯ ಕಾರಣವೆಂದರೆ ಮಲೆನಾಡ ಭಾಗ ಪಶ್ಚಿಮ

ಘಟ್ಟಗಳಿಂದ ಆವೃತವಾದದ್ದು, ಎತ್ತರದ ಪರ್ವತಗಳು ಮತ್ತು ಅವುಗಳ ಸುತ್ತ ದಟ್ಟವಾದ ಅರಣ್ಯವಿರುವುದರಿಂದ ಅಲ್ಲಿಯ ಜನ ಜೀವನ ನಡೆಸಲು ಅನುಕೂಲಕರವಾಗಿದೆ. ಮಲೆನಾಡಿನ ಭಾಗದ ಋತುಮಾನಗಳು ಮಳೆಯನ್ನು ಮತ್ತು ಉಷ್ಣತೆಯನ್ನು ಆಧರಿಸಿದ್ದು ಕಂಡುಬಂದಿದೆ. ಚಳಿಗಾಲ, ಬೇಸಿಗೆಕಾಲ ಮಳೆಗಾಲವೆಂದು ಪ್ರಮುಖವಾಗಿ ಮೂರು ಕಾಲಗಳನ್ನು ಗುರುತಿಸಲಾಗಿದೆ. ಇಲ್ಲಿಯ ಉಷ್ಣತೆಯು ಸಮತೋಲನವಾಗಿರುವುದರಿಂದ ಜನಜೀವನಕ್ಕೆ ಅನುಕೂಲವಾಗಿದೆ. ಚಳಿಗಾಲದಲ್ಲಿಯೇ ಉಷ್ಣತೆ ೧೨ರಿಂದ ೧೫ ಡಿಗ್ರಿಗೆ ಕುಸಿಯುವುದರಿಂದ ಪ್ರವಾಸಿಗರಿಗೆ ಅತ್ಯಂತ ಉತ್ತಮ ವಾತಾವರಣ ಎನಿಸುತ್ತದೆ. ಹಾಗೆಯೇ ಇಲ್ಲಿಯ ಗರಿಷ್ಠ ಉಷ್ಣತೆಯೆಂದರೆ ಮಾರ್ಚ್‌ನಿಂದ ಜೂನ್‌ವರೆಗಿನ ಅವಧಿಯಲ್ಲಿ ೩೨ ರಿಂದ ೩೬ ಡಿಗ್ರಿ ಸೆಲ್ಸಿಯಸ್ ಇರುತ್ತದೆ.

ಮಲೆನಾಡ ಭಾಗದಲ್ಲಿ ಅತಿ ಹೆಚ್ಚು ಮಳೆ ಕಂಡುಬರುತ್ತದೆ. ಏಕೆಂದರೆ ಮಳೆಯು ಅರಬ್ಬಿ ಸಮುದ್ರದ ಕಡೆಯಿಂದ ಬೀಸುವ ನೈರುತ್ಯ ಮಾನಸೂನ ಮಾರುತಗಳಿಂದ ಅಧಿಕವಾಗಿರುತ್ತದೆ. ವರ್ಷಕ್ಕೆ ೩೭೫೦ ಮಿ.ಮಿ.ಯಷ್ಟು ಅತ್ಯಧಿಕವಾಗಿರುತ್ತದೆ. ಕರ್ನಾಟಕದಲ್ಲಿಯೇ ಹೆಚ್ಚು ಮಳೆ ಬೀಳುವಂತ ಸ್ಥಳಗಳು ಮಲೆನಾಡಿನಲ್ಲಿವೆ. ಅವುಗಳೆಂದರೆ ಶಿವಮೊಗ್ಗ ಜಿಲ್ಲೆಯ "ಆಗುಂಬೆ (೮೨೭೬ ಮಿ.ಮಿ. ವಾರ್ಷಿಕ) ಕೊಡಗು ಜಿಲ್ಲೆಯ ಭಾಗಮಂಡಲ(೬೦೩೨ ಮಿ.ಮಿ. ವಾರ್ಷಿಕ). ಆಗುಂಬೆಯನ್ನು ದಕ್ಷಿಣದ ಚಿರಾಪುಂಜಿಯೆಂದೇ ಕರೆಯಲಾಗುತ್ತದೆ. ಮಲೆನಾಡ ಭಾಗದ ಒಟ್ಟಾರೆ ವಾರ್ಷಿಕ ಮಳೆಯ ಪ್ರಮಾಣ ೮೨೭೬ ಮೀ.ಮೀ.ಗಳಷ್ಟಿದೆ. ಅರಣ್ಯ ಸಂಪತ್ತೇ ಇಲ್ಲಿ ಅಧಿಕ ಮಳೆಗೆ ಕಾರಣವಾಗಿದೆ. ಮಲೆನಾಡಿನ ಜನಜೀವನ, ವೃತ್ತಿಗೆ ಸಂಬಂಧಿಸಿದಂತೆ ಭೌಗೋಳಿಕ ಲಕ್ಷಣಗಳು ಕಾರಣವಾಗಿವೆ. ಅಧಿಕ ಅರಣ್ಯವಿರುವುದರಿಂದ ಮಳೆಯು ಜಾಸ್ತಿ ಹಾಗೂ ಇಲ್ಲಿಯ ಪ್ರಮುಖ ವೃತ್ತಿಯಾದ ಕೃಷಿಯೊಂದಿಗಿನ ಸಂಬಂಧವನ್ನು ಭೌಗೋಳಿಕ ಲಕ್ಷಣಗಳಿಂದ ಗುರುತಿಸಬಹುದಾಗಿದೆ (ಹೆಚ್.ಎಸ್. ಗೋಪಾಲರಾವ್, ೨೦೦೧ ೧೪). ಅತ್ಯಾಧುನಿಕವಾಗಿರುವ ಮಲೆನಾಡಿನ ಅರಣ್ಯವನ್ನು ಉಷ್ಣವಲಯದ ನಿತ್ಯಹರಿದ್ವರ್ಣದ ಕಾಡುಗಳೆಂದು ಕರೆಯಲಾಗುತ್ತದೆ. ವರ್ಷದ ಎಲ್ಲ ಕಾಲದಲ್ಲಿಯೂ ಹಸಿರಾಗಿರುತ್ತದೆ. ಅರಣ್ಯವು ಅಧಿಕವಾಗಿರುವುದರಿಂದ ಕಾಡುಪ್ರಾಣಿಗಳ ತಾಣವಾಗಿದೆ. ಶೇ.೭೫ರಷ್ಟು ಅರಣ್ಯ ಪ್ರದೇಶವಾಗಿದ್ದು, ಶೇ.೨೫ರಷ್ಟು ಮಾತ್ರ ವ್ಯವಸಾಯಕ್ಕೆ ಒಳಪಟ್ಟಿದೆ. ವ್ಯವಸಾಯಕ್ಕೆ ಕಡಿಮೆ ಭೂಮಿಯಿರುವುದರಿಂದಲೇ ಮುಂದೆ ಹೋರಾಟಕ್ಕೂ ಕಾರಣವಾಯಿತು. ವ್ಯವಸಾಯದ ಭೂಮಿ ಅರಣ್ಯಗಳ ಮಧ್ಯ ಅಲ್ಲಲ್ಲಿ ಹಂಚಿ ಹೋಗಿದ್ದು, ಇಲ್ಲಿಯ ಜನರು ನೆಲೆ ನಿಲ್ಲುವಂತ ಪರಿಕಲ್ಪನೆಯು ಬೇರೆಯಾಗಿದೆ. ಜನ ಸಮುದಾಯ ಒಂದು ನಿರ್ದಿಷ್ಟ ಜಾಗದಲ್ಲಿ ಒಟ್ಟಾಗಿ ವಾಸಮಾಡದೆ ತಾವು ಅವಲಂಭಿಸಿಕೊಂಡಿರುವ ಕೃಷಿ ಭೂಮಿಯ ಹತ್ತಿರವೇ ಮನೆಯನ್ನು ಮಾಡಿಕೊಂಡಿರುತ್ತಾರೆ. ಇಂತಹ ಕೆಲವೇ ಮನೆಗಳನ್ನು ಹಳ್ಳಿಗಳೆಂದು ಕರೆಯಲಾಗುತ್ತದೆ (ಕೀರ್ತಿನಾಥ, ೧೯೫೫:೨,೩). ಜಿ.ಎನ್.ಕೀರ್ತಿನಾಥ್ ಅವರು ತಮ್ಮ ಅಪ್ರಕಟಿತ

ಎಂ.ಫಿಲ್.ಪ್ರಬಂಧವಾದ "ಶಿವಮೊಗ್ಗ ಜಿಲ್ಲೆಯ ಸಮಾಜವಾದಿ ಚಳುವಳಿಗಳು"(೧೯೯೫) ಎಂಬುದರಲ್ಲಿ ಹೀಗೆ ವಿವರಿಸಿದ್ದಾರೆ. ಮಲೆನಾಡಿನಲ್ಲಿ ೧೯೫೦ಕ್ಕಿಂತ ಹಿಂದೆ ವಾಸಿಸುತ್ತಿದ್ದ ಜನರನ್ನು ಮೂರು ವರ್ಗಗಳಾಗಿ ಕೃಷಿಯ ಆಧಾರದ ಮೇಲೆ ವಿಂಗಡಿಸಲಾಗಿತ್ತು. ಮೊದಲನೆಯದಾಗಿ ಜಮೀನ್ದಾರಿ ವರ್ಗ, ಎರಡನೆಯ ವರ್ಗವೆಂದು ಗುರುತಿಸಲ್ಪಡುವವರೆಂದರೆ ಗೇಣಿದಾರರು. ಮೂರನೆಯ ವರ್ಗವನ್ನು ಜೀತದಾಳುಗಳೆಂದು ಕರೆಯಲಾಗುತ್ತಿತ್ತು. ಮಲೆನಾಡಿನಲ್ಲಿ ಇರುವಂತ ಭೂಮಿಯೆಲ್ಲವು ಜಮೀನ್ದಾರರ ವಶದಲ್ಲಿತ್ತು. ಈ ಭೂಮಾಲೀಕರು ಉಳಿದ ವರ್ಗಗಳ ಕೈಯಲ್ಲಿ ದುಡಿಸಿಕೊಳ್ಳುವುದರೊಂದಿಗೆ ಶೋಷಣೆಗೆ ಒಳಪಡಿಸಿದ್ದರು.

ಮಲೆನಾಡು ಗುಡ್ಡಗಳಿಂದ ಅರಣ್ಯಗಳಿಂದ ಕೂಡಿರುವುದರಿಂದ ಇಲ್ಲಿ ವಾಣಿಜ್ಯ ಬೆಳೆಗಳನ್ನು ಬೆಳೆಯಲು ಸಹಕಾರಿಯಾಗಿತ್ತು. ವಾಣಿಜ್ಯ ಬೆಳೆ ಬೆಳೆಯುವ ಉದ್ದೇಶವನ್ನಿಟ್ಟುಕೊಂಡು ಯುರೋಪಿನ ರಾಷ್ಟ್ರಗಳಾದ ಇಂಗ್ಲೀಷ್, ಪ್ರೆಂಚ್, ಪೋರ್ಚುಗೀಸರು ಇಲ್ಲಿಗೆ ಬಂದ ಸಂದರ್ಭದಲ್ಲಿ ಮೊದಲು ವಾಣಿಜ್ಯ ಬೆಳೆಗಳ ಬಗ್ಗೆ ಆಸಕ್ತಿ ಹೊಂದಿ ಬೆಳೆಯಲು ಪ್ರಯತ್ನಿಸಿದ್ದು, ದೊಡ್ಡ ದೊಡ್ಡ ಎಸ್ಟೇಟುಗಳಾಗಿ ಮಾರ್ಪಡಿಸಿದರು. ಮಲೆನಾಡಿನ ಈ ಪ್ರದೇಶಗಳೆಲ್ಲ ಭೂಮಿತಿಗೆ ಕೂಡ ಒಳಪಟ್ಟಿರಲಿಲ್ಲ. ಇಲ್ಲಿಯ ಹವಾಮಾನಕ್ಕೆ ಒಗ್ಗುವಂತ ಕಾಫಿ, ಟೀ, ಏಲಕ್ಕಿ, ಕಾಳುಮೆಣಸುಗಳಂತಹ ವಾಣಿಜ್ಯ ಬೆಳೆಗಳನ್ನು ಬೆಳೆಯಲು ಪ್ರಾಮುಖ್ಯತೆ ನೀಡಿದ್ದರು. ಹಾಗೆಯೇ ಈ ಬೆಳೆಗಳು ಇವರ ಕಾಲದಲ್ಲಿ ಮಲೆನಾಡಿನಲ್ಲಿ ಹೆಚ್ಚು ಜನಪ್ರಿಯವಾದವು. ಬ್ರಿಟಿಷ್ ಅಧಿಕಾರಿಯಾದ ಮಾರ್ಕ್ ಕಬ್ಬನ್ ಮತ್ತು ಕಮೀಷನರ್ ಬೌರಿಂಗನು ಮೈಸೂರು ಸಂಸ್ಥಾನದಲ್ಲಿ ಕಮಿಷನರ್ ಆಗಿದ್ದಾಗ ೧೮೩೪-೧೮೬೫ರಲ್ಲಿ ಕಾಫಿ ಬೆಳೆಯಲು ಪ್ರೋತ್ಸಾಹ ನೀಡಿದ್ದರು. ಅದರಲ್ಲೂ ದಕ್ಷಿಣ ಕನ್ನಡ ಜಿಲ್ಲೆಗಳಿಗೆ ಮೊದಲು ಪಾಶ್ಚಾತ್ಯರ ಪ್ರಭಾವ ಉಂಟಾಗಿತ್ತು. ಕಾಫಿ ತೋಟದಲ್ಲಿ ಕೆಲಸ ಮಾಡಲು ಕೇರಳ, ತಮಿಳುನಾಡುಗಳಿಂದಲೂ ಜನ ಮಲೆನಾಡಿನ ಭಾಗಕ್ಕೆ ವಲಸೆ ಬಂದದ್ದು ಕಂಡುಬಂದಿದೆ. ಇಂತಹ ಸಂಮಿಶ್ರ ಸಂಸ್ಕೃತಿಯೊಂದಿಗೆ ಮಲೆನಾಡಿನ ಜನರ ಜೀವನ ನಡೆಯುತ್ತಿತ್ತು. ಜೊತೆಗೆ ಬ್ರಿಟೀಷರಿಂದ ಇಂಗ್ಲೀಷ್ ಕಲಿಕೆಯ ಪ್ರಭಾವವು ಕೂಡ ಉಂಟಾಗಿತ್ತು. ಈ ಪಾಶ್ಚಾತ್ಯರ ಪ್ರಭಾವದಿಂದ ಕೃಷಿಯು ವಾಣಿಜ್ಯ ಬೆಳೆಗಳತ್ತ ಬದಲಾವಣೆಯಾಗಿತ್ತು. ವಾಣಿಜ್ಯ ಬೆಳೆಗಳಿಗೆ ಹೆಚ್ಚು ಬೆಲೆಯಿರುವುದರಿಂದ ಇದನ್ನು ಬೆಳೆಯುವಂತ ರೈತರು ಆರ್ಥಿಕವಾಗಿ ಪುನಶ್ಚೇತನ ಪಡೆದುಕೊಂಡರು. ಆರ್ಥಿಕ ಸ್ಥಿತಿ ಸದೃಢವಾದಂತೆ ಶ್ರೇಣೀಕೃತ ಸಮಾಜ ನಿರ್ಮಾಣವಾಗುತ್ತಾ ಬಂತು. ಇಲ್ಲಿಯ ಕೃಷಿಕರ ನಡುವೆ ಬಡವ, ಶ್ರೀಮಂತ ಜಮೀನ್ದಾರ, ಗೇಣಿದಾರ ಎಂಬ ವರ್ಗಗಳೊಂದಿಗೆ ಇವರ ನಡುವಿನ ಅಂತರ ಕೂಡ ಹೆಚ್ಚಿತು. ಆರ್ಥಿಕವಾಗಿ ಬಲವಾಗಿದ್ದ ಶ್ರೀಮಂತರು ಜಮೀನ್ದಾರರು ಉಳಿದ ವರ್ಗಗಳನ್ನು ಆರ್ಥಿಕವಾಗಿ, ಸಾಮಾಜಿಕವಾಗಿ ಶೋಷಣೆಗೆ ಒಳಪಡಿಸಿದರು. ಇದೇ ಸಂದರ್ಭದಲ್ಲಿ ಗೇಣಿದಾರರು ಮಲೆನಾಡಿನ ಪ್ರದೇಶದಲ್ಲಿ ಜಮೀನ್ದಾರರ ವಿರುದ್ಧ ಸಂಘಟನೆಗಳನ್ನು ಹುಟ್ಟು ಹಾಕಲು

ಪ್ರಾರಂಭಿಸಿದರು (ಕಮಲೇಶ, ೨೦೦೦:೧,೨). ಈ ತರಹದ ಸಂಘಟನೆಗಳನ್ನು ಸಂಘಟಿಸುವ ಪ್ರಯತ್ನ ಮೊಟ್ಟಮೊದಲು ಗುರುತಿಸಿಕೊಂಡಿರುವುದು ಮಲೆನಾಡು ಪ್ರದೇಶದ ಕೇಂದ್ರಭಾಗವಾದ ಶಿವಮೊಗ್ಗ ಜಿಲ್ಲೆಯಲ್ಲಿ. ಇಲ್ಲಿ ಬಂಡವಾಳ ಶಾಹಿಗಳು ಭೂಮಾಲೀಕರು, ಜೀತಗಾರರಿಗೆ ಮತ್ತು ಗೇಣಿ ರೈತರಿಗೆ ಕೃಷಿ ಕೂಲಿ ಅಥವಾ ನ್ಯಾಯಯುತವಾದ ಬೆಲೆ ನೀಡದೆ ಶೋಷಣೆಗೆ ಒಳಪಡಿಸಿದರು. ಜೊತೆಗೆ ಗೇಣಿಯಲ್ಲಿ ಕೂಡ ಹೆಚ್ಚಿನ ಪಾಲನ್ನು ಪಡೆಯುತ್ತಿದ್ದರು. ಈ ಹಿನ್ನೆಲೆಯಲ್ಲಿ ನೋಡಿದಾಗ ೧೯೫೧ರಲ್ಲಿ ಕಾಗೋಡು ಸತ್ಯಾಗ್ರಹ ಕೂಡ ಬಹಳ ಮಹತ್ವ ಪಡೆದಿದೆ.

ಮಲೆನಾಡಿನಲ್ಲಿ ಇಂತಹ ಚಳುವಳಿಗಳು ನಡೆಯಲು ಪ್ರಾಕೃತಿಕ ಅಂಶಗಳೊಂದಿಗೆ ಮಲೆನಾಡಿನ ಸತ್ವ ಹಿರಿಕೊಂಡು ಬೌದ್ಧಿಕವಾಗಿ ಬೆಳೆದಂತ ಬುದ್ಧಿಜೀವಿಗಳೇ ಕಾರಣವಾಗಿದ್ದಾರೆ. ಇಲ್ಲಿಯ ಸಾಹಿತಿಗಳ ಹಾಗೂ ಜನಪರ ಹೋರಾಟಗಾರರಿಂದ ಈ ಚಳುವಳಿಗಳು ಪ್ರಾರಂಭವಾಗಿದ್ದು, ಪ್ರಸಿದ್ಧ ಸಾಹಿತಿಗಳಾದ ಕುವೆಂಪು, ಯು.ಆರ್.ಅನಂತಮೂರ್ತಿ, ತೇಜಸ್ವಿ, ಪಿ.ಲಂಕೇಶ್, ನಾ.ಡಿಸೋಜ ಇವರು ಪ್ರಕೃತಿಯ ಹಿನ್ನೆಲೆಯಲ್ಲಿ ಇಲ್ಲಿಯ ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯನ್ನು ಕುರಿತು ಬರೆದಿದ್ದು ಕಂಡುಬಂದಿದೆ. ಶತಶತಮಾನಗಳಿಂದಲೂ ಭೂಮಾಲೀಕರು, ಗೇಣಿದಾರಿಕೆಯ ನೋವನ್ನು ಅನುಭವಿಸಿ ಅದರ ವಿರುದ್ಧ ಸಿಡಿದು ನಿಂತವರಲ್ಲಿ. ಕಡಿದಾಳ ಮಂಜಪ್ಪ, ಶಾಂತವೇರಿ ಗೋಪಾಲಗೌಡ ಮತ್ತು ಗಣಪತಿಯಪ್ಪ ಪ್ರಮುಖರಾಗಿದ್ದಾರೆ. ಗೋಪಾಲಗೌಡರು ರೈತ ಕುಟುಂಬದಲ್ಲಿ ಜನಿಸಿದ್ದವರು. ಸಮಾಜವಾದಿ ಚಿಂತಕರಾಗಿ ಜನಸಾಮಾನ್ಯರ ಸಮಸ್ಯೆಗಳನ್ನು ಪೂರ್ಣವಾಗಿ ತಿಳಿದಿದ್ದು, ಅದರ ಪರಿಹಾರಕ್ಕೆ ತಾತ್ವಿಕವಾಗಿ ಹೋರಾಡಿದವರು. ಕಾಗೋಡು ಸತ್ಯಾಗ್ರಹದಲ್ಲೂ ಪಾಲ್ಗೊಂಡು ಗೇಣಿದಾರರ ಸಮಸ್ಯೆಯನ್ನು ಪರಿಹರಿಸಲು ಹೋರಾಡಿದ್ದು ಕಂಡುಬಂದಿದೆ. ಇನ್ನೊಬ್ಬ ಪ್ರಮುಖ ವ್ಯಕ್ತಿಯಾದ ಗಣಪತಿಯಪ್ಪನವರು ಕೂಡ ಗೇಣಿದಾರಿಕೆಯ ವಿರುದ್ಧ ಹೋರಾಡಿರುವುದು ಕಂಡುಬಂದಿದೆ (ಕಮಲೇಶ, ೨೦೦೦:೨).

ಈ ಮೇಲಿನ ಎಲ್ಲ ಅಂಶಗಳಾದ ಭೌಗೋಳಿಕತೆ, ಪಾಶ್ಚಾತ್ಯರ ಪ್ರಭಾವ ಭೂಮಾಲೀಕರ ಶೋಷಣೆ ಇತ್ಯಾದಿ ಅಂಶಗಳ ಹಿನ್ನೆಲೆಯಲ್ಲಿ ಕಡಿದಾಳ ಮಂಜಪ್ಪನವರು ಗೇಣಿದಾರರ ಮಗನಾಗಿ ಮಲೆನಾಡಿನಲ್ಲಿ ಮೊದಲು ಭೂಹೋರಾಟ ಪ್ರಾರಂಭಿಸಿದ್ದು, ಕುತುಹಲಕಾರಿಯಾಗಿದೆ. ಅಸಂಘಟಿತವಾದ ಗೇಣಿದಾರರನ್ನು ಅವರು ಮೊದಲು ಸಂಘಟಿಸಿದ್ದು ಕಂಡುಬಂದಿದೆ. ಭೌಗೋಳಿಕ ಹಿನ್ನೆಲೆಯ ಕಾರಣವಾಗಿ ಕೃಷಿ ಭೂಮಿಯು ಕಡಿಮೆ ಇರುತ್ತಿತ್ತು. ಇದ್ದಂತಹ ಭೂಹೀನರಾಗಿ ಭೂಮಿಯೂ ಶ್ರೀಮಂತರ, ಭೂಮಾಲೀಕರ ವಶದಲ್ಲಿದ್ದು, ಉಳಿದವರ ಜೀವನ ಶೋಷಣೆಯುಕ್ತವಾಗಿದ್ದರ ವಿರುದ್ಧ ಕಡಿದಾಳರು ಹೋರಾಡಿದ್ದಾರೆ. ಸರ್ಕಾರದ ಮಟ್ಟದಲ್ಲೂ ನಿಂತು ಭೂಸುಧಾರಣೆ ಶಾಸನವನ್ನು ತಂದು ಭೂಹಂಚಿಕೆಯಲ್ಲಿನ ಅಸಮಾನತೆ ಹೋಗಲಾಡಿಸಲು ಪ್ರಯತ್ನಿಸಿದ್ದಾರೆ. ಪ್ರಸ್ತುತ ಅಧ್ಯಯನವು ಈ ಎಲ್ಲ ವಿಷಯಗಳನ್ನು ಒಳಗೊಳ್ಳುತ್ತದೆ.

## ೧.೩. ಸ್ವಾತಂತ್ರ್ಯಪೂರ್ವದಲ್ಲಿನ ಮಲೆನಾಡಿನ ಭೂಹೋರಾಟಗಳು

ಮಲೆನಾಡಿನ ಭಾಗದಲ್ಲಿ ಕೃಷಿ ಪ್ರಧಾನವಾದ ಸಾಮಾಜಿಕ ವ್ಯವಸ್ಥೆ ಹೊಂದಿದ್ದು, ಇಲ್ಲಿಯ ಜನರು ಕೃಷಿಯನ್ನು ಮುಖ್ಯ ವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಅವರು ಜೀವನ ನಡೆಸಲು ಇದೇ ಆಧಾರವಾಗಿದೆ. ಆದರೆ ಈ ಭಾಗದಲ್ಲಿ ಕೃಷಿ ಭೂಮಿಯ ಅಸಮಾನ ಹಂಚಿಕೆಯಿಂದಾಗಿ ಮತ್ತು ಭೂ ಕಂದಾಯ ವ್ಯವಸ್ಥೆಯಲ್ಲಿನ ಅಸಮಾನತೆಯಿಂದಾಗಿ ಭೂ ಹೋರಾಟಗಳು ಕಂಡುಬರುತ್ತವೆ. ಆದರೆ ಈ ಹೋರಾಟವು ಉಳಿದೆಲ್ಲ ಕಡೆಗಿಂತಲು ವಿಭಿನ್ನವಾಗಿ ಕಂಡುಬರುತ್ತವೆ. ಇಲ್ಲಿಯ ಭೌಗೋಳಿಕ ಹಿನ್ನೆಲೆಯ ಮೂಲಕ ನೋಡಿದಾಗ ಈಗಾಗಲೇ ಹೇಳಿದ ಹಾಗೆ ಭೂಮಿಯಲ್ಲಿ ಶೇ.೭೫ರಷ್ಟು ಭೂಮಿ ಅರಣ್ಯದಿಂದ ಕೂಡಿದ್ದು, ಉಳಿದ ಶೇ.೨೫ರಷ್ಟು ಪ್ರದೇಶ ಮಾತ್ರ ಕೃಷಿಗೆ ಒಳಪಟ್ಟಿದೆ. ಇಲ್ಲಿ ವಾಣಿಜ್ಯ ಬೆಳೆಗಳನ್ನು ಹೆಚ್ಚಾಗಿ ಬೆಳೆಯುತಿದ್ದರು ಹಾಗೂ ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯನ್ನು ಸಮಾಜದ ಮೇಲ್ವರ್ಗದವರಾದ ಬ್ರಾಹ್ಮಣರು, ಲಿಂಗಾಯಿತರು ಹೊಂದಿರುತ್ತಿದ್ದರು. ಉಳಿದ ವರ್ಗದವರಿಗೆ ಗೇಣಿದಾರಿಕೆಯ ಸ್ವರೂಪದಲ್ಲಿ ಜಮೀನನ್ನು ನೀಡಿ ಅವರ ಮೇಲೆ ಸಾಮಾಜಿಕವಾಗಿ ಆರ್ಥಿಕವಾಗಿ ಹಿಡಿತ ಸಾಧಿಸುತ್ತಿದ್ದರು. ಈ ಶೋಷಣೆಯ ಮೂಲಕ ಭೂ ಹೋರಾಟ ಪ್ರಾರಂಭವಾಗಿದೆ.

ಪ್ರಾದೇಶಿಕವಾಗಿ ಸ್ವಾತಂತ್ರ್ಯಪೂರ್ವದಲ್ಲಿ ಮಲೆನಾಡಿನ ಭೂ ಹೋರಾಟವನ್ನು ಅಧ್ಯಯನ ಮಾಡಿದಾಗ ಬ್ರಿಟಿಷರ ಕಾಲದಲ್ಲಿ ಕರ್ನಾಟಕದಲ್ಲಿ ನಡೆದಂತಹ ರೈತ ಹೋರಾಟಗಳು ಏಕಮುಖವಾಗಿರಲಿಲ್ಲ. ಇದಕ್ಕೆ ಮುಖ್ಯಕಾರಣವೆಂದರೆ ಸ್ವಾತಂತ್ರ್ಯಪೂರ್ವದಲ್ಲಿ ಕನ್ನಡ ಭಾಷಾ ಪ್ರದೇಶವು ಐದು ದಿಕ್ಕಿನಲ್ಲಿ ಹರಡಿತ್ತು. ಹಳೆಯ ಮೈಸೂರು ಪ್ರಾಂತ್ಯ, ಮದ್ರಾಸ ಪ್ರಾಂತ್ಯ, ಬಾಂಬೆ ಪ್ರಾಂತ್ಯ, ಹೈದ್ರಾಬಾದ್ ಪ್ರಾಂತ್ಯ ಮತ್ತು ಕೊಡಗು ಪ್ರಾಂತ್ಯವೆಂದು ವಿಭಾಗಿಸಲಾಗಿತ್ತು. ಪ್ರಮುಖವಾಗಿ ಹಳೆಯ ಮೈಸೂರು ಸಂಸ್ಥಾನ ಮಲೆನಾಡಿನ ಭಾಗವನ್ನು ಒಳಗೊಂಡಿತ್ತು. ಈ ಎಲ್ಲ ಪ್ರಾಂತ್ಯಗಳ ವ್ಯವಸ್ಥೆ ಒಂದೇ ಆಡಳಿತದ ಅಡಿಯಲ್ಲಿ ಇರಲಿಲ್ಲ. ಹಾಗಾಗಿ ಒಂದು ಪ್ರಾಂತ್ಯದಿಂದ ಇನ್ನೊಂದು ಪ್ರಾಂತ್ಯದ ಭೂ ಹೋರಾಟದ ಸಮಸ್ಯೆ ವಿಭಿನ್ನವಾಗಿ ಕಂಡುಬರುತ್ತದೆ. ಮಲೆನಾಡ ಭಾಗದಲ್ಲಿ ಕಂಡುಬಂದಂತಹ ರೈತ ಹೋರಾಟಗಳು ಸಾಕಷ್ಟು ಕಡಿಮೆಯಿದ್ದರು ಸ್ವಾತಂತ್ರ್ಯಪೂರ್ವದ ಹೋರಾಟಗಳೆಲ್ಲ ಚಾರಿತ್ರಿಕವಾಗಿವೆ. ವಸಾಹತು ಕಾಲಘಟ್ಟದಲ್ಲಿ ನಗರ ದಂಗೆ, ಈಸೂರು ಘಟನೆ ಮತ್ತು ಕಾಫಿ ಬೆಳೆಗಾರರ ಹೋರಾಟಗಳು ಕಂಡುಬರುತ್ತವೆ.

### ನಗರದಂಗೆ ೧೮೩೦-೧೮೩೨

ನಗರದಂಗೆಯು ೧೯ನೆಯ ಶತಮಾನದ ಮೊದಲ ಭಾಗದಲ್ಲಿ ಮಲೆನಾಡಿನಲ್ಲಿ ನಡೆದಂತ ಪ್ರಮುಖ ರೈತ ಚಳುವಳಿಯಾಗಿದೆ. ಈ ನಗರ ಪ್ರದೇಶವು ಶಿವಮೊಗ್ಗ ಜಿಲ್ಲೆಯಲ್ಲಿದೆ. ದಂಗೆ ನಡೆದಂತ ಸಂದರ್ಭದಲ್ಲಿ ನಗರ ವಿಭಾಗವನ್ನು ಮೈಸೂರು ಸಂಸ್ಥಾನದ ಮುಮ್ಮಡಿ ಕೃಷ್ಣರಾಜ ಒಡೆಯರ್ ಆಳ್ವಿಕೆ

ನಡೆಸುತ್ತಿದ್ದರು. ಆದರೆ ಬ್ರಿಟಿಷರಿಗೆ ಅಧೀನರಾಗಿದ್ದುಕೊಂಡು ಕಂದಾಯವನ್ನು ನೀಡಬೇಕಾಗಿತ್ತು. ಇದೇ ಸಂದರ್ಭದಲ್ಲಿ ರೈತರು ಮೈಸೂರು ಕಂದಾಯ ಪದ್ಧತಿಯ ವಿರುದ್ಧ ನಡೆಸಿದಂತಹ ರೈತ ಹೋರಾಟವಾಗಿದೆ. ಈ ರೈತ ಚಳುವಳಿ ನಡೆಯಲು ಹಲವಾರು ಕಾರಣಗಳನ್ನು ಗುರುತಿಸಬಹುದು.

**ಕಾರಣಗಳು**

ಮುಮ್ಮಡಿ ಕೃಷ್ಣರಾಜ ಒಡೆಯರು ರಾಜ್ಯದ ಆದಾಯ ಹೆಚ್ಚಳಕ್ಕಾಗಿ ಕಂದಾಯ ವ್ಯವಸ್ಥೆಯಲ್ಲಿ ಹಲವಾರು ಬದಲಾವಣೆಗಳನ್ನು ಜಾರಿಗೆ ತಂದಿರುವುದೇ ನಗರದಂಗೆಗೆ ಪ್ರಮುಖ ಕಾರಣವಾಗಿದೆ ಎಂಬ ಅಂಶವನ್ನು ಉಮಾಮಹೇಶ್ವ ಅವರು 'ಕರ್ನಾಟಕದ ಇತಿಹಾಸ'(೨೦೦೨)ಎಂಬ ಕೃತಿಯಲ್ಲಿ ಅಭಿಪ್ರಾಯಪಟ್ಟಿದ್ದಾರೆ. ಈ ಬದಾಲವಣೆಯಲ್ಲಿ ಮುಖ್ಯವಾಗಿ ಒಡೆಯರು ಪ್ರತಿಯೊಂದು ತಾಲ್ಲೂಕಿಗೆ ಅಮಲ್ದಾರರನ್ನು ನೇಮಿಸಿದರು. ಅದೇ ತರಹ ನಗರದಲ್ಲು ನೇಮಿಸಿರುವುದು ಕಂಡುಬಂದಿದೆ. ಹಾಗೂ ಇಲ್ಲಿ ಗುತ್ತಿಗೆ ಪದ್ಧತಿಯನ್ನು ಜಾರಿಗೆ ತಂದು ರೈತರಿಗೆ ತೊಂದರೆಯಾಗದಂತೆ ನೋಡಿಕೊಳ್ಳುವುದಾಗಿ ತಿಳಿಸಿದರು. ಈ ಪದ್ಧತಿ ವರಮಾನ ಹೆಚ್ಚಿಸುವುದರ ಬದಲಾಗಿ ಆರ್ಥಿಕ ಪರಿಸ್ಥಿತಿ ಕುಸಿಯುವಂತೆ ಮಾಡಿತು. ಇದರಿಂದಾಗಿ ನಗರದಲ್ಲಿ ರೈತರು ದಂಗೆಯೆದ್ದರು ಎಂಬುದಾಗಿ ತಿಳಿಸಿದ್ದಾರೆ.

ನಗರದಂಗೆಯ ಕಾರಣಗಳನ್ನು ಕುರಿತು ಸೆಬಾಸ್ಟಿನ್ ಜೋಸೆಫ್ ಅವರು ಸಮಗ್ರವಾಗಿ ಅಧ್ಯಯನ ಮಾಡುವುದರ ಮೂಲಕ ಅಲ್ಲಿಯ ಜಾತಿ ಜನಾಂಗಗಳೇ ನಗರದಂಗೆಗೆ ಪ್ರಮುಖವಾಗಿ ಕಾರಣವಾಗಿವೆ ಎಂಬುದಾಗಿ ಅಭಿಪ್ರಾಯಪಟ್ಟಿದ್ದಾರೆ (ಬೋರಲಿಂಗಯ್ಯ ಮತ್ತು ಹುಚ್ಚಪ್ಪಮಾಸ್ತರ್, ೨೦೦೨:೪೯). ನಗರ ವಿಭಾಗದಲ್ಲಿ ಚಳುವಳಿ ನಡೆದಂತಹ ಸಂದರ್ಭದಲ್ಲಿ ಬ್ರಾಹ್ಮಣರು, ಲಿಂಗಾಯಿತರು, ಹೊಲೆಯರು, ಹಳೇಪೈಕ, ಮಾಲೆರು, ಮುಸ್ಲಿಮರು, ಕುರುಬರು, ಬೇಡರು ಮುಂತಾದ ಜಾತಿ ಜನಾಂಗಗಳು ಇಲ್ಲಿ ಪ್ರಧಾನವಾಗಿದ್ದವೆಂದು ತಿಳಿಸಿದ್ದಾರೆ. ಹಾಗೆಯೇ ೧೨೯ ಜಾತಿಗಳಿದ್ದವೆಂದು ದಾಖಲಾಗಿದೆ. ಈ ವರ್ಗಗಳಲ್ಲಿ ಬ್ರಾಹ್ಮಣರು ಉನ್ನತ ಸ್ಥಾನದಲ್ಲಿದ್ದರು. ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಪ್ರತಿಷ್ಠಿತ ಸ್ಥಾನಗಳಲ್ಲಿದ್ದರು ೧೨೦ ಅಗ್ರಹಾರಗಳನ್ನು ಹೊಂದಿದ್ದು, ಮೈಸೂರು ಸಂಸ್ಥಾನ ಇವರ ಭೂಮಿಗೆ ಕಂದಾಯ ಮನ್ನಾ ಮಾಡಿತ್ತು. ಐದು ಸಾವಿರ ಅಥವಾ ಹತ್ತು ಸಾವಿರ ರೂಪಾಯಿಗಳ ಸ್ಥಿರ ಮತ್ತು ಚರಾಸ್ತಿಗಳನ್ನು ಹೊಂದಿದ್ದರು. ಬ್ರಾಹ್ಮಣರ ನಂತರ ಗೌಡರು ಮತ್ತು ಪಟ್ಟಣಶೆಟ್ಟರು ವಿಶೇಷ ಹಕ್ಕು ಮತ್ತು ಸವಲತ್ತುಗಳುಳ್ಳವರಾಗಿದ್ದರು. ಅಧಿಕಾರ, ಸಂಪತ್ತು ಎಲ್ಲವು ಲಭಿಸಿತ್ತಾದ್ದರಿಂದ ಉತ್ತಮ ಸ್ಥಿತಿಯನ್ನು ಹೊಂದಿದ್ದರು. ಲಿಂಗಾಯಿತ ವರ್ಗವು ಕಂಡುಬಂದಿದ್ದು ಇವರು ವರ್ಣವ್ಯವಸ್ಥೆಯಲ್ಲಿ ಬ್ರಾಹ್ಮಣರ ಶ್ರೇಷ್ಠರು ಎಂಬ ವಿಚಾರವನ್ನು ಒಪ್ಪುತ್ತಿರಲಿಲ್ಲ. ಈ ಅಂಶವು ೧೮೩೦-೪೩೧ರ ದಂಗೆಯ ದಿನಗಳಲ್ಲಿ ಮತ್ತಷ್ಟು ತೀವದ್ರವಾಗಿ ಕಂಡುಬರುತ್ತದೆ. ಮೂರನೇ ಕೃಷ್ಣರಾಜ ಒಡೆಯರ ಕಾಲದಲ್ಲಿ ಬ್ರಾಹ್ಮಣರಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡಿದ್ದರಿಂದಾಗಿ ಲಿಂಗಾಯಿತರು ಆಕ್ರೋಶವನ್ನು ವ್ಯಕ್ತಪಡಿಸಿದರು.

ಸೆಬಾಸ್ಟಿಯನ್ ಜೋಸೆಫ್ ಅವರ ವಾದಕ್ಕೆ ಪೂರಕವಾಗಿ ಮುಝಫರ ಅಸ್ಸಾದಿ ಅವರು ಕೂಡ ನಗರ ದಂಗೆಗೆ ಬ್ರಾಹ್ಮಣರ ಪ್ರಾಬಲ್ಯವೇ ಮುಖ್ಯ ಕಾರಣವೆಂದು ತಿಳಿಸಿದ್ದಾರೆ (ವಿಜಯ,೨೦೦೧:೮೫೧). ಮುಂದುವರೆದು ಕರ್ನಾಟಕದ ಬ್ರಾಹ್ಮಣ ವಿರೋಧಿ ಹೋರಾಟವನ್ನು ೧೯೧೦-೨೦ರಲ್ಲಿ ಗುರುತಿಸಿದಲ್ಲದೆ ಈ ಹೋರಾಟದ ಆರಂಭದ ಮಜಲನ್ನು ನಾವು ನಗರದ ರೈತ ದಂಗೆಯಲ್ಲಿ ಕಾಣಬಹುದು ಎಂದಿದ್ದಾರೆ. ಮೈಸೂರು ಪ್ರಾಂತ್ಯದ ಬ್ರಾಹ್ಮಣರು ರಾಜಕೀಯ ಅಧಿಕಾರಗಳಾದ ಫೌಜುದಾರ ಹಾಗೂ ಇನ್ನಿತರ ಹುದ್ದೆಗಳನ್ನು ಅಲಂಕರಿಸಿದ್ದರು. ಅವರನ್ನು ರಾಜಕೀಯ ಅಧಿಕಾರದಿಂದ ಬದಲಾಯಿಸುವುದರೊಂದಿಗೆ ಇನ್ನಷ್ಟು ವಿಷಯಗಳು ದಂಗೆಗೆ ಕಾರಣವಾದವು.

ಭೂಕಂದಾಯ ವಿಭಾದಲ್ಲಿ ಕಂದಾಯವನ್ನು ನಿಗದಿ ಮಾಡುವ ಒಂದು ನಿರ್ದಿಷ್ಟ ಏಕರೂಪದ ವ್ಯವಸ್ಥೆ ಇರಲಿಲ್ಲ. ಇದು ಹಳ್ಳಿಯಿಂದ ಹಳ್ಳಿಗೆ, ತಾಲ್ಲೂಕಿನಿಂದ ತಾಲ್ಲೂಕಿಗೆ ಬದಲಾಗುತ್ತಿತ್ತು. ಕಂದಾಯದ ದರ ನಿಗದಿಯು ಹೆಚ್ಚುತ್ತಲೆ ಹೋದುದ್ದನ್ನು ನಾವು ಗಮನಿಸಬಹುದು. ವರ್ತಕರು ಮತ್ತು ಬಡ್ಡಿ ವ್ಯಾಪಾರಿಗಳು ಕೂಡ ಕಾರಣವಾಗಿದ್ದರು. ಬಹಳಷ್ಟು ಬಾರಿ ಸ್ಥಳೀಯ ವರ್ತಕರು ವ್ಯಾಪಾರಿಗಳಾಗಿಯೂ ಇರುತ್ತಿದ್ದರು. ಅಮಲ್ದಾರರು, ಪಟೇಲರು, ಸ್ವಂತ ಬಡ್ಡಿ ವ್ಯಾಪಾರವನ್ನು ನಡೆಸುತ್ತಿದ್ದರು. ಅಡಿಕೆ, ತೆಂಗು ಮುಂತಾದ ಬೆಳೆಗಳ ಬೆಲೆಗಳನ್ನು ವರ್ತಕರು ತಮಗಿಷ್ಟ ಬಂದಂತೆ ನಿರ್ಧರಿಸುತ್ತಿದ್ದರು. ಈ ವರ್ತಕರ ಬೆಲೆಗಳು ಯಾವಾಗಲು ರೈತರಿಗೆ ನಷ್ಟ ಮಾಡುವಂತದ್ದೇ ಆಗಿತ್ತು. ವ್ಯಾಪಾರಿಗಳು ಮೋಸ ಮಾಡುತ್ತಿದ್ದರು. ಹೀಗಾಗಿ ರೈತರು ವ್ಯಾಪಾರಿಗಳ ಲೇವಾದೇವಿಗಾರರ ವಿಷವೃತ್ತದಲ್ಲಿ ರೈತರು ಸಿಕ್ಕಿಹಾಕಿಕೊಂಡಿದ್ದರು.

ಮೂರನೇ ಕೃಷ್ಣರಾಜ ಒಡೆಯರ ಕಾಲದಲ್ಲಿ ಮಾರುಕಟ್ಟೆಯಲ್ಲಿ ಕೃಷಿ ಉತ್ಪಾದನೆಗಳು ಹೆಚ್ಚಿದ್ದು, ಬೆಲೆಗಳು ಕಡಿಮೆಯಾಗಿತ್ತು. ಹಾಗೂ ಇಲ್ಲಿ ಆರ್ಥಿಕ ಮುಗ್ಗಟ್ಟು ಉಂಟಾಗಿತ್ತು. ಇದಕ್ಕೆ ಮುಖ್ಯ ಕಾರಣ ಪ್ರತಿಯೊಬ್ಬ ಅಮಲ್ದಾರರಿಗೆ ನಿರ್ದಿಷ್ಟ ಮೊತ್ತದ ಕಂದಾಯವನ್ನು ವಸೂಲಿ ಮಾಡುವ ಹಕ್ಕನ್ನು ನೀಡಿದ್ದರು. ಆದರೆ ಅಮಲ್ದಾರರು ಅತೀರೇಖವಾಗಿ ಕಂದಾಯ ವಸೂಲಿ ಮಾಡಲು ಪ್ರಾರಂಭಿಸಿದ್ದು ಕಾರಣವಾಯಿತು. ೧೮೩೦-೧೮೩೧ರ ಹೊತ್ತಿಗೆ ಪ್ರತಿಷ್ಠಿತ ನೌಕರರು ಹಣ ದುರುಪಯೋಗ ಮಾಡುವುದಲ್ಲದೆ ಡಾಕಾಯಿತರೊಂದಿಗೆ ಶಾಮೀಲಾದ ಪ್ರಸಂಗಗಳು ಕಂಡುಬರುತ್ತಿದ್ದವು. ಇಂತಹ ಅಂಶಗಳೇ ನಗರದಂಗೆಗೆ ಮೂಲಕ ಕಾರಣವಾಗಿ ಕಂಡುಬಂದಿದೆ.

ನಗರದಂಗೆ ನಡೆಯಲು ತತಕ್ಷಣದ ಕಾರಣವಾಗಿ ಈ ಕೆಳಗಿನ ಅಂಶವನ್ನು ಪರಿಗಣಿಸಬಹುದು. ಮೂರನೇ ಕೃಷ್ಣರಾಜ ಒಡೆಯರ ಅಧಿಕಾರಾವಧಿಯಲ್ಲಿ ಅಂದರೆ ೧೮೧೬ ಮತ್ತು ೧೮೨೭ರಲ್ಲಿ ರಾಜ್ಯದಲ್ಲಿ ಭೀಕರವಾದ ಕ್ಷಾಮ ಉಂಟಾಗಿತ್ತು. ಇದಕ್ಕಾಗಿ ರಾಜ್ಯದ ಬೊಕ್ಕಸದಿಂದ ಅಪಾರ ಹಣ ಜನರ ಪರಿಹಾರ ಕಾರ್ಯಗಳಿಗೆ ವಿನಿಯೋಗವಾಗಿತ್ತು. ಹಾಗೂ ಇನ್ನೊಂದು ಮುಖ್ಯವಾದ ಅಂಶವೆಂದರೆ ಒಡೆಯರು ಬ್ರಿಟಿಷರಿಗೆ ಅಧೀನವಾಗಿದ್ದು ಬ್ರಿಟಿಷರು ನಡೆಸಿದಂತಹ ಹೋರಾಟಗಳಿಗೆಲ್ಲ ಮೈಸೂರು ಸೈನ್ಯ ಸಹಾಯ ಮಾಡಬೇಕಿತ್ತು. ಇದಕ್ಕಾಗಿ ಕೂಡ ಅಧಿಕ ಹಣ ವ್ಯಯವಾಗಿತ್ತು.

ಇದೇ ಸಂದರ್ಭದಲ್ಲಿ ಬಿದನೂರು ಪ್ರಾಂತ್ಯದ ಜನರು ಕಂದಾಯವನ್ನು ಸರಿಯಾಗಿ ಪಾವತಿ ಮಾಡಿರಲಿಲ್ಲ. ನಗರ ಪ್ರಾಂತ್ಯದಿಂದ ರಾಜ್ಯದ ಬೊಕ್ಕಸಕ್ಕೆ ೧೩ ಲಕ್ಷ ರೂಪಾಯಿ ಬರಬೇಕಾಗಿತ್ತು. ಆದರೆ ಅಲ್ಲಿಯ ಫೌಜುದಾರನಾದ ಅಪ್ಪಣ್ಣ ಒಡೆಯರ ಪೂರ್ವಾನುಮತಿ ಇಲ್ಲದೆ ೧೩ ಲಕ್ಷ ರೂಪಾಯಿ ಕಂದಾಯದಲ್ಲಿ ೭ ರೂಪಾಯಿ ಕಂದಾಯವನ್ನು ಮಾಫಿ ಮಾಡಿದನು. ವಿಷಯ ತಿಳಿದ ಮಹಾರಾಜರು ಅಪ್ಪಣ್ಣನನ್ನು ಅಧಿಕಾರದಿಂದ ಪದಚ್ಯುತಗೊಳಿಸಿದರು. ನಂತರ ವೀರರಾಜ ಎಂಬುವನನ್ನು ನಗರದ ಹೊಸ ಫೌಜುದಾರನಾಗಿ ನೇಮಕ ಮಾಡಿದನು. ವೀರರಾಜನು ಫೌಜುದಾರನಾಗಿ ಅಪ್ಪಣ್ಣನು ಮಾಡಿರುವ ಭ್ರಷ್ಟಾಚಾರವನ್ನು ಬಯಲು ಮಾಡಿ ತೆರಿಗೆಯನ್ನು ಜನರಿಂದ ಎತ್ತಲು ಪ್ರಾರಂಭಿಸಿದನು. ಅಪ್ಪಣ್ಣನ ಭ್ರಷ್ಟಾಚಾರ ಬಯಲಿಗೆಳೆದಾಗ ಅಪ್ಪಣ್ಣ ಮತ್ತು ಅವನ ಸಹಚರರು ಅತೃಪ್ತಿಗೊಂಡು ರಾಜನ ವಿರುದ್ಧವಾಗಿ ಸಂಚು ಮಾಡಿ ದಂಗೆ ಏಳಲು ಪ್ರಾರಂಭಿಸಿದರು.

ಇದೇ ಸಂದರ್ಭದಲ್ಲಿ ಸದರಮಲ್ಲನೆಂಬುವನು ಬೂದಿಬಸಪ್ಪನೆಂಬ ಹೆಸರಿನಲ್ಲಿ ಬಿದನೂರಿನ ಸಿಂಹಾಸನಕ್ಕೆ ಹಕ್ಕುದಾರನೆಂದು ಹೇಳಿಕೊಳ್ಳುತ್ತಿದ್ದನು. ಇವನು ಕಳವು ಅಪಾದನೆಗಳಲ್ಲಿ ಹಲವು ಬಾರಿ ಸೆರೆಮನೆ ಸೇರಿದ್ದನು. ಇವನು ಬಿದನೂರಿನ ರಾಜಪುರೋಹಿತನಿಂದ ರಾಜಮುದ್ರೆಯನ್ನು ಕದಿದ್ದರಿಂದ ಒಂದು ಬಾರಿ ಅಪರಾಧ ಮಾಡಿ ನ್ಯಾಯಾಲಯದಿಂದ ಬಿಡುಗಡೆ ಹೊಂದುವಾಗ ನ್ಯಾಯಾಲಯದ ಮುದ್ರೆಯುಳ್ಳ ಪತ್ರದಲ್ಲಿ ಬೂದಿಬಸಪ್ಪ ನಗರ ಖಾವಿಂದ ಎಂದು ಬರೆಸಿದನು. ಬೂದಿಬಸಪ್ಪ ನಗರ ಖಾವಿಂದ ಎಂಬ ಇವನ ಸುಳ್ಳು ಜನರು ನಂಬಿದರು. ೧೮೩೦ರಲ್ಲಿ ಕಂದಾಯ ಬಾಕಿ ವಸೂಲಿ ಸಮಯದಲ್ಲಿ ಉಂಟಾದ ದಂಗೆಯಲ್ಲಿ ತಾನೇ ನಗರದ ಅರಸು ಎಂದು ಘೋಷಿಸಿಕೊಂಡ ಬೂದಿಬಸಪ್ಪನು ರೈತರ ಕಂದಾಯವನ್ನು ಮಾಫಿ ಮಾಡಿರುವುದಾಗಿ ಭರವಸೆ ನೀಡಿದನು. ಪದಚ್ಯುತ ಫೌಜುದಾರನು ಇವನ ಜೊತೆ ಸೇರಿಕೊಂಡು ಕ್ಷೋಭೆಯುಂಟು ಮಾಡಿದನು. ಹೀಗಾಗಿ ರಾಜ್ಯದಲ್ಲಿ ಹಲವೆಡೆ ದಂಗೆಯೆದ್ದರು

ಈ ಹೋರಾಟವು ನಗರಕ್ಕೆ ಮಾತ್ರ ಸೀಮಿತಗೊಳ್ಳದೇ ವಿಶಾಲ ವ್ಯಾಪ್ತಿಯನ್ನು ಪಡೆದದ್ದನ್ನು ಕಾಣಬಹುದು. ಇದರಿಂದಾಗಿ ಮಹಾರಾಜರು ಈ ದಂಗೆಗಳನ್ನಡಗಿಸಲು ಪ್ರಯಾಸ ಪಡಬೇಕಾಯಿತು. ತರೀಕೆರೆಯ ಸರ್ಜ ಹನುಮಂತಪ್ಪನಾಯಕ, ಬೆಂಗಳೂರಿನ ಫೌಜುದಾರ, ಹೊನ್ನಾಳಿ, ಹೆಬ್ಬೂರು, ಕಾಮನದುರ್ಗ ಮುಂತಾದ ಕಡೆ ಈ ದಂಗೆಯ ಪ್ರಭಾವ ಉಂಟಾಗಿ ನಗರಕ್ಕೆ ಸಹಾಯ ಮಾಡಲು ಬಂದಾಗ ಇವರನ್ನು ಬಂಧಿಸಲಾಗಿತ್ತು. ದಂಗೆಯನ್ನು ಮುಮ್ಮಡಿ ಕೃಷ್ಣರಾಜ ಒಡೆಯರಿಂದ ಅಡಗಿಸಲು ಸಾಧ್ಯವಾಗಲಿಲ್ಲ. ತೀವ್ರಗೊಂಡಂತೆ ಬ್ರಿಟಿಷ್ ಅಧಿಕಾರಿಗಳಾದ ಕರ್ನಲ್ ಬ್ರಿಕ್ಸ್, ಲೆಫ್ಟಿನೆಂಟ್ ರಾಕ್‌ಪೋರ್ಟ್ ಕ್ರಾಂತಿಯನ್ನು ಅಡಗಿಸಿದರು.

ಈ ದಂಗೆಯ ಪರಿಣಾಮವಾಗಿ ಗರ್ವನರ್ ಜನರಲ್ ಲಾರ್ಡ್ ವಿಲಿಯಂ ಬೆಂಟಿಂಕನು ೧೮೩೧ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರನ್ನು ಅಧಿಕಾರದಿಂದಿಳಿಸಿ ಮೈಸೂರಿನ ಆಡಳಿತವನ್ನು ತಾನೇ

ವಹಿಸಿಕೊಂಡು ಅದರ ಆಡಳಿತ ನಿರ್ವಹಣೆಗಾಗಿ ಕಮೀಷನರುಗಳನ್ನು ನೇಮಿಸಿದನು. ಹೀಗೆ ೧೮೩೧ರಲ್ಲಿ ರಾಜ್ಯಾಡಳಿತವು ಮಹಾರಾಜರ ಕೈತಪ್ಪಿ ೫೧ ವರ್ಷಗಳ ಕಾಲ ಬ್ರಿಟಿಷ್ ಕಮಿಷನರುಗಳ ಆಡಳಿತಕ್ಕೊಳಪಟ್ಟಿತು.

ಒಟ್ಟಾರೆಯಾಗಿ ಈ ದಂಗೆಯೂ ನಗರ ವಿಭಾಗಕ್ಕೆ ಪೂರ್ತಿಯಾಗಿ ಹಬ್ಬುವುದರೊಂದಿಗೆ ಸಂಸ್ಥಾನದ ಬೇರೆ ಬೇರೆ ಕಡೆಯಲ್ಲು ಕಂಡುಬಂತು. ಅಧಿಕಾರಶಾಹಿಯ ಕೈಯಲ್ಲಿ ಶೋಷಣೆಗೆ ಒಳಪಟ್ಟ ರೈತಾಪಿ ವರ್ಗಗಳು ಪಾಲ್ಗೊಂಡು ಹೋರಾಡಿದರು. ಸಾವಿರಾರು ಜನ ರೈತರು ಸೇರಿದ್ದರಿಂದ ಚಳುವಳಿಯ ಸ್ವರೂಪವೇ ಬದಲಾಗಿ ವ್ಯಾಪಕತೆಯನ್ನು ಪಡೆದ್ದಿತು. ಹಾಗೂ ಬ್ರಾಹ್ಮಣ ವಿರೋಧಿಯಾಗಿ ಅಧಿಕಾರಿಗಳ ವಿರೋಧಿಯಾಗಿ ರೂಪುಗೊಂಡಂತಹ ಚಳುವಳಿಯಾಗಿತ್ತು. ಮಲೆನಾಡ ಭಾಗದಲ್ಲಿ ಸ್ವಾತಂತ್ರ್ಯಪೂರ್ವದಲ್ಲಿ ನಡೆದ ಪ್ರಮುಖ ರೈತ ಹೋರಾಟವಾಗಿ ಕಂಡುಬಂದಿದ್ದಲ್ಲದೆ ವಸಹಾತುಶಾಹಿ ಹಾಗೂ ಪ್ರಾಂತೀಯ ರಾಜ್ಯದೊಂದಿಗೆ ನೇರವಾಗಿ ಸಂಘರ್ಷಕ್ಕಿಳಿಯಿಲ್ಲತ್ತದೇ ಪ್ರಾಂತೀಯ ರಾಜ್ಯದ ಅಧಿಕಾರದ ಅವನತಿಗೂ ಕಾರಣವಾಯಿತು (ವಿಜಯ್(ಸಂ), ೨೦೦೧:೮೫೧-೮೫೨), (ಬೋರಲಿಂಗಯ್ಯ, ಹುಚ್ಚಪ್ಪ ಮಾಸ್ತರ, ೨೦೦೨:೨೯೮-೨೯೯, ೩೦೩-೩೦೪), (ಗೋವಿಂದರಾಜು, ೨೦೦೫:೨೪೫-೨೪೬).

## ಕಾಫಿ ಬೆಳೆಗಾರರ ಹೋರಾಟ

ಈಗಾಗಲೇ ಹೇಳಿದ ಹಾಗೆ ಮಲೆನಾಡಿನ ಭೌಗೋಳಿಕ ಲಕ್ಷಣವು ವಾಣಿಜ್ಯ ಬೆಳೆಗಳನ್ನು ಬೆಳೆಯಲು ಪೂರಕವಾದಂತಹ ಪ್ರದೇಶವನ್ನು ಒಳಗೊಂಡಿದೆ. ಈ ಕಾರಣದಿಂದಾಗಿ ಬ್ರಿಟೀಷರು ಮಲೆನಾಡಿನ ಭಾಗದ ಕಡೆಗೆ ಹೆಚ್ಚು ಗಮನ ನೀಡಿ ವಾಣಿಜ್ಯ ಬೆಳೆಗಳನ್ನು ಬೆಳೆಯಲು ಪ್ರೋತ್ಸಾಹ ನೀಡಿದ್ದು ಕಂಡುಬಂದಿದೆ. ಅದರಲ್ಲು ಮೈಸೂರು ಸಂಸ್ಥಾನದಲ್ಲಿ ಬ್ರಿಟಿಷ್ ಕಮೀಷನರ್ ಆಳ್ವಿಕೆ ಪ್ರಾರಂಭವಾದಂದಿನಿಂದಲೂ ವ್ಯವಸಾಯ ಕ್ಷೇತ್ರದಲ್ಲಿ ಹೊಸ ಬದಲಾವಣೆಯನ್ನು ತಂದರು. ವ್ಯವಸಾಯ ಕ್ಷೇತ್ರ ಪ್ರಮುಖ ಬದಲಾವಣೆಯೆಂದರೆ ಕಾಫಿ ಮುಂತಾದ ಆರ್ಥಿಕ ಬೆಳೆಗಳನ್ನು ಬೆಳೆಯಲು ಪ್ರೋತ್ಸಾಹಿಸಿದ್ದು ಕಂಡುಬಂದಿದೆ. ಇಂತಹ ಬದಲಾವಣೆಯನ್ನು ಮೊದಲು ಜಾರಿಗೆ ತಂದವನು. ೧೮೬೧ರಲ್ಲಿ ಕಮಿಷನರಾಗಿ ಆಡಳಿತವನ್ನು ವಹಿಸಿಕೊಂಡ ಬೌರಿಂಗನು. ಇವನ ಅವಧಿಯಲ್ಲಿ ಕಾಫಿ ಮತ್ತು ಏಲಕ್ಕಿ ಬೆಳೆಗಳನ್ನು ಬೆಳೆಯಲು ಪ್ರೋತ್ಸಾಹ ನೀಡುವುದರ ಮೂಲಕ ಸರ್ಕಾರದಿಂದ ಮಲೆನಾಡಿನ ಪಶ್ಚಿಮ ಘಟ್ಟದ ಕಾಡುಗಳನ್ನು ಬಹಿರಂಗವಾಗಿ ಹರಾಜು ಹಾಕಿ ಒಡೆತನ ಕೊಡಿಸಿದನು. ಇದರಿಂದಾಗಿ ಸಾಂಪ್ರದಾಯಿಕ ವ್ಯವಸಾಯದಿಂದ ವಾಣಿಜ್ಯ ಬೆಳೆಗಳತ್ತ ಬದಲಾವಣೆಗೊಂಡು ರೈತ ಸಮುದಾಯ ಆರ್ಥಿಕ ಪುನಶ್ಚೇತನ ಪಡೆದುಕೊಂಡಿತು.

ವಾಣಿಜ್ಯ ಬೆಳೆಗಳಿಗೆ ಪ್ರೋತ್ಸಾಹ ನೀಡಿದಾಗ ಮಲೆನಾಡಿನಲ್ಲಿ ಬಂಡವಾಳಶಾಹಿಗಳು ಹುಟ್ಟಿಕೊಂಡಿದ್ದು, ಅದೇ ಸಂದರ್ಭದಲ್ಲಿ ಭೂಮಾಲೀಕನು ಕೂಡ ಆಗಿರುತ್ತಿದ್ದ. ಈ ಬಂಡವಾಳಶಾಹಿ

ಉತ್ಪಾದನೆಯಿಂದಾಗಿ ವರ್ಗಪ್ರಜ್ಞೆಯು ಕಂಡುಬರುತ್ತದೆ. ವರ್ಗಗಳು ಹುಟ್ಟಲು ಮುಖ್ಯ ಕಾರಣ ಬಂಡವಾಳಶಾಹಿ ಬೆಳೆವಣಿಗೆ ಪ್ರಾಂತ್ಯದ ಎಲ್ಲಾ ಕಡೆ ಒಂದೇ ಕಾಲದಲ್ಲಿ ಒಂದೇ ರೂಪದಲ್ಲಿ ಹರಡಲಿಲ್ಲ. ಕೆಲವು ಸ್ಥಳಗಳಿಗೆ ಮಾತ್ರ ಸೀಮಿತವಾಗಿತ್ತು. ಇದರಿಂದ ಅಸಮರ್ಪಕ ಬೆಳವಣಿಗೆ ಕಾರಣವಾಗಿತ್ತು. ಮುಝಾಫರ ಅಸ್ಸಾದಿ ಅವರು ಬಂಡವಾಳಶಾಹಿ ಬೆಳೆಗಳಲ್ಲಿ ಕಾಫಿ ಬೆಳೆಯು ಅತೀ ಮುಖ್ಯ ಬೆಳೆಯೆಂದು ಗುರುತಿಸಿದ್ದಾರೆ. ಹಾಗೂ ಬಂಡವಾಳಶಾಹಿಗಳ ಸೃಷ್ಟಿಗೆ ಕಾರಣವಾಗಿತ್ತು ಎಂಬ ಅಂಶವನ್ನು ತಿಳಿಸಿದ್ದಾರೆ. ಈ ಬೆಳವಣಿಗೆ ಮಲೆನಾಡ ಪ್ರದೇಶಕ್ಕೆ ಸೀಮಿತವಾಗಿದಲ್ಲದೆ ಕೂಡ ವರ್ಗಪ್ರಜ್ಞೆ ಬೆಳೆಯಲು ಕಾರಣವಾಯಿತು. ಆದರೆ ಈ ಪ್ರಜ್ಞೆ ವರ್ಗಗಳಲ್ಲಿ ನೇರ ಹೋರಾಟಕ್ಕೆ ಎಡೆಮಾಡಿಕೊಲಿಲ್ಲ. ಈ ಹೋರಾಟದ ಪ್ರಜ್ಞೆಯು ಸಂಘಟನೆಗಳನ್ನು ಹುಟ್ಟುಹಾಕುವುದರ ಮೂಲಕ ಕಾಫಿ ಬೆಳೆಗಾರರು ಬೇಡಿಕೆಗಳನ್ನು ಮುಂದಿಡಲು ಪ್ರಯತ್ನಿಸಿದರು. ಕಾಫಿ ಬೆಳೆಗಾರರು ಮುಖ್ಯವಾಗಿ ಮೂರು ಸಂಘಟನೆಗಳನ್ನು ೧೮೮೦ ರಿಂದ ೧೯೧೦ರಲ್ಲಿ ಹುಟ್ಟು ಹಾಕಿದರು. ಮೊದಲನೆಯದಾಗಿ "ಬಾಬ ಬುಡಾನ್ ಪ್ಲಾಂಟರ್ಸ್ ಅಸೋಶಿಯೇಷನ್" ಎಂಬ ಸಂಘಟನೆಯನ್ನು ಕಡೂರಿನಲ್ಲಿ ಸ್ಥಾಪಿಸಿದರು. ಎರಡನೆಯಾಗಿ ಸಕಲೇಶಪುರದಲ್ಲಿ "ಸೌತ ಮೈಸೂರ್ ಪ್ಲಾಂಟರ್ಸ್ ಅಸೋಶಿಯೇಶನನ್ನು" ಸ್ಥಾಪಿಸಿದರು. ಕೊನೆಯದಾಗಿ "ನಾರ್ತ್ ಮೈಸೂರ್ ಸೀಟಿವ್ ಪ್ಲಾಂಟರ್ಸ್ ಅಸೋಶಿಯೇಷನ್" ಚಿಕ್ಕಮಗಳೂರಿನಲ್ಲಿ ಸ್ಥಾಪಿಸಿದರು. ಈ ಸಂಘಟನೆಗಳ ಮೂಲಕ ತಮ್ಮ ಬೇಡಿಕೆಗಳನ್ನು ಮುಂದಿಟ್ಟರು. ಕಾಫಿ ಬೆಳೆಗಾರರ ಮುಖ್ಯ ಬೇಡಿಕೆಗಳು ಹೀಗಿದ್ದವು.

೧. ಚಿಕ್ಕಮಗಳೂರು ಹಾಗೂ ಮಂಗಳೂರಿಗೆ ರೈಲು ಸಂಪರ್ಕ

೨. ಕಾಫಿ ಪ್ಲಾಂಟರ್ಸ್‌ಗಳಿಗೆ ಸಾಲ

೩. ಕಾಫಿ ಕಳ್ಳತನ ತಡೆಗಟ್ಟಲು ಕಾಯಿದೆ

೪. ಏಲಕ್ಕಿ ಬೆಳೆಯಲು ಅವಕಾಶ

ಈ ಮುಂತಾದ ವಿಷಗಳಿಗೆ ಹೋರಾಟ ನಡೆಸಿದರು. ಕಾಫಿ ಬೆಳೆಗಾರರು ಆರಂಭದಲ್ಲಿಯೂ ತಮಗೆ ಬೇಕಾದ ಅಗತ್ಯಗಳನ್ನು ಪಡೆಯಲು ಹುಟ್ಟಿಕೊಂಡ ಸಂಘಟನೆಗಳಾಗಿವೆ ಎಂಬುದಾಗಿ ಈ ಮೇಲಿನ ಅಂಶಗಳೊಂದಿಗೆ ಮುಝಾಫರ ಅಸ್ಸಾದಿ ಅವರು ವ್ಯಕ್ತಪಡಿಸಿದ್ದಾರೆ (ವಿಜಯ್, ೨೦೦೧:೮೫೨).

### ಈಸೂರು ಘಟನೆ (೧೯೪೨)

ಈಸೂರು ಚಳುವಳಿಯು ಭಾರತದ ಮತ್ತು ಕರ್ನಾಟಕ ಸ್ವಾತಂತ್ರ್ಯ ಚಳುವಳಿಯಲ್ಲಿ ನಡೆದಂತಹ ಚರಿತ್ರಾರ್ಹ ಘಟನೆಯಾಗಿದೆ. ಈಸೂರು ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲ್ಲೂಕಿನ ಕುಮುದ್ವತಿ ನದಿಯ ದಂಡೆಯ ಮೇಲಿರುವ ಗ್ರಾಮವಾಗಿದೆ. ಈ ಗ್ರಾಮದಲ್ಲಿ ರೈತರು ಹೆಚ್ಚಾಗಿ ಕಂಡುಬರುತ್ತಿದ್ದರು. ದೇಶದ್ಯಾಂತ ಸ್ವಾತಂತ್ರ್ಯ ಚಳುವಳಿ ಬಿರುಸಾದಂತೆ, ಕಾಂಗ್ರೆಸ್ ಪಕ್ಷದ ಕರೆಯಂತೆ ಈಸೂರಿನ ರೈತರು ಕೂಡ ಗಾಂಧೀಜಿ ಕೈಗೊಂಡಿರುವ ಕ್ವಿಟ್ ಇಂಡಿಯಾ ಚಳುವಳಿಗೆ ಬೆಂಬಲವಾಗಿ ನಿಂತರು.

ಈಸೂರು ಗ್ರಾಮವನ್ನು ಚಳುವಳಿಯ ಕೇಂದ್ರವನ್ನಾಗಿ ಮಾಡಿಕೊಂಡು ೧೯೪೨ರ ಆಗಸ್ಟ್ ೯ ರಿಂದಲೇ ಗಾಂಧಿ ಟೋಪಿ ಧರಿಸಿ ರಾಷ್ಟ್ರಧ್ವಜ ಹಿಡಿದು ಚಳುವಳಿಯನ್ನು ರೈತರು ಆರಂಭಿಸಿದರು. ದಿನವೂ ಪ್ರಭಾತಫೇರಿಯ ಹೋಗುವುದರ ಮೂಲಕ ಚಳುವಳಿಯನ್ನು ತೀವ್ರ ಸ್ವರೂಪಕ್ಕೆ ಕೊಂಡಯೋಧರು. ೧೯೪೨ರ ಸೆಪ್ಟೆಂಬರ್ ೨೫ರಂದು ಈಸೂರನ್ನು ಸ್ವತಂತ್ರ ಗ್ರಾಮ ಎಂದು ಘೋಷಿಸಿಕೊಂಡರು. ಈ ಕುರಿತಂತೆ ಎಸ್.ಚಂದ್ರಶೇಖರ ಅವರ ಪ್ರಕಾರ ಈಸೂರು ಚಳುವಳಿಯನ್ನು ಎಲ್ಲೆಡೆ ಸಾಧ್ಯವಾಗದೇ ಹೋದ ಜವಬ್ದಾರಿ ಸ್ವರಾಜ್ಯ ಆಡಳಿತವನ್ನು ಜನತೆ ಘೋಷಿಸಿಕೊಂಡು ಬೇಜಬ್ದಾರಿ ಸರ್ಕಾರಕ್ಕೆ ಬಹಿಷ್ಕಾರ ಹಾಕಿದರು ಎಂಬುದಾಗಿ ತಿಳಿಸಿದ್ದಾರೆ (ಚಂದ್ರಶೇಖರ, ೨೦೦೨:೧೩೩-೧೩೪). ಸರ್ಕಾರದ ವಿರುದ್ಧವೇ ಹೋರಾಟ ನಡೆಸಿ ತಮಗೆ ಉಂಟಾಗಿದ್ದ ಅಸಮಾಧಾನವನ್ನು ತೋರ್ಪಡಿಸಿದರು. ಚಳುವಳಿ ತೀವ್ರಗೊಂಡಂತೆ ಈಸೂರನ್ನು ಸ್ವತಂತ್ರ ಹಳ್ಳಿ ಎಂಬ ಫಲಕವನ್ನು ಊರ ಮುಂದೆ ಹಾಕಿ ೧೨ ವರ್ಷದ ಮಲ್ಲಪ್ಪನನ್ನು ಸರ್ವಾಧಿಕಾರಿ, ೧೦ ವರ್ಷದ ಜಯಪ್ಪನನ್ನು ಅಮಲ್ದಾರನೆಂದು ಘೋಷಿಸಿ ಊರು ದೇವಾಲಯವನ್ನು ಆಡಳಿತ ಕಚೇರಿಯೆಂದು ಘೋಷಿಸಿ ಸ್ವತಂತ್ರಾಡಳಿತ ನಡೆಸಲಾರಂಭಿಸಿದರು. ಗ್ರಾಮಾಧಿಕಾರಿಯ ಸರ್ಕಾರಿ ಕಡತವನ್ನು ವಶಕ್ಕೆ ತೆಗೆದುಕೊಂಡು ಅವರಿಗೆ ಒಂಟಿ ಕಾಲಿನ ಮೇಲೆ ನಿಲ್ಲುವ ಒಂದು ದಿವಸದ ಶಿಕ್ಷೆ ವಿಧಿಸಿ ಸ್ವತಂತ್ರಾಡಳಿತಕ್ಕೆ ಬದ್ಧವಾಗಿರುವ ಮುಚ್ಚಳಿಕೆ ಬರೆಸಿಕೊಂಡು ನಂತರ ಬಿಡುಗಡೆ ಮಾಡಿದರು.

ಈ ಹೋರಾಟದಲ್ಲಿ ಈಸೂರು ರೈತರು ಬ್ರಿಟಿಷರ ವಿರುದ್ಧ ಹೋರಾಡುತ್ತಿದ್ದರು ಕೂಡ ಮೈಸೂರು ರಾಜಶಾಹಿ ಸರ್ಕಾರ ಬೆಂಬಲ ನೀಡಲಿಲ್ಲ. ಸಾಮ್ರಾಜ್ಯಶಾಹಿಗಳಿಗೆ ಬೆಂಬಲ ನೀಡುವುದರ ಮೂಲಕ ರೈತರ ಹೋರಾಟ ಹತ್ತಿಕ್ಕಲು ಮುಂದಾಯಿತು. ಊರಿನ ಶ್ಯಾನಭೋಗ, ಪಾಟೀಲ ಇವರಿಗೆ ರಾಜೀನಾಮೆ ಕೇಳಿ ಗಾಂಧಿಟೋಪಿ ಧರಿಸುವಂತೆ ಅಗ್ರಹಿಸಲಾಯಿತು. ಈ ಸುದ್ದಿ ಬ್ರಿಟಿಷ್ ಮತ್ತು ಅಮಲ್ದಾರ್ ಚೆನ್ನಕೃಷ್ಣಯ್ಯನವರಿಗೆ ತಲುಪಿದಾಗ ಅವರು ಪೊಲೀಸಿನವರೊಡನೆ ಆಗಮಿಸಿದರು. ಜನರು ಪ್ರತಿಭಟಿಸಿದರು. ಇದನ್ನು ಸಹಿಸದ ರೊಚ್ಚಿಗೆದ್ದ ಪೋಲಿಸ್ ಲಾಠಿ ಪ್ರಹಾರ ಮಾಡಿದಾಗ ಊರಿನ ಜನತೆ ರೋಷದಿಂದ ತಿರುಗಿಬಿದ್ದು ಅಮಲ್ದಾರ್ ಚನ್ನಕೃಷ್ಣಯ್ಯ ಮತ್ತು ಸಬ್‌ಇನ್ಸ್‌ಪೆಕ್ಟರ್ ಕೆಂಚೇಗೌಡರ ಸಾವಿನ ಮೂಲಕ ಪರಿಸ್ಥಿತಿ ಗಂಭೀರ ಸ್ವರೂಪ ಪಡೆಯಿತು. ಮರುದಿನ ಜಿಲ್ಲಾಧಿಕಾರಿ ಗ್ರಾಮದ ಜನಸಂಖ್ಯೆಗಿಂತ ಹೆಚ್ಚಿನ ಪೋಲಿಸ್ ಮತ್ತು ಸೈನ್ಯದೊಡನೆ ಬಂದಾಗ ಜನ ಭಯಭ್ರಾಂತರಾದರು. ಈಸೂರಿನ ಜನತೆಯ ಮೇಲೆ ಗುಂಡಿನ ಮಳೆಗರೆಯಲಾಯಿತು. ಹಲವಾರು ಜನ ಮರಣ ಹೊಂದಿದ್ದರು. ಹೆಂಗಸರ ಮೇಲೆ ಅತ್ಯಾಚಾರ ಮಾಡಲಾಯಿತು. ಮನೆ ದೋಚಲಾಯಿತು. ಹೈಕೋರ್ಟ್ ೧೯೪೩ ಜನವರಿ ೯ರಂದು ತೀರ್ಪು ನೀಡಿ ಗುರುಪ್ಪ, ಮಲ್ಲಪ್ಪ, ಸೂರ್ಯನಾರಾಯಣಾಚಾರಿ, ಬಿ.ಹಾಲಪ್ಪ ಮತ್ತು ಜಿ.ಶಂಕರಪ್ಪ ಎಂಬ ಐವರಿಗೆ ಮರಣದಂಡನೆ ವಿಧಿಸಿತು. ಮಹಿಳೆಯರಾದ ಹಾಲಮ್ಮ ಮತ್ತು

ಪಾರ್ವತಮ್ಮನವರಿಗೆ ಜೀವಾವಧಿ ಶಿಕ್ಷೆ ವಿಧಿಸಲಾಯಿತು. ಹೀಗೆ ಸೈನ್ಯಪಡೆ ಎರಡು ವಾರ ಕಾಲ ಈಸೂರಿನಲ್ಲಿ ಬಿಡುಬಿಟ್ಟು ಕೈಲಾಗದೆ ಉಳಿದವರಿಗೆ ಚಿತ್ರಹಿಂಸೆ ಕೊಟ್ಟು ಬಂಧಿಸಿತು (ಗೋವಿಂದರಾಜು, ೨೦೦೫:೨೯೬).

ಎಸ್.ಚಂದ್ರಶೇಖರ್ ಅವರು ಈಸೂರು ಘಟನೆಯು ಅಲ್ಲಿಯ ಜನಸಮುದಾಯ ಶಿಕ್ಷೆಗೆ ಒಳಗಾಗಿರುವುದನ್ನು ಹೀಗೆ ತಿಳಿಸಿದ್ದಾರೆ. ಈಸೂರು ಘಟನೆ ಐತಿಹಾಸಿಕವಾಗಿದ್ದು ಗ್ರಾಮದ ೪೧ ಜನರ ಮೇಲೆ ಖಟ್ಲೆ ಹೂಡಿ ೧೧ ಜನರಿಗೆ ಮರಣದಂಡನೆಯಾಗಿ ಹದಿಮೂರು ಜನರಿಗೆ ಜೀವವಾಧಿ ಶಿಕ್ಷೆ ವಿಧಿಸಲಾಗಿ ಹೈಕೋರ್ಟಿನಲ್ಲಿ ಐದು ಮಂದಿಗೆ ಗಲ್ಲು ಶಿಕ್ಷೆ ಖಾಯಂ ಆಗಿತ್ತು. ಗಲ್ಲು ಶಿಕ್ಷೆಗೆ ಒಳಗಾಗಿದ್ದ ಮೂರು ಮಂದಿ ಮಹಿಳೆಯರನ್ನು ಮತ್ತಿತ್ತರ ಎಂಟು ಮಂದಿಯನ್ನು ೧೯೪೬ರ ಅಕ್ಟೋಬರ್‌ನಲ್ಲಿ ಬಿಡುಗಡೆ ಮಾಡಲಾಯಿತ್ತೆಂದು ತಿಳಿಸಿದ್ದಾರೆ (ಚಂದ್ರಶೇಖರ, ೨೦೦೨:೧೩೪).

ಈಸೂರು ಕ್ರಾಂತಿ ಮಲೆನಾಡಿನ ಗ್ರಾಮಾಂತರ ಪ್ರದೇಶದಲ್ಲಿ ರೈತರ ಪಾಲ್ಗೊಳ್ಳುವಿಕೆಯಿಂದ ಮಹತ್ವ ಪಡೆದ್ದಿತು. ಈ ಘಟನೆಯು ಬ್ರಿಟೀಷ ಮತ್ತು ಮೈಸೂರು ಅರಸೊತ್ತಿಗೆಯ ವಿರುದ್ಧ ರೈತರು ತಿರುಗಿ ಬಿದ್ದು ತಮ್ಮ ಸ್ವಾಭಿಮಾನ ಉಳಿಸಿಕೊಂಡಂತಹ ಘಟನೆಯಾಗಿದೆ. ರೈತರ ಹೋರಾಟಕ್ಕೆ ಯಾವುದೇ ನಾಯಕನ ಮಾರ್ಗದರ್ಶನವಿಲ್ಲದೆ ಹೋರಾಡಿದಂಥ ಘಟನೆಯಾಗಿದೆ. ರೈತರ ಸಮಸ್ಯೆಗಳಿಗೆ ಸರ್ಕಾರ ಸ್ಪಂದಿಸದೇ ಇದ್ದುದರಿಂದ ಚಳುವಳಿ ಪ್ರಾರಂಭವಾಯಿತು ಎಂಬುದೇ ತಿಳಿಯುತ್ತದೆ. ಹೋರಾಟವು ಬೇರೆ ಬೇರೆ ಕಡೆಯಲ್ಲು ರೈತ ಚಳುವಳಿಗಳು ಕಿಸಾನ್ ಸಭಾದ ಪ್ರೇರಣೆಯಿಂದಾಗಿ ನಡೆಯುತ್ತಿದ್ದವು. ಹಾಗೆಯೇ ಈಸೂರ ಚಳುವಳಿಗೂ ಕಿಸಾನ್ ಸಭಾದ ಪ್ರೇರಣೆಯಿತ್ತೆಂದು ಹಾಗೂ ಸ್ವಾತಂತ್ರ್ಯ ಹೋರಾಟದ ಮುಖ್ಯ ಮೈಲುಗಲ್ಲಾಯಿತು ಎಂಬುದಾಗಿ ತಿಳಿದುಬಂದಿದೆ (ವಿಜಯ್, ೧೯೯೯:೮).

ಸ್ವಾತಂತ್ರ್ಯಪೂರ್ವದಲ್ಲಿನ ಮಲೆನಾಡಿನ ಭೂ ಹೋರಾಟಗಳು ವ್ಯಕ್ತಿಯ ನಾಯಕತ್ವದಲ್ಲೋ ಅಥವಾ ಯಾವುದೇ ಒಂದು ನಿರ್ದಿಷ್ಟ ಉದ್ದೇಶಗಳನ್ನು ಇಟ್ಟುಕೊಂಡು ಚಳುವಳಿಗಳು ನಡೆಯಲಿಲ್ಲ. ಏಕೆಂದರೆ ಭೂವ್ಯವಸ್ಥೆಗೆ ಸಂಬಂಧಿಸಿದಂತೆ ಯಾವುದೇ ಸಂಘಟನೆಗಳಿರಲಿಲ್ಲ. ಹಾಗಾಗಿ ಹೋರಾಟಗಳು ಅಷ್ಟಾಗಿ ಸಾಫಲ್ಯ ಪಡೆಯಲಿಲ್ಲ. ಆದರೂ ರೈತರಲ್ಲಿ ಸ್ವಾತಂತ್ರ್ಯಪೂರ್ವದಲ್ಲಿಯ ವಸಾಹತುಶಾಹಿ ಮತ್ತು ಸಂಸ್ಥಾನಗಳ ವಿರುದ್ಧ ಹೋರಾಡಿ ತಮ್ಮ ಬೇಡಿಕೆಗಳನ್ನು ಮುಂದಿಟ್ಟಿರುವುದು ಕಂಡುಬರುತ್ತದೆ.

**ಟಿಪ್ಪಣಿಗಳು**

೧. **ಡಾ.ವೈ.ಪಾರ್ಥನಾರಾಯಣ ಪಂಡಿತರು :** ಶಿವಮೊಗ್ಗದಲ್ಲಿ ಸುಪ್ರಸಿದ್ಧ ಆಯುರ್ವೇದ ಪಂಡಿತರಾಗಿದ್ದರು. ಶಿವಮೊಗ್ಗದ ಕಾಂಗ್ರೆಸ್ಸಿನ ಸದಸ್ಯರಾಗಿದ್ದು, ೧೯೩೬ರ ಹಿಂದೆಯೇ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಕಾರಾಗೃಹ ವಾಸವನ್ನು ಅನುಭವಿಸಿದವರು (ಮಂಜಪ್ಪ, ೧೯೯೦:೭೦).

೨. **ಪ್ರಜಾಪ್ರತಿನಿಧಿ ಸಭೆ :** ಭಾರತದ ದೇಶೀಯ ಸಂಸ್ಥಾನಗಳಲ್ಲಿಯೇ ಪ್ರಪ್ರಥಮವಾಗಿ ಸ್ಥಾಪಿಸಿದ ಸಭೆಯಾಗಿದೆ. ದಿವಾನ ರಂಗಚಾರ್ಲು ಅವರು ೧೮೮೧ರಲ್ಲಿ ಮೈಸೂರು ಸಂಸ್ಥಾನದಲ್ಲಿ ಸ್ಥಾಪಿಸಿದರು. ಈ ಮೊದಲು ಕಮೀಷನರಾದ ಗಾರ್ಡನ್ ಇವರ ಸ್ಥಾಪನೆಗೆ ಶಿಫಾರಸ್ಸು ಮಾಡಿದರು. ಪ್ರಜೆಗಳ ಹಿತ ಮತ್ತು ಇಚ್ಚೆಗಳನ್ನು ಗಮನಿಸಿ ಸಾಮರಸ್ಯದಿಂದ ರಾಜ್ಯಾಡಳಿತವನ್ನು ನಡೆಸುವುದೇ ಇದರ ಸ್ಥಾಪನೆಯ ಮುಖ್ಯ ಉದ್ದೇಶವಾಗಿತ್ತು. ಈ ಸಭೆಯಲ್ಲಿ ಸ್ಥಳೀಯ ಸಂಸ್ಥೆಗಳ ಮತ್ತು ನಗರ ಸಭೆಗಳ, ರೈತರ ಪ್ರಮುಖ ಭೂಹಿಡುವಳಿದಾರರು ಮತ್ತು ವ್ಯಾಪಾರಿಗಳ ಪ್ರತಿನಿಧಿಗಳಿದ್ದರು. ದಸರ ಮಹೋತ್ಸವ ಕಾಲದಲ್ಲಿ ಈ ಪ್ರತಿನಿಧಿ ಸಭೆಯ ಅಧಿವೇಶನ ಸೇರುತ್ತಿದ್ದರು. ದಿವಾನರು ವಾರ್ಷಿಕ ಆಡಳಿತದ ವರದಿಯನ್ನು ಕೊಡುತ್ತಿದ್ದರು. ಮತ್ತು ತರಬಹುದಾದ ಆಡಳಿತ ಕ್ರಮಗಳನ್ನು ಸೂಚಿಸುತ್ತಿದ್ದರು. ತಾಲ್ಲೂಕುಗಳಲ್ಲಿ ಸ್ವಯಂ ಆಡಳಿತಕ್ಕೆ ಅವಕಾಶವನ್ನು ಪ್ರತಿನಿಧಿ ಸಭೆಯು ಒದಗಿಸಿತು. ೧೮೮೩ರಲ್ಲಿ ತಾಲ್ಲೂಕು ಮಂಡಳಿಗಳನ್ನು ರಚಿಸಲಾಯಿತು. ಪ್ರಾರಂಭದಲ್ಲಿ ಪ್ರಜಾಪ್ರತಿನಿಧಿ ಸಭೆಯು ೧೪೪ ಜನ ಸದಸ್ಯರನ್ನು ಹೊಂದಿತ್ತು. ೧೮೮೭ರಲ್ಲಿ ಸದಸ್ಯರಿಗೆ ಆಸ್ತಿಯಿರಬೇಕೆಂಬ ನಿಯಮ ಜಾರಿಗೆ ತೆಂದು ಪ್ರತಿ ಜಿಲ್ಲೆಗೂ ಎಷ್ಟು ಸದಸ್ಯರು ಇರುವರೆಂದು ನಿರ್ಧರಿಸಿ ಅವರ ಹೆಸರುಗಳನ್ನು ರಾಜ್ಯಪತ್ರದಲ್ಲಿ ಪ್ರಕಟಿಸಲಾರಂಭವಾಯಿತ್ತು. ಸಾರ್ವಜನಿಕ ಸಂಘಗಳು ಸಹ ತಮ್ಮ ಪ್ರತಿನಿಧಿಗಳನ್ನು ಆಯ್ಕೆ ಮಾಡುವ ವಿಧಾನವನ್ನು ರೂಢಿಗೆ ತಂದು ಚುನಾವಣೆಗೆ ನಿಲ್ಲತಕ್ಕವರಿಗೆ ಅರ್ಹತೆಗಳನ್ನು ಗೊತ್ತುಪಡಿಸಲಾಯಿತು. ೧೮೯೪ರಲ್ಲಿ ಪ್ರಜಾಪ್ರತಿನಿಧಿ ಸಭೆಯ ಸದಸ್ಯತ್ವದ ಅವಧಿಯ ಮೂರು ವರ್ಷಗಳೆಂದು ಸಾರಲಾಯಿತು. ೧೯೧೪ರಲ್ಲಿ ಉಪ ತಾಲ್ಲೂಕುಗಳಿಗೂ ಪ್ರತ್ಯೇಕ ಪ್ರತಿನಿಧಿಗಳನ್ನು ಕೊಡಲಾಯಿತು. ೧೯೧೫ರಿಂದ ಚುನಾವಣೆಗೆ ನಿಲ್ಲುವ ಸದಸ್ಯರು ಆಯಾ ತಾಲ್ಲೂಕು ಅಮಲ್ದಾರರಿಗೆ ಲಿಖಿತವಾಗಿ ಕಳುಹಿಸಬೇಕಿತ್ತು. ೧೯೧೮ರಲ್ಲಿ ಮತದಾರರ ಸಂಖ್ಯೆಯೂ ಮಿತಗೊಳಿಸಿ ಅದರ ಸಂಖ್ಯೆಯನ್ನು ವಿಸ್ತರಿಸಲಾಯಿತು. ೧೯೨೦ರಲ್ಲಿ ಉಪಚುನಾವಣೆಗೆ ಅಸ್ಪದ ಕಲ್ಪಿಸಲಾಯಿತು. ೧೯೨೩ರಲ್ಲಿ ಪ್ರತಿನಿಧಿ ಸಭೆಗೆ ವೈಧಾನಿಕ ಸ್ಥಾನಮಾನವನ್ನು ಕಮಿಟಿಯ ಶಿಫಾರಸ್ಸಿನಂತೆ ನೀಡಲಾಯಿತು. ಸಾರ್ವಜನಿಕ ಆಡಳಿತ ಮತ್ತು ಹಣಕಾಸಿನ ಆಯವ್ಯಯ ರೀತಿ ನೀತಿಗಳ ಮೇಲೆ ಅಭಿಪ್ರಾಯ ನೀಡಲು ಪ್ರಜಾಪ್ರತಿನಿಧಿ ಸಭೆಗೆ ಅಧಿಕಾರ ನೀಡಲಾಗಿತ್ತು. ಪ್ರಜಾಪ್ರತಿನಿಧಿ ಸಭೆಯ ಸದಸ್ಯರ ಸಂಖ್ಯೆಯು ೨೫೦ ರಿಂದ ೨೭೫ರ ವರೆಗೆಂದು ನಿರ್ಧರಿಸಲಾಗಿತ್ತು. ೧೯೨೩ರಲ್ಲಿ ಈ ಸಭೆಯಲ್ಲಿ ಹೆಣ್ಣುಮಕ್ಕಳಿಗೂ ಮತ ನೀಡುವ ಹಕ್ಕನ್ನು ಕೊಡಲಾಗಿತ್ತು. ಆಡಳಿತ ವ್ಯವಸ್ಥೆಯಲ್ಲಿ ಕಾರ್ಯಾಂಗ, ಶಾಸಕಾಂಗ ಎರಡು ಸಭೆಗಳು ಮತ್ತು ನ್ಯಾಯಾಂಗಗಳು ಸ್ವತಂತ್ರವಾಗಿ ಕಾರ್ಯನಿರ್ವಹಿಸುವಂತೆ ಪ್ರತ್ಯೇಕಿಸಲಾಗಿತ್ತು (ಸೂರ್ಯನಾಥ, ೧೯೮೫:೩೯೧).

೩. **ನ್ಯಾಯವಿಧೇಯಕ :** ಸಭೆ ವ್ಯವಹಾರಿಕ ವಿಚಕ್ಷಣತೆ ಹಾಗೂ ಕಾನೂನು ರಚನಾ ಕೌಶಲ್ಯ ಹೊಂದಿದ ಸಾರ್ವಜನಿಕರು ಆಡಳಿತದ ಜೊತೆ ಸಹಕರಿಸುವಂತೆ ಮಾಡಲು ನ್ಯಾಯ ವಿಧೇಯಕ ಸಭೆಯನ್ನು ೧೯೦೭ರಲ್ಲಿ ಸ್ಥಾಪಿಸಲಾಯಿತು. ದಿವಾನರು ಈ ಸಭೆಯ ಅಧ್ಯಕ್ಷರಾಗಿದ್ದರು. ಅವರ ಕಾರ್ಯಕಾರಿ ಮಂಡಲಿಯ ಸದಸ್ಯರು ಇದರ ಪದನಿಮಿತ್ತ ಸದಸ್ಯರು ಇರುತ್ತಿದ್ದರು. ಇದಲ್ಲದೆ ಸುಮಾರು ೧೦ ರಿಂದ ೧೫ಕ್ಕಿಂತ ಹೆಚ್ಚಿನ ಸದಸ್ಯರನ್ನು ಸರ್ಕಾರವು ಸಭೆಗೆ ನಾಮಕರಣ ಮಾಡುತ್ತಿತ್ತು. ಸದಸ್ಯರ ಸಂಖ್ಯೆಯನ್ನು ೧೯೧೪ರಲ್ಲಿ ೨೧ ಮತ್ತು ೧೯೧೭ರಲ್ಲಿ

೩೦ಕ್ಕೆ ಏರಿಸಲಾಗಿತ್ತು. ೧೯೨೩ರಲ್ಲಿ ಈ ಸಂಖ್ಯೆ ೫೦ನ್ನು ಮುಟ್ಟಿತು. ಇದರಲ್ಲಿ ೨೮ ಜನ ಸದಸ್ಯರು ನಾಮಕರಣ ಹೊಂದಿದವರು ಮತ್ತು ೨೨ ಜನ ಚುನಾಯಿಸಲ್ಪಟ್ಟವರು. ಚುನಾವಣಾ ಸೂತ್ರವನ್ನು ಇಲ್ಲಿ ಮೊದಲ ಬಾರಿಗೆ ಜಾರಿಗೆ ತರಲಾಯಿತು. ನ್ಯಾಯ ವಿಧೇಯಕ ಸಭೆಯಲ್ಲಿ ಅಲ್ಪಸಂಖ್ಯಾತರ ವಿಶೇಷ ಹಿತಾಸಕ್ತಿಗಳು ಹೆಚ್ಚಿನ ಆದ್ಯತೆ ಪಡೆಯುವಂತೆ ಚುನಾಯಿತ ಸದಸ್ಯರಿಗೆ ಅವಕಾಶ ನೀಡಲಾಯಿತು. ರಾಜ್ಯದ ಆಯವ್ಯಯದ ಬಗ್ಗೆ ಅಭಿಪ್ರಾಯ ಸೂಚಿಸುವ ಅಧಿಕಾರವನ್ನೂ ಅದಕ್ಕೆ ನೀಡಲಾಗಿತ್ತು. ೧೯೨೩ರಲ್ಲಿ ಸರ್ಕಾರಕ್ಕೆ ಸಲಹೆ ಕೊಡಲು ಅನುಕೂಲವಾಗುವಂತೆ ನ್ಯಾಯ ವಿಧೇಯಕ ಸಭೆಯ ಸ್ಥಾಯಿ ಸಮಿತಿಯನ್ನು ರಚಿಸಲಾಯಿತು. ದಿವಾನರ ಅಪ್ಪಣೆಯಿಲ್ಲದೆ ಕಾನೂನು ರಚನೆಯ ವಿಷಯವನ್ನು ಈ ಕೌನ್ಸಿಲ್‌ನಲ್ಲಿ ತರುವಂತಿರಲಿಲ್ಲ. ೧೯೪೦ರಲ್ಲಿ ಸದಸ್ಯರ ಸಂಖ್ಯೆಯನ್ನು ೬೮ಕ್ಕೆ ಹೆಚ್ಚಿಸಲಾಗಿತ್ತು. ಪ್ರಪ್ರಥಮವಾಗಿ ಕೌನ್ಸಿಲಿಂಗೆ ದಿವಾನರ ಬದಲು ಅಧ್ಯಕ್ಷರನ್ನು ಮತ್ತು ಉಪಾಧ್ಯಕ್ಷರನ್ನು ನೇಮಿಸುವಂತದ್ದು ಕಂಡುಬಂದಿದೆ. ಇದರಲ್ಲಿ ಚುನಾತಿಯ ಸದಸ್ಯನೊಬ್ಬನು ಮಂತ್ರಿ ಅಥವಾ ಕಾರ್ಯಕಾರಿ ಮಂಡಲಿಯ ಸದಸ್ಯನಾಗಲು ಅಸ್ಪದವಿತ್ತು (ಸೂರ್ಯನಾಥ ಯು.ಕಾಮತ್, ೧೯೮೫:೪೯೨).

೪. ಶೃಂಗೇರಿ ಪೀಠ : ಚಿಕ್ಕಮಗಳೂರು ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರವಾದ ಶೃಂಗೇರಿಯು ಒಂದು ಪ್ರಸಿದ್ಧ ಧಾರ್ಮಿಕ ಸ್ಥಳವಾಗಿದ್ದು, ವಿಭಾಂಡಕ ಮಹರ್ಷಿಯ ಮಗನಾದ ಋಷ್ಯಶೃಂಗನ ಜನ್ಮಸ್ಥಳವಾದುದರಿಂದ ಇದಕ್ಕೆ ಶೃಂಗಗಿರಿ ಎಂಬ ಹೆಸರು ಬಂತೆಂದೂ ಕ್ರಮೇಣ ಶೃಂಗೇರಿಯಾಯಿತೆಂದು ಪ್ರತೀತಿ ಇದೆ. ಅನೇ ಶತಮಾನದಲ್ಲಿ ಶಂಕರಾಚಾರ್ಯರು ಹಿಂದೂಧರ್ಮದ ಪುನರುತ್ಥಾನಕ್ಕಾಗಿ ಸ್ಥಾಪಿಸಿದ ಪೀಠಗಳಲ್ಲಿ ಶೃಂಗೇರಿ ಪೀಠವೂ ಒಂದು. ಮಠದ ಜೊತೆಗೆ ಶಂಕರಾಚಾರ್ಯರು ಕಾಶ್ಮೀರದಿಂದ ತಂದ ಶಾರದೆಯ ವಿಗ್ರವನ್ನು ಇಲ್ಲಿ ಸ್ಥಾಪಿಸಿ ದೇವಾಲಯವನ್ನು ಕಟ್ಟಿದರು. ವಿಜಯನಗರ ಶೈಲಿಯಲ್ಲಿರುವ ಈ ದೇವಾಲಯವಲ್ಲದೆ ಚಾಳುಕ್ಯ, ಹೊಯ್ಸಳ ಮತ್ತು ವಿಜಯನಗರ ಶೈಲಿಗಳ ಮಿಶ್ರ ಶೈಲಿಯ ವಿದ್ಯಾಶಂಕರ ದೇವಾಲಯವು ತುಂಬಾ ಆಕರ್ಷಕವಾಗಿದೆ. ವಿಜಯನಗರ ಸಾಮ್ರಾಜ್ಯದ ಉಗಮಕ್ಕೆ ಕಾರಣರಾದ ವಿದ್ಯಾರಣ್ಯರು ಶೃಂಗೇರಿ ಪೀಠಾಧಿಪತಿಗಳಾಗಿದ್ದರು. ವಿಜಯನಗರ ಕಾಲದ ನೂರಾರು ಶಾಸನಗಳನ್ನು ಈ ಸುತ್ತಲಿನ ಪ್ರದೇಶಗಳಲ್ಲಿ ಕಾಣಬಹುದು. ಶೃಂಗೇರಿ ಪೀಠಾಧಿಪತಿಗಳನ್ನು ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯ ಎಂಬುದಾಗಿ ಕರೆಯಲಾಗುತ್ತಿತ್ತು.

ಒಂದನೆಯ ಹರಿಹರ, ಬುಕ್ಕ, ಎರಡನೆಯ ಹರಿಹರ, ವಿರೂಪಾಕ್ಷ ಮುಂತಾದ ವಿಜಯನಗರದ ದೊರೆಗಳು ಶೃಂಗೇರಿಗೆ ಭೇಟಿ ಕೊಟ್ಟು, ಅನೇಕ ದತ್ತಿಗಳನ್ನೂ, ಉಂಬಳಿಗಳನ್ನೂ ನೀಡಿ ತಮ್ಮ ಭಕ್ತಿಯನ್ನು ವ್ಯಕ್ತಪಡಿಸಿದ್ದಾರೆ. ಅಲ್ಲದೆ ಇಲ್ಲಿಯ ಪೀಠಾಧಿಪತಿಗಳ ಹೆಸರಿನಲ್ಲಿ ಹಾಗೂ ತಮ್ಮ ಹೆಸರಿನಲ್ಲಿ ಅನೇಕ ಅಗ್ರಹಾರಗಳನ್ನು ಕಟ್ಟಿಸಿ, ಪೀಠಾಧಿಪತಿಗಳನ್ನು ತಮ್ಮ ರಾಜಧಾನಿಗೆ ಬರಮಾಡಿಕೊಂಡು ಅವರ ಆಶೀರ್ವಾದ, ಅನುಗ್ರಹಗಳನ್ನು ಪಡೆದರೆಂದು ತಿಳಿದುಬರುತ್ತದೆ.

೧೫೬೫ರಲ್ಲಿ ವಿಜಯನಗರ ಸಾಮ್ರಾಜ್ಯದ ಪತನಾನಂತರ ಕೆಳದಿಯ ನಾಯಕರು ಶೃಂಗೇರಿಗೆ ರಕ್ಷಣೆ ನೀಡಿದರು. ಸದಾಶಿವನಾಯಕನ ಕಾಲದಲ್ಲಿ ಕೆಳದಿ ರಾಜ್ಯಕ್ಕೂ, ಶೃಂಗೇರಿ ಸಂಸ್ಥಾನಕ್ಕೂ ಸಂಪರ್ಕ ಬೆಳೆಯಿತು.

ಶೃಂಗೇರಿಯ ಅಭಿವೃದ್ಧಿ ಮತ್ತು ರಕ್ಷಣೆಗಾಗಿ ಬಹಳ ಶ್ರಮಿಸಿದ ಮೊದಲನೆಯ ವೆಂಕಟಪ್ಪನಾಯಕ ಶ್ರೀಗಳಿಂದ ವೈದಿಕ ಅದ್ವೈತ ಸಿದ್ಧಾಂತ ಪ್ರತಿಷ್ಠಾಪಕ ಎಂಬ ಬಿರುದನ್ನು ಪಡೆದನು.

ಮೈಸೂರಿನ ಕಂಠಿರವ ನರಸರಾಜ ಒಡೆಯರ್ ಮುಂತಾದವರೂ ಕೂಡ ಶೃಂಗೇರಿ ಮಠದ ಬಗ್ಗೆ ಪೂಜ್ಯ ಭಾವನೆಯನ್ನು ಹೊಂದಿದ್ದರು. ಮೈಸೂರಿನ ಇಮ್ಮಡಿ ಕೃಷ್ಣರಾಜ ಒಡೆಯರು ಶ್ರೀಗಳಿಗೆ ಅನೇಕ ಅಮೂಲ್ಯ ಕಾಣಿಕೆಗಳನ್ನು ಕಳುಹಿಸಿ, ಶೃಂಗಪುರ ರತ್ನ ಸಿಂಹಾಸನದ ಮೇಲೆ ಕುಳಿತಿರುವ ಯೋಗ ಸಾಮ್ರಾಜ್ಯಾಧಿಪತಿ ಯೆಂಬುದಾಗಿ ಶ್ರೀಗಳನ್ನು ವರ್ಣಿಸಿದ್ದರು. ಶೃಂಗೇರಿ ಸಂಸ್ಥಾನಕ್ಕೂ ಮತ್ತು ಮರಾಠರಿಗೂ ಉತ್ತಮ ಸಂಬಂಧವಿದ್ದಿತೆಂಬುದು ತಿಳಿದುಬರುತ್ತದೆ. ದೇವಾಲಯದ ಜೀರ್ಣೋದ್ಧಾರ ಮತ್ತು ಶಾರದಾ ವಿಗ್ರಹದ ಪ್ರತಿಷ್ಠಾಪನೆಗಾಗಿ ಅನೇಕ ಕಾಣಿಕೆಗಳನ್ನು ಟಿಪ್ಪುಸುಲ್ತಾನ್ ಕಳುಹಿಸಿದನೆಂದು ತಿಳಿದುಬರುತ್ತದೆ. ೧೭೯೧-೯೮ರ ನಡುವೆ ಟಿಪ್ಪು ಬರೆಸಿದ ಇಪ್ಪತ್ತೊಂಬತ್ತು ಪತ್ರಗಳು ಶ್ರೀಮಠದ ಬಗ್ಗೆ ಆತನಿಗಿದ್ದ ನಿಷ್ಠೆ, ಶ್ರದ್ಧೆ ಮತ್ತು ಪೂಜ್ಯಭಾವನೆಗಳ ಪ್ರತೀಕವಾಗಿದೆ. ಹೈದರಾಬಾದ್‌ನ ನಿಜಾಮ್ ಉಲ್ ಮುಲ್ಕ್ ಎಂಬುವನು ಶ್ರೀಗಳಿಗೆ ಅನೇಕ ಫರ್ಮಾನು, ಸನ್ನದುಗಳನ್ನು ಮತ್ತು ಕೆಲವು ವಿಶೇಷ ಸೌಲಭ್ಯಗಳನ್ನು ನೀಡಿದನೆಂದೂ ಅವರ ಈ ಕೊಡುಗೆಗಳನ್ನು ನಿಜಾಮ್ ಅಲಿಖಾನ್ ಊರ್ಜಿತಗೊಳಿಸಿದನೆಂದೂ ತಿಳಿದುಬರುತ್ತದೆ. ಮೈಸೂರಿನ ಚಾಮರಾಜ ಒಡೆಯರೂ ಶೃಂಗೇರಿ ಸಂಸ್ಥಾನಕ್ಕೆ ಅನೇಕ ಅಮೂಲ್ಯ ಕಾಣಿಕೆಗಳನ್ನು ಕಳುಹಿಸಿಕೊಟ್ಟಿದ್ದರು. ಮಾರ್ಕ್‌ಕಬ್ಬನನ ಘೋಷಣೆಯಿಂದ ಶೃಂಗೇರಿ ಪೀಠಕ್ಕೆ ಹಿಂದಿನ ವಿಶೇಷ ಸೌಲಭ್ಯಗಳೆಲ್ಲವೂ ಇದ್ದಿತೆಂದು ಗೊತ್ತಾಗುತ್ತದೆ. ಮೈಸೂರು ಸಂಸ್ಥಾನದ ಅವಧಿಯಲ್ಲಿ ಇದೊಂದು ಜಹಗೀರಿ ಸ್ಥಾನ ಪಡೆಯಿತು (ಕನ್ನಡ ವಿಷಯ ವಿಶ್ವಕೋಶ, ಭಾಗ ೨, ೨೦೦೭:೧೯೫).

೫. ಇತ್ತೀಚಿನ ವಾದ ವಿವಾದದ ಪ್ರಕಾರ ದಕ್ಷಿಣ ಕನ್ನಡ ಸುಳ್ಯ, ಉಡುಪಿ ಜಿಲ್ಲೆಯ ಕೊಲ್ಲೂರುಗಳನ್ನು ಸೇರಿಸಿಕೊಂಡು ಮಲೆನಾಡು ವೃತ್ತವನ್ನು ರಚಿಸಬೇಕೆಂಬ ಹೋರಾಟ ಆಗಾಗ ಕೇಳಿಬರುತ್ತದೆ. ಮಲೆನಾಡಿನ ವ್ಯಾಪ್ತಿಯನ್ನು ಕುರಿತಂತೆ ಏನೇ ದ್ವಂದ್ವಗಳಿದ್ದರೂ ಕೂಡ ಅಲ್ಲಿಯ ವಿಶಿಷ್ಟ ಭೌಗೋಳಿಕ ಲಕ್ಷಣಗಳಾದ ವಾಯುಗುಣ, ಮಳೆ, ಅರಣ್ಯ, ನದಿಗಳು ಗುಡ್ಡ, ಬೆಟ್ಟ, ತೊರೆ ಅಂಕು ಡೊಂಕಿನ ಏರಿಳಿಯುವ ರಸ್ತೆಗಳಿಂದ ಸಹ್ಯಾದ್ರಿ ಶ್ರೇಣಿಗಳನ್ನು ಗುರುತಿಸಿ ಮಲೆನಾಡೆಂದು ಕರೆಯುವುದು ಸೂಕ್ತವಾಗುತ್ತದೆ (ಕೆ.ಜಿ.ಎನ್.ಶಾಸ್ತ್ರಿ, ೨೦೦೬:೧). ಮಲೆನಾಡಿನಲ್ಲಿ ಪಶ್ಚಿಮ ಘಟ್ಟಗಳಿಂದ ಆವೃತ್ತವಾಗಿ ಉತ್ತರದ ಪರ್ವತಗಳ ಮತ್ತು ಅವುಗಳ ಸುತ್ತ ದಟ್ಟವಾದ ಅರಣ್ಯವಿರುವುದರಿಂದ ವಾಯುಗುಣ ಹಿತಕರವಾಗಿದ್ದು ಜನಜೀವನ ಸ್ಥಿತಿಯು ಉತ್ತಮವಾಗಿದೆ.

೬. ಮಲೆನಾಡ ಭಾಗದಲ್ಲಿ ಅತಿಹೆಚ್ಚು ಮಳೆ ಕಂಡುಬರುತ್ತದೆ. ಮಳೆಯು ಅರಬ್ಬಿ ಸಮುದ್ರ ಕಡೆಯಿಂದ ಬೀಸುವ ನೈರುತ್ಯ ಮಾನಸೂನ ಮಾರುತಗಳಿಂದ ಅಧಿಕವಾಗಿರುತ್ತದೆ. ವರ್ಷಕ್ಕೆ ೩೨೫೦ ಮಿ.ಮೀ.ನಷ್ಟು ಅತ್ಯಾಧಿಕವಾಗಿರುತ್ತದೆ. ಕರ್ನಾಟಕದಲ್ಲಿಯೇ ಹೆಚ್ಚು ಮಳೆ ಬೀಳುವಂತಹ ಸ್ಥಳಗಳು ಮಲೆನಾಡಿನಲ್ಲಿವೆ. ಅವುಗಳೆಂದರೆ ಶಿವಮೊಗ್ಗ ಜಿಲ್ಲೆಯ ಆಗುಂಬೆ (೮೨೭೬ ಮಿ.ಮಿ.ವಾರ್ಷಿಕ), ಕೊಡಗು ಜಿಲ್ಲೆಯ ಭಾಗಮಂಡಲ (೬೦೩೨ ಮಿ.ಮಿ.ವಾರ್ಷಿಕ) ಆಗುಂಬೆಯನ್ನು ದಕ್ಷಿಣದ ಚಿರಾಪುಂಜಿಯೆಂದು ಕರೆಯಲಾಗುತ್ತದೆ. ಮಲೆನಾಡ ಭಾಗದ ಒಟ್ಟಾರೆ ವಾರ್ಷಿಕ ಮಳೆಯ ಪ್ರಮಾಣ ೮೨೭೬ ಮಿ.ಮೀಗಳಷ್ಟಿದೆ. ಅರಣ್ಯ ಸಂಪತ್ತು ಅಧಿಕ

ಮಳೆಗೆ ಕಾರಣವಾಗಿದೆ. ಮಲೆನಾಡಿನ ಜನಜೀವನ ವೃತ್ತಿಗೆ ಸಂಬಂಧಿಸಿದಂತೆ ಭೌಗೋಳಿಕ ಲಕ್ಷಣಗಳು ಕಾರಣವಾಗಿವೆ. ಅಧಿಕ ಅರಣ್ಯವಿರುವುದರಿಂದ ಮಳೆಯು ಜಾಸ್ತಿ ಹಾಗೂ ಕೃಷಿಯೊಂದಿಗಿನ ಸಂಬಂಧವನ್ನು ಭೌಗೋಳಿಕ ಲಕ್ಷಣಗಳಿಂದ ಗುರುತಿಸಬಹುದಾಗಿದೆ (ಗೋಪಾಲರಾವ್, ೨೦೦೧:೧೪). ಮಲೆನಾಡಿನ ಭಾಗದಲ್ಲಿ ಈ ಅಂಶಗಳಿಂದಾಗಿ ಭೂಸಮಸ್ಯೆಗೆ ಕೃಷಿ ಭೂಮಿಯ ಕೊರತೆಯೇ ಕಾರಣವಾಗಿದೆ. ಬಯಲು ಸೀಮೆಗೆ ಮಲೆನಾಡನ್ನು ಹೋಲಿಸಿ ನೋಡಿದಾಗ ಅಲ್ಲಿ ಭೂ ಹೋರಾಟ ಕಡಿಮೆ ಪ್ರಮಾಣದಲ್ಲಿ ಇದೆ. (ರೈತರ ಸಮಸ್ಯೆಯನ್ನು ಹೊರತುಪಡಿಸಿ). ಅಲ್ಲಿ ಅಹಣ್ಯ ಕಡಿಮೆ ಇದ್ದು ಬಯಲು ಪ್ರದೇಶವಿರುವುದೇ ಕಾರಣವಾಗಿದೆ (ಪ್ರಸ್ತುತ ದಿನಗಳಲ್ಲಿ ಮಲೆನಾಡಿನಲ್ಲಿ ಅರಣ್ಯವನ್ನು ನಾಶಪಡಿಸಿ ವಾಣಿಜ್ಯ ಬೆಳೆಗಳನ್ನು ಯಥೇಚ್ಚವಾಗಿ ಬೆಳೆಯಲು ಪ್ರಾರಂಭಿಸಿದ್ದಾರೆ. ಇಲ್ಲಿ ಭೂ ಹೋರಾಟ ನಡೆದಂತ ಕಾಳಗಟ್ಟವನ್ನು ಪರಿಗಣಿಸಲಾಗಿದೆ.

ಕಡಿದಾಳ್‌ರನ್ನು ಒಬ್ಬ ಜನಪರ ವ್ಯಕ್ತಿಯಾಗಿ ಅಧ್ಯಯನ ಮಾಡುವುದೆಂದರೆ ಅವರ ಭೂಹೋರಾಟ ಕುರಿತು ಅಧ್ಯಯನ ಮಾಡಿದಂತೆಯೇ. ಮಲೆನಾಡಿನ ಸಾಮಾಜಿಕ ಮತ್ತು ಆರ್ಥಿಕ ಶೋಷಣೆಯ ಅಂಶಗಳು ಅವರು ಜನಪರ ಹೋರಾಟಗಾರನಾಗಲು ಸ್ಫೂರ್ತಿಯಾಯಿತು. ಇಪ್ಪತ್ತನೆಯ ಶತಮಾನದ ಆರಂಭದ ದಶಕಗಳಲ್ಲಿ ಪ್ರಭಾವಿಯಾದ ಗಾಂಧಿಯುಗದ ತತ್ವಗಳಿಂದ ಮತ್ತು ಆದರ್ಶಗಳಿಂದ ಪ್ರಭಾವಿತರಾಗಿ ಕಡಿದಾಳ್‌ರು ಜನಪರ ಹೋರಾಟವನ್ನು ರೂಪಿಸಲು ಸಾಧ್ಯವಾಯಿತು. ಆಧುನಿಕ ಕರ್ನಾಟಕದ ಚರಿತ್ರೆಯಲ್ಲಿ ಮಂಜಪ್ಪನವರ ಹೋರಾಟಗಳು ಇಂದಿಗೂ ಮಹತ್ವವನ್ನು ಪಡೆದುಕೊಂಡಿದೆ.

ಕಡಿದಾಳ್‌ರು ಜನಪರ ನಾಯಕನಾಗಿ, ಭೂಹೋರಾಟಗಾರನಾಗಿ ರೂಪುಗೊಂಡಂತಹ ಅಂಶಗಳ ಕುರಿತಂತೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಡಿದಾಳರ ಕಾಲಘಟ್ಟದಲ್ಲಿದಂತಹ ವ್ಯಕ್ತಿಗಳನ್ನು ಸಂದರ್ಶನ ಮಾಡುವುದರ ಮೂಲಕ ಅನೇಕ ಅಂಶಗಳು ಬೆಳಕಿಗೆ ಬಂದಿದೆ. ಅವರಲ್ಲಿ ಪ್ರಮುಖವಾಗಿ, ಗಣಪತಿಯಪ್ಪ, ಮಾಜಿ ಶಿಕ್ಷಣ ಸಚಿವರಾದ ಹೆಚ್.ಜಿ.ಗೋವಿಂದೇಗೌಡರು, ಕಡಿದಾಳ್‌ರ ಸಹೋದರರಾದ ನಾಗಪ್ಪಗೌಡ್ರು, ಶೇಷಪ್ಪ ಹೆಗಡೆ, ಕಡಿದಾಳರ ಒಡನಾಡಿಯಾದ ರವಿಕುಮಾರ್ ಜಗಳೂರ್, ಹಿ.ಚಿ.ಬೋರಲಿಂಗಯ್ಯ ಇವರುಗಳಿಂದ ಕಡಿದಾಳರ ಜೀವಮಾನದ ಸಾಧನೆಗೆ ಸಂಬಂಧಪಟ್ಟ ಅಂಶಗಳು ತಿಳಿದುಬಂದಿದೆ.

ಭೂಹೋರಾಟದ ಕ್ರಿಯಾಶೀಲತೆಗೆ ಕಾರಣವಾದ ಕಡಿದಾಳ್‌ರು ಭೂಮಾಲೀಕರಿಂದ ಶೋಷಣೆಗೆ ಒಳಗಾದ ಗೇಣಿದಾರರಿಗೆ ಶಕ್ತಿಯಾಗಿದ್ದರು. ವೃತ್ತಿ ಜೀವನದಿಂದ ಹಿಡಿದು ಜೀವನದ ಕೊನೆಯವರೆಗೆ ಬಡವರ, ರೈತರ ಹಾಗೂ ದಲಿತರ ಗಟ್ಟಿಧ್ವನಿಯಾಗಿದ್ದರು ಎನ್ನುವ ಮಾತು ಮಲೆನಾಡಿನಲ್ಲಿ ಜನಜನಿತವಾಗಿದೆ. ವಕೀಲ ವೃತ್ತಿಯ ಮೂಲಕ ರಾಜಕೀಯ ಪ್ರವೇಶಿಸಿ, ನಲ್ವತ್ತರ ದಶಕದಲ್ಲಿ ಗೇಣಿದಾರರ ಸಂಘಟನೆಗಾಗಿ, ತೀರ್ಥಹಳ್ಳಿಯಲ್ಲಿ "ಮಲೆನಾಡ ಗೇಣಿದಾರ ಸಂಘ" ಹುಟ್ಟುಹಾಕುವುದರ ಜೊತೆಗೆ ಭೂಮಾಲೀಕರಿಂದ ಗೇಣಿಯ ಅಳತೆಯಲ್ಲಿ ಆಗುತ್ತಿದ ತೂಕ ಮತ್ತು ಆಳತೆಯ ಮೋಸವನ್ನು ಹಾಗೂ ಶೋಷಣೆಯನ್ನು ತೊಡೆದು ಹಾಕಲು ಅವರು ಪ್ರಯತ್ನಿಸಿದರು. ಇದಕ್ಕಾಗಿ ಅವರು ಸಭೆ ಸಮಾರಂಭಗಳನ್ನು ಹಮ್ಮಿಕೊಂಡು ಗೇಣಿದಾರರನ್ನು ಸಂಘಟಿಸುವಲ್ಲಿ ಅವಿರತವಾಗಿ ಶ್ರಮಪಟ್ಟರು. ಮಲೆನಾಡ ಭಾಗದ ಬೇರೆ ಬೇರೆ ಕಡೆಯಲ್ಲೂ ಇಂತಹ ಗೇಣಿದಾರರ ಸಮಸ್ಯೆ ಕಂಡುಬಂದಿದ್ದು, "ಸಾಗರ ತಾಲ್ಲೂಕಿನ ರೈತ ಸಂಘ" ಹುಟ್ಟುವಿಕೆಗೂ ಪ್ರೇರಣೆಯನ್ನು ನೀಡಿದ್ದರು.[೧] ಕಾಂಗ್ರೆಸ್ ಪಕ್ಷದಲ್ಲಿದ್ದುಕೊಂಡೇ ಸರ್ಕಾರಕ್ಕೆ ವಿರೋಧವಾಗಿ ಐತಿಹಾಸಿಕ ಪ್ರಸಿದ್ಧತೆಯನ್ನು ಪಡೆದಂತಹ ಕಾಗೋಡು ಚಳುವಳಿಯನ್ನು ಆರಂಭಿಸಿದರು. ಜನರ ಪರವಾಗಿಯೇ ಇದ್ದು ಗೇಣಿದಾರರಿಗೆ ಕಾನೂನಿನ ಮೂಲಕವೇ, ಪ್ರಜಾಪ್ರಭುತ್ವದ

ಚೌಕಟ್ಟಿನಲ್ಲಿ ಮೂಲನೆಲೆಯನ್ನು ಒದಗಿಸಲು ಚಳುವಳಿಯ ಮೂಲಕ ಹೋರಾಟ ಮಾಡುವುದು ಕಂಡುಬರುತ್ತದೆ. ಪಟ್ಟಭದ್ರ ಹಿತಾಶಕ್ತಿಗಳು ಪ್ರಬಲವಾಗಿದ್ದು ಗೇಣಿದಾರರ ಪರ ಯಾರೂ ಧ್ವನಿ ಎತ್ತದಿದ್ದ ಸಮಯದಲ್ಲಿ ಕಡಿದಾಳ್‌ರೇ ರೈತರ ಪರ ನಿಲ್ಲುತ್ತಾರೆ. ನಿರಂತರವಾದ ಹೋರಾಟದಿಂದಾಗಿ ಇಡೀ ಕರ್ನಾಟಕಕ್ಕೆ ಅನ್ವಯಿಸುವಂತಹ ಭೂಸುಧಾರಣೆಯ ಶಾಸನವನ್ನು ಜಾರಿಗೆ ತರಲು ಸ್ಫೂರ್ತಿಯಾಗುತ್ತಾರೆ. ೧೯೭೪ರ ದೇವರಾಜ ಅರಸರವರ ಕಾಲದಲ್ಲಿ ಬಂದಂತಹ ಭೂ ಸುಧಾರಣೆ ಶಾಸನಕ್ಕೆ ಸ್ಫೂರ್ತಿಯಾಗಿದ್ದವರು ಕಡಿದಾಳ್‌ರು. ಸದಾ ರೈತರ ಪರ ಯೋಚಿಸುತ್ತಿದ್ದ ಕಡಿದಾಳ್‌ರು ಅಧಿಕಾರಾವಧಿಯಲ್ಲಿ ರೈತರಿಗಾಗಿ ಅನೇಕ ಸುಧಾರಣೆಗಳನ್ನು ಮಾಡಿದ್ದಾರೆ. ಶ್ರೀಮಂತರ ಪಾಲಾಗುತ್ತಿದ್ದ ಸರ್ಕಾರಿ ಭೂಮಿಯನ್ನು ತನ್ನ ಅಧಿಕಾರಾವಧಿಯಲ್ಲಿ ದಲಿತರಿಗೆ ಮತ್ತು ಪ್ರಮುಖವಾಗಿ ಭೂಹೀನ ಕೃಷಿಕರಿಗೆ ಸಿಗುವಂತೆ ಮಾಡಿರುವುದು ಕಂಡುಬರುತ್ತದೆ (ರಾಮದಾಸ್, ೨೦೦೭:೧೫).

ಗಾಂಧೀಜಿ ಅವರ ಆದರ್ಶಗಳನ್ನು ಮತ್ತು ಕಡಿದಾಳ್‌ರನ್ನು ಯಾವ ಕಾಲಕ್ಕೂ ಬೇರ್ಪಡಿಸಲು ಸಾಧ್ಯವಿಲ್ಲ. ಸತ್ಯ, ಅಹಿಂಸೆ ಮತ್ತು ಸತ್ಯಾಗ್ರಹ ಎಂಬ ಮಂತ್ರಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಗಾಂಧಿಮಾರ್ಗದಲ್ಲಿಯೇ ನಡೆದು ಸಮಾಜಕ್ಕೆ ಅಂಟಿದ ದಾಸ್ಯ ಸಂಕೋಲೆಗಳನ್ನು ಕಿತ್ತೊಗೆಯಲು ಅವರು ಪ್ರಯತ್ನ ಪಟ್ಟಿರುವುದನ್ನು ಗಮನಿಸಬಹುದು. ಗಾಂಧೀಜಿಯ ಆದರ್ಶತತ್ವಗಳ ಮಾದರಿಯಲ್ಲಿಯೇ ಜೀವನ ಸಾಗಿಸಿದ ಕಡಿದಾಳ್‌ರನ್ನು "ಮೈಸೂರಿನ ಗಾಂಧಿ"ಯೆಂದು ಕರೆದಿರುವುದು ಸೂಕ್ತವಾಗಿದೆ (ಕವಂಡೆ ಮತ್ತು ಪೂಜಾರ, ೧೯೯೯:೧೪). ಜನಪರ ಹೋರಾಟಗಾರರಾಗಿ ಮುಂಚೂಣಿಯಲ್ಲಿರುವವರು ಅನುಭವಿಸಿದ ಸಂಕಷ್ಟಗಳದ್ದೆ ಒಂದು ಇತಿಹಾಸವಿದೆ. ಏಕೆಂದರೆ ಜನಪರವಾದ ಕೆಲಸಗಳನ್ನು ಪ್ರಶ್ನಿಸುವವರ ಸಂಖ್ಯೆಯೇ ಇತಿಹಾಸದುದ್ದಕ್ಕೂ ಕಂಡುಬಂದಿದೆ. ಕಡಿದಾಳ್‌ರ ಅಧಿಕಾರಾವಧಿಯಲ್ಲಿ ಕೂಡ ಅವರು ಹಲವಾರು ಸಮಸ್ಯೆ ಸವಾಲುಗಳನ್ನು ಎದುರಿಸುತ್ತಲೇ ಬಂದಿರುವುದು ಕಂಡುಬಂದಿದೆ. ಈ ಸಮಸ್ಯೆಯ ಜೊತೆಯಲ್ಲಿಯೇ ಸುಧಾರಣಾ ಕಾರ್ಯ ಕೈಗೊಂಡು ಭೂಸುಧಾರಣೆಯ ರುವಾರಿಯೆನಿಸಿಕೊಂಡಿದ್ದಾರೆ (ಸಂದರ್ಶನ ನಾಗಪ್ಪಗೌಡ, ೫:೦೪:೦೮). ಕಡಿದಾಳ್‌ರು ಸಾಮಾನ್ಯರ ಜೊತೆ ಸಾಮಾನ್ಯವಾಗಿಯೇ ಬೆರೆಯುತ್ತಿದ್ದರು. ಜನತೆಗೆ ಕಡಿದಾಳ್‌ರ ಮೇಲೆ ಅಭಿಮಾನವಿದ್ದರೆ, ಕಡಿದಾಳ್‌ರಿಗೆ ಜನರ ಮೇಲೆ ಪ್ರೀತಿ ಇತ್ತು. ಸೇವಾ ಭಾವನೆಯಿತ್ತು. ಇಂಥ ಪ್ರೀತಿಯೂ ಭೂಮಾಲೀಕರ ಮತ್ತು ರಾಜಕೀಯ ವ್ಯಕ್ತಿಗಳ ಸವಾಲಿನ ಮುಂದೆ ಚುನಾವಣೆಯಲ್ಲಿ ಗೆದ್ದು ಬರುವಂತಾಯಿತು. ಕಡಿದಾಳ್‌ರಿಗೆ ಅಧಿಕಾರ ಜನಸೇವೆಗೊಂದು ಸಾಧನವಾಗಿತ್ತೇ ವಿನಃ ಎಂದೂ ತಮ್ಮ ಸ್ಥಾನಭದ್ರತೆಯ ಸಾಧನೆಯಾಗಿರಲಿಲ್ಲ. ಜನಸೇವೆಗಾಗಿಯೇ ಜೀವನ ತೊಡಗಿಸಿಕೊಂಡಿದ್ದ ಕಡಿದಾಳ್‌ರ ಕ್ರಿಯಾಶೀಲತೆ, ಒಲವು, ನಿಲುವುಗಳು, ಬಡವರ ಬಗೆಗಿನ ಕಾಳಜಿಗಳು, ಭೂಹೋರಾಟದ ಸಾಧನೆಗಳಿಗೆ ಬುನಾದಿಯಾದವು.

## ೨.೧. ವ್ಯಕ್ತಿ ಪರಿಚಯ

ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಹಾರೋಗೋಳಿಗೆ ಗ್ರಾಮ ಅಕ್ಷರ ಜಗತ್ತಿನಿಂದ ಸಂಪೂರ್ಣವಾಗಿ ವಂಚಿತವಾಗಿತ್ತು. ಇಂತಹ ಗ್ರಾಮದಲ್ಲಿ ಮಂಜಪ್ಪನವರು ಕಡಿದಾಳ್[೨] ಎಂಬ ಮನೆತನದಲ್ಲಿ ೧೩ ೦೭ ೧೯೦೭ರಲ್ಲಿ ದುಗ್ಗಣಗೌಡ ಮತ್ತು ಚೆನ್ನಮ್ಮ ಅವರ ಮೊದಲ ಮಗನಾಗಿ ಜನಿಸಿದರು. ಕಡಿದಾಳ್‌ರ ಮನೆತನವು ಶ್ರೀಮಂತಿಕೆಯ ಪರಂಪರೆಯನ್ನು ಹೊಂದಿತ್ತು. ಅವರ ಕಾಲದಲ್ಲಿ ಅವರು ಬಡತನದಲ್ಲಿಯೇ ಕಾಲನೂಕಬೇಕಾಯಿತು. ಇದಕ್ಕೆ ಕಾರಣ ಕಡಿದಾಳ್‌ರ ಅಜ್ಜ ತಮ್ಮಣ್ಣಗೌಡರು ಯಥೇಚ್ಚವಾಗಿದ್ದ ವಂಶದ ಆಸ್ತಿಯನ್ನೆಲ್ಲಾ ಅಣ್ಣನ ಸ್ವಾರ್ಥತೆ ದಬ್ಬಾಳಿಕೆಗಳನ್ನು ಸಹಿಸದೆ ಎಲ್ಲವನ್ನು ತೊರೆದು ಸ್ವಾಭಿಮಾನದ ಗೇಣಿ ಬದುಕನ್ನು ಆಯ್ದುಕೊಂಡರು. ಹೀಗಾಗಿ ಕಡಿದಾಳ್ ಅವರ ಕುಟುಂಬವು ಬಡತನದಲ್ಲಿಯೇ ಜೀವನ ಸಾಗಿಸಬೇಕಾಯಿತು.

ಕಡಿದಾಳ್‌ರಿಗೆ ಇಂತಹ ಬಡತನದಲ್ಲಿಯೂ ಓದಬೇಕೆಂಬ ಕನಸು, ಆ ಕನಸುಗಳನ್ನು ನನಸಾಗಿಸಿಕೊಳ್ಳುವ ದಿಕ್ಕಿನಲ್ಲಿ ಸವೆಸಿದ ದಾರಿ ಸುಗಮವಾಗಿರಲಿಲ್ಲ. ಕಡಿದಾಳ್‌ರ ಪ್ರಾಥಮಿಕ ಶಿಕ್ಷಣ ಐಗಳ ಮಠದಲ್ಲಿ ರುಕ್ಮಾಚಾರಿ ಎಂಬ ಗುರುಗಳ ಕೃಪೆಯಿಂದ ಮರಳಿನ ಮೇಲೆ ಅಕ್ಷರಾಭ್ಯಾಸದಿಂದ ಪ್ರಾರಂಭವಾಯಿತು. ಮುಂದಿನ ಶಿಕ್ಷಣ ಚಿಕ್ಕಪ್ಪ ತುಡ್ಕಿ ರಾಮಣ್ಣನಗೌಡರ ಸಹಾಯದಿಂದ ತೀರ್ಥಹಳ್ಳಿಯಲ್ಲಿ ನಡೆಯಿತು(ಕಡಿದಾಳ್, ೧೯೯೦:೭೦). ಕಡಿದಾಳ್‌ರು ಪ್ರೌಢಶಿಕ್ಷಣವನ್ನು ಶಿವಮೊಗ್ಗದಲ್ಲಿ ಪಡೆದರು. ಇದೇ ಸಂದರ್ಭದಲ್ಲಿ ಶಾಲಾ ಆವರಣದಲ್ಲೇ ಮೊದಲ ಬಾರಿಗೆ ಮಹಾತ್ಮಗಾಂಧೀಯವರನ್ನು ಕಾಣುವ ಅವಕಾಶ ಒದಗಿ ಬಂತು. ಅವರ ಭಾಷಣವನ್ನು ಕೇಳಿ ಕಡಿದಾಳ್‌ರ ಮನಸ್ಸು ಮಾರು ಹೋಯಿತು. ಅವರಿಗೆ ನಿಧಾನವಾಗಿ ಸ್ವಾತಂತ್ರ್ಯ ಚಳುವಳಿಯ ಅರ್ಥ ತಿಳಿಯತೊಡಗಿತು. ತಾನು ಸ್ವಾತಂತ್ರ್ಯ ಚಳುವಳಿಯಲ್ಲಿ ಹೋರಾಡಬೇಕೆಂದು ಅವರ ಹೃದಯ ತುಡಿಯಿತು. 'ಹರಿಜನ', 'ಯಂಗ್ ಇಂಡಿಯ' ಪತ್ರಿಕೆಗಳಿಂದ ಅವರು ಬಹಳಷ್ಟು ಪ್ರಭಾವಿತರಾದರು. ಗಾಂಧೀ ಅವರು ಕಡಿದಾಳ್‌ರ ಬದುಕಿನ ಕ್ರಾಂತಿ ಪುರುಷರಾದರು. ಇಂಟರ್ ಮೀಡಿಯಟ್ ಶಿಕ್ಷಣ ಪಡೆಯಲು ಬೆಂಗಳೂರಿನಲ್ಲಿರುವ ಆರ್ಟ್ಸ್ ಅಂಡ್ ಸೈನ್ಸ್ ಕಾಲೇಜನ್ನು ಸೇರಿಕೊಂಡರು. ಮುಂದೆ ಬಿ.ಎ. ಪದವಿಯನ್ನು ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಪಡೆದರು. ಈ ಸಂದರ್ಭದಲ್ಲಿ ರಾಮಕೃಷ್ಣ ಆಶ್ರಮದೊಂದಿಗೆ ಸಂಪರ್ಕ ಬೆಳೆಸಿಕೊಂಡರು. ಅಲ್ಲಿನ ಪ್ರಶಾಂತ ಜೀವನ ಉಪನ್ಯಾಸಗಳಿಂದ ಮತ್ತು ವಿವೇಕಾನಂದರ ತತ್ವಗಳಿಂದ ಬಹಳಷ್ಟು ಪ್ರಭಾವಿತರಾದರು. "ತಾನು ಸಹ ವಿವೇಕಾನಂದರಂತೆ ದೊಡ್ಡ ಯೋಗಿಯಾಗಿ ಜಡನಿದ್ರೆಯಲ್ಲಿರುವ ಭಾರತವನ್ನು ಎಚ್ಚರಿಸಬೇಕು" ಎಂಬ ಹಂಬಲ ಉಂಟಾಯಿತು (ಕಡಿದಾಳ್ ಮಂಜಪ್ಪ, ೧೯೯೦:೫೧). ಇದರಿಂದಾಗಿ ರಾಷ್ಟ್ರೀಯ ಕಾಂಗ್ರೆಸ್ ಸೇರಿ ರಾಷ್ಟ್ರೀಯ ಚಳುವಳಿಯಲ್ಲಿ ಪಾಲ್ಗೊಳ್ಳುವ ತುಡಿತ ಜೊತೆಗೆ ತಾನು ಉದ್ಯೋಗ ಪಡೆದು ತಂದೆಯ ಬಡತನದ ಭಾರವನ್ನೆಲ್ಲಾ ಹೊರಬೇಕೆಂಬ ವಾಸ್ತವಿಕ ಪ್ರಜ್ಞೆಯಿಂದ ಮನಸ್ಸು ಗೊಂದಲವಾಯಿತು. ಈ ಹಂತದಲ್ಲಿ ಯಾವುದೇ ನಿಶ್ಚಿತ ನೆಲೆಯನ್ನು ಕಾಣದೆ ತೊಳಲಾಟವನ್ನು ಅನುಭವಿಸಿದರು.

೧೯೩೨ರಲ್ಲಿ ಎಲ್.ಎಲ್.ಬಿ.ಶಿಕ್ಷಣವನ್ನು ಪಡೆಯಲು ಪೂನಾದ ಕಾನೂನು ಕಾಲೇಜನ್ನು ಸೇರಿಕೊಂಡರು. ಆ ಕಾಲದಲ್ಲಿ ಪೂನಾ ಸಾಂಸ್ಕೃತಿಕ ರಾಜಕೀಯ ಚಟುವಟಿಕೆಗಳ ಕೇಂದ್ರವಾಗಿತ್ತು. ಇದೇ ಸಂದರ್ಭದಲ್ಲಿ ಕೋಮುವಾರು ತೀರ್ಪಿನ ವಿರುದ್ಧ ಗಾಂಧೀಜಿಯವರು ಉಪವಾಸ ಸತ್ಯಾಗ್ರಹ ಕೈಗೊಂಡಿದ್ದರಿಂದ ದೇಶದಲ್ಲಿ ಉದ್ವಿಗ್ನ ಸ್ಥಿತಿ ಉಂಟಾಗಿತ್ತು.[೩] ಎಲ್ಲೆಲ್ಲೂ ಚರ್ಚೆ ಭಾಷಣಗಳು ಬಿರುಸಾಗಿ ನಡೆಯುತ್ತಿದ್ದವು. ಗಾಂಧೀಜಿಯವರ ಚಳುವಳಿಯ ಪರಿಚಯ ರಾಜಕೀಯ ಸ್ಥಿತಿಯನ್ನು ಅವಲೋಕಿಸುವ ಸಂದರ್ಭ ಒದಗಿ ಬಂದಿದ್ದರಿಂದ ಅವರ ರಾಜಕೀಯ ಪ್ರಜ್ಞೆಯ ಪರಿಧಿ ಇನ್ನಷ್ಟು ವಿಶಾಲಗೊಂಡಿತು. ಹಾಗೆಯೇ ಅನಿತಾ ಅವರ ಪ್ರಕಾರ, ಕಡಿದಾಳ್‌ರು ಪಡೆದುಕೊಂಡ ಉನ್ನತ ಶಿಕ್ಷಣವಾದ ಎಲ್.ಎಲ್.ಬಿ.ಪದವಿಯ ಫಲಶ್ರುತಿಯು ಒಬ್ಬ ಸಮರ್ಥ ರಾಜಕಾರಣಿ ಯಾಗಲು ಹಾಗೂ ಉತ್ತಮ ಭೂಸುಧಾರಕನಾಗಿ ರೂಪುಗೊಳ್ಳಲು ಸ್ಫೂರ್ತಿಯಾಯಿತು ಎಂದಿದ್ದಾರೆ (ಅನಿತಾ, ೧೯೯೪:೬).

ಕಡಿದಾಳ್‌ರು ಮುಂದಿನ ದಿನಗಳನ್ನು ವೃತ್ತಿ ಜೀವನದಲ್ಲಿ ಕಳೆದರು. ಪಾರ್ಥನಾರಾಯಣ ಪಂಡಿತ, ದಿನಕರ ನಾರಣಪ್ಪ ಮುಂತಾದ ಹಲವು ಜನರ ಸಹಕಾರದಿಂದ ವಕೀಲ ವೃತ್ತಿಯನ್ನು ಶಿವಮೊಗ್ಗದಲ್ಲಿ ಆರಂಭಿಸಿದರು. ಅವರ ವಕೀಲ ವೃತ್ತಿಗೆ ಟಿ.ವಿ. ನಾರಾಯಣ ಅಯ್ಯಂಗಾರ್ ಅವರೇ ಆದ್ಯ ಗುರುವಾಗಿದ್ದರು. ವೃತ್ತಿ ಜೀವನದಲ್ಲಿ ಯಾವುದೇ ಆಮಿಷಕ್ಕೆ ಒಳಗಾಗದೆ ಸತ್ಯಾನ್ವೇಷಣೆಯೇ ಅವರು ಮುಖ್ಯ ಗುರಿಯಾಗಿತ್ತು. ಬಡವರ ಕಷ್ಟಗಳಿಗೆ ಹೋರಾಡುತ್ತಿದ್ದ ಕಡಿದಾಳ್‌ರು ಯಾವುದೇ ಶುಲ್ಕ ತೆಗೆದುಕೊಳ್ಳದೇ ನ್ಯಾಯ ದೊರಕಿಸಿಕೊಡುತ್ತಿದ್ದರು (ಸಂಸದೀಯ ವ್ಯವಹಾರಗಳ ಸಂಸ್ಥೆ ಗಾಂಧೀಭವನ, ಬೆಂಗಳೂರು, ಕಡಿದಾಳ್ ಮಂಜಪ್ಪ ದತ್ತಿ ಉಪನ್ಯಾಸ ೧೦.೦೭.೧೯೮೫:೨), (ಶ್ರೀನಿವಾಸಯ್ಯ, ೧೯೯೬:೨೮-೨೦).

ವೃತ್ತಿಯಲ್ಲಿ ವಕೀಲರಾಗಿದ್ದ ಕಡಿದಾಳ್‌ರಿಗೆ ಸಹಜವಾಗಿಯೇ ಆ ಕಾಲದ ರಾಜಕೀಯದ ಕಡೆ ಒಲವುಂಟಾಯಿತು. ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಶಾಖೆ ಮೈಸೂರಿನಲ್ಲಿ ಪ್ರಾರಂಭವಾಗಿ ಮುಂದೆ ಅದರ ಅಧೀನ ಸಂಸ್ಥೆಯಾಗಿ ಕಾರ್ಯಾರಂಭ ಮಾಡತೊಡಗಿತ್ತು.[೨] ಶಿವಮೊಗ್ಗ ಜಿಲ್ಲೆಯ ಕಾಂಗ್ರೆಸ್ಸಿನ ಮೊದಲ ಕಾರ್ಯದರ್ಶಿಯಾಗಿ ಉಳಿದವರಿಗೆ ಈ ಸತ್ಯಾಗ್ರಹಕ್ಕೆ ಪ್ರೋತ್ಸಾಹ ನೀಡುತ್ತಿದ್ದರು. ಇದೇ ಸಂದರ್ಭದಲ್ಲಿ ಅಂದರೆ ೧೯೪೦ರಲ್ಲಿ ಆಗರ್ಭ ಶ್ರೀಮಂತರೆನಿಸಿದ ಅತ್ತಿಕೊಡಿಗೆ ಕಾಫಿ ಎಸ್ಟೇಟ್‌ನ ಮಾಲೀಕರಾದ ಚೆನ್ನೇಗೌಡರ ಮಗಳಾದ ಲಕ್ಷ್ಮೀದೇವಿಯವರೊಂದಿಗೆ ವಿವಾಹವಾಯಿತು. ಆಗಲೇ ಅವರು ಬರಹಗಾರ್ತಿಯಾಗಿದ್ದು, ನಂತರದ ದಿನಗಳಲ್ಲಿ ಮಲ್ಲಿಕಾ ಕಡಿದಾಳ್ ಎಂಬ ಕಾವ್ಯ ನಾಮದಿಂದ ಪ್ರಸಿದ್ಧರಾಗಿದ್ದಾರೆ. ಕಡಿದಾಳ್‌ರು ೧೯೪೭ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಪಾಲ್ಗೊಳ್ಳುವುದರೊಂದಿಗೆ ಸೆರೆಮನೆವಾಸವನ್ನು ಅನುಭವಿಸಿದರು. ಕಾರಾಗೃಹದ ಅನುಭವದಿಂದಾಗಿ ಅವರ ಇತಿಹಾಸದೃಷ್ಟಿ ಗಂಭೀರವಾಯ್ತು. ಸ್ವತಂತ್ರ ಸಮನ್ವಯ ಚಿಂತನೆ ಬೆಳೆಯಿತು. ೧೯೪೧ರಲ್ಲಿ ಪ್ರಥಮ ಬಾರಿಗೆ ಮೈಸೂರು

ಪ್ರಜಾಪ್ರತಿನಿಧಿ ಸಭೆಗೆ ತೀರ್ಥಹಳ್ಳಿ ತಾಲ್ಲೂಕಿನಿಂದ ಸ್ಪರ್ಧಿಸಿ ಗೆದ್ದರು. ಅಂದಿನಿಂದ ಅವರ ವೃತ್ತಿರಾಜಕಾರಣ ಪ್ರಾರಂಭವಾಯಿತು. ೧೯೪೫ರಲ್ಲಿ ಪ್ರಜಾಪ್ರತಿನಿಧಿ ಸಭೆಯ ಅವಧಿ ಮುಗಿದು, ೧೯೪೫ರಲ್ಲಿ 'ನ್ಯಾಯವಿಧೇಯಕ' ಸಭೆಯ ಸದಸ್ಯರಾಗಿದ್ದರು.

ತಮ್ಮ ಜವಾಬ್ದಾರಿಯುತ ವಕೀಲ ವೃತ್ತಿ ಮತ್ತು ರಾಜಕೀಯ ಕಾರ್ಯಗಳ ನಡುವೆಯೂ ಗೇಣಿದಾರರ ಸಂಘಟನೆಗಾಗಿ ಶ್ರಮಿಸಿದ್ದು ಅವಿಸ್ಮರಣೀಯವಾದದ್ದು. ಶೋಷಿತ ಗೇಣಿದಾರರನ್ನೆಲ್ಲಾ ಒಂದು ಪ್ರಭಾವಿತ ಸಂಸ್ಥೆಯ ಅಡಿಯಲ್ಲಿ ಸಂಘಟಿಸಿ ಹೋರಾಡುವ ಸಲುವಾಗಿ ೧೯೪೫ರಲ್ಲಿ ಮಲೆನಾಡ ಗೇಣಿದಾರ ಸಂಘವನ್ನು ಹುಟ್ಟು ಹಾಕುವುದರೊಂದಿಗೆ ಕಡಿದಾಳ್‌ರು ಕಣ್ಣಾರೆ ಕಂಡು ಅನುಭವಿಸಿದ ಏಳುಬೀಳಿನ ಕಷ್ಟಕಾರ್ಪಣ್ಯದ ಗೇಣಿ ಬದುಕಿಗೆ ಹೊಸರೂಪ ಕೊಡಬೇಕೆಂದು ಯೋಚಿಸಿದ್ದು ಮಹತ್ವದೆನಿಸುತ್ತದೆ. ಈ ನಿಟ್ಟಿನಲ್ಲಿ ಸಂಘಟನೆಯ ನಾಯಕತ್ವವನ್ನು ವಹಿಸಿಕೊಂಡ ಗೇಣಿ ಪ್ರಮಾಣ ನಿಗದಿ, ಗೇಣಿಪಾವತಿಗೆ ರಸೀದಿ ಪಡೆಯುವುದು. ಗೇಣಿ ತೂಕದಲ್ಲಿ ಶೋಷಣೆ ಮತ್ತು ಅನ್ಯಾಯದ ವಿರುದ್ಧ ಗೇಣಿದಾರರಲ್ಲಿ ಜಾಗೃತಿಗೊಳಿಸಲು ಸಭೆ ಸಮಾರಂಭಗಳನ್ನು ಹಮ್ಮಿಕೊಳ್ಳುತ್ತಿದ್ದರು. ಇತ್ಯಾದಿ ಕಾರ್ಯಕ್ರಮಗಳನ್ನು ರೂಪಿಸಿದರು. ಈ ಸಂಘಟನೆಯ ಪ್ರೇರಣೆಯೊಂದಿಗೆ 'ಸಾಗರದ ತಾಲ್ಲೂಕು ರೈತ ಸಂಘ' ಸ್ಥಾಪಿಸಿದರು. ಮುಂದೆ 'ಮಲೆನಾಡ ರೈತಸಂಘ'ವನ್ನು ಸ್ಥಾಪಿಸಿದರು. ಈ ಎಲ್ಲ ಸಂಘಟನೆಗಳಿಂದಾಗಿ ಮಲೆನಾಡಿನ ಗೇಣಿದಾರರಲ್ಲಿ ತಮ್ಮ ಹಕ್ಕು ಬಾಧ್ಯತೆಗಳ ಬಗ್ಗೆ ಜಾಗೃತಿ ಮೂಡಿ, ಸ್ವಾತಂತ್ರ್ಯಾನಂತರ ನಡೆದ ರೈತ ಹೋರಾಟಗಳಲ್ಲಿ ಪ್ರಸಿದ್ಧಿ ಪಡೆದು ಕಾಗೋಡು ಚಳುವಳಿ ನಡೆಯಲು ಕಾರಣರಾದರು (ಶ್ರೀನಿವಾಸಯ್ಯ, ೧೯೯೬:೩೦), (ಜನ ಹೋರಾಟ ಸಂಜೆ ಪತ್ರಿಕೆ, ೨೨.೧೨.೨೦೦೭:೪).

೧೯೫೨ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ತೀರ್ಥಹಳ್ಳಿಯ ಕ್ಷೇತ್ರದಿಂದ ಗೆದ್ದಿದ್ದರು. ಮುಖ್ಯಮಂತ್ರಿ ಕೆಂಗಲ್ ಹನುಮಂತಯ್ಯನವರ ನಾಯಕತ್ವದ ಸರ್ಕಾರದಲ್ಲಿದ್ದು ಕಂದಾಯ, ನೀರಾವರಿ ಹಾಗೂ ಲೋಕೋಪಯೋಗಿ ಇಲಾಖೆಗಳ ಸಚಿವರಾಗಿದ್ದರು. ಈ ಅವಧಿಯಲ್ಲಿ ಸರ್ಕಾರಿ ಭೂಮಿಯು ಶ್ರೀಮಂತರ ಪಾಲಾಗುವುದನ್ನು ತಪ್ಪಿಸಲು ವಿಧೇಯಕವನ್ನು ರಚಿಸಿ ಭೂಹೀನರಿಗೆ ಅನುಕೂಲವಾಗುವಂತೆ ಮಾಡಿದರು. ಮೈಸೂರು ಗೇಣಿಶಾಸನವನ್ನು ತಂದಿದ್ದಲ್ಲದೆ, ೧೯೫೪ರಲ್ಲಿ ದೇವಾದಾಯ, ಧರ್ಮಾದಾಯ ಇನಾಂ ಪದ್ಧತಿ ಮಸೂದೆಯನ್ನು ಮಂಡಿಸಿದರು. ಈ ಸಂದರ್ಭದಲ್ಲಿ ಬಂಧುಗಳನ್ನು ಒಳಗೊಂಡಂತೆ ಶ್ರೀಮಂತರನ್ನು, ಭೂಮಾಲೀಕರನ್ನು ಎದುರಿಸಬೇಕಾಯಿತು.

ಕಡಿದಾಳ್‌ರು ಕಂದಾಯ ಮಂತ್ರಿಯಾಗಿದ್ದ ಸಂದರ್ಭದಲ್ಲಿ ಕಂದಾಯಕ್ಕೆ ಸಂಬಂಧಿಸಿದಂತೆ ಅಪೀಲುಗಳನ್ನು ಪರಿಶೀಲಿಸುವ ಹೊಣೆಯನ್ನು ಹೊತ್ತಿದ್ದರು. ಈ ಸಮಯದಲ್ಲಿ ಅವರ ವಕೀಲ ವೃತ್ತಿಯ ಜ್ಞಾನ, ಅನುಭವಗಳು ಸಹಕಾರಿಯಾಯಿತು. ಇಂತಹ ಸನ್ನಿವೇಶದಲ್ಲಿ ಯಾವ ಪಕ್ಷದ ಒತ್ತಡಕ್ಕೂ ಮಣಿಯದೆ, ನಿರ್ದಾಕ್ಷಿಣ್ಯವಾಗಿ ತೀರ್ಪು ನೀಡುತ್ತಿದ್ದರು. ನ್ಯಾಯವಿತರಣೆಯ ಅಧಿಕಾರ ವಹಿಸಲು

ಸರ್ಕಾರಕ್ಕೆ ಮನವಿ ಸಲ್ಲಿಸುತ್ತಿದ್ದರು. ಇವರ ಸೂಚನೆಯ ಮೇರೆಗೆ "ರೆವಿನ್ಯೂ ಬೋರ್ಡ್" ಎಂಬ ಪ್ರತ್ಯೇಕ ಇಲಾಖೆಯನ್ನು ಅಸ್ತಿತ್ವಕ್ಕೆ ತಂದರು. ಕಡಿದಾಳ್‌ರ ಅಧಿಕಾರಾವಧಿಯಲ್ಲಿ ಅವರ ದಕ್ಷತೆ, ಪ್ರಾಮಾಣಿಕತೆಯನ್ನು, ರೈತರ ಮೇಲಿನ ಕಾಳಜಿಯನ್ನು ಪರೀಕ್ಷಿಸುವ ಕಾಲ ಬಂದಿತು. ಕೃಷ್ಣರಾಜಸಾಗರದ ಜಲಾಶಯದ ನೀರಿನ ಮಟ್ಟ ಕುಸಿದು ಹೋಗಿದ್ದರಿಂದ ಮಂಡ್ಯದ ರೈತರಿಗೆ ನೀರಿನ ಕೊರತೆ ಉಂಟಾಯಿತು. ೧೯೨೪ರ ಒಪ್ಪಂದವು ಮಂಡ್ಯದ ರೈತರಿಗೆ ನೀರನ್ನು ಬಿಡದಂತೆ ಅಡ್ಡಿಯಾಗಿತ್ತು. ಇದರಿಂದ ಕಡಿದಾಳ್‌ರು ಮದ್ರಾಸಿನ ಮುಖ್ಯಮಂತ್ರಿಯಾದಂತಹ ರಾಜಾಜಿಗೆ ಪತ್ರ ಬರೆದು ನೀರನ್ನು ಒದಗಿಸುವಂತೆ ಮನವಿ ಮಾಡಿಕೊಂಡರು. ಇದರಿಂದ ರೈತರ ಪರಿಸ್ಥಿತಿಯು ಸುಧಾರಿಸಿತು. ಮಲೆನಾಡಿಗೆ ಸಂಬಂಧಿಸಿದಂತೆ ಅಭಿವೃದ್ಧಿ ಆರಂಭವಾದುದು ಕಡಿದಾಳ್‌ರು ಲೋಕೋಪಯೋಗಿ ಸಚಿವರಾಗಿ ಯೋಜನೆಗಳನ್ನು ವ್ಯವಸ್ಥಿತವಾಗಿ ಕಾರ್ಯರೂಪಕ್ಕೆ ತಂದುದರಿಂದಲೇ. ಮಲೆನಾಡಿನ ಜನತೆಯ ಬೇಡಿಕೆಗಳಿಗೆ ಸ್ಪಂದಿಸುತ್ತ, ಅವರಲ್ಲಿ ವೈಚಾರಿಕತೆ ಬೆಳೆಯಲು ಕಾರಣರಾದರು (ಕಡಿದಾಳ್ ಮಂಜಪ್ಪ ದತ್ತಿ ಉಪನ್ಯಾಸ, ಗಾಂಧೀ ಭವನ, ೧೯೮೫:೩).

೧೯-೮-೧೯೫೬ರಿಂದ ೧-೧೧-೧೯೫೬ ರವರೆಗೆ ರಾಜ್ಯದ ಮುಖ್ಯಮಂತ್ರಿಯಾಗಿ ಮೂರು ತಿಂಗಳ ಕಾಲವಿದ್ದರು. ಈ ಸಮಯದಲ್ಲಿಯೇ ಅವರು ವಿಧಾನಸೌಧವನ್ನು ಉದ್ಘಾಟನೆ ಮಾಡಿರುವುದು ಗಮನಾರ್ಹವಾಗಿದೆ. ಇವರ ಅಧಿಕಾರಾವಧಿಯಲ್ಲಿ ಪಶ್ಚಿಮ ಬಂಗಾಳದ ಕೈಗಾರಿಕೋದ್ಯಮಿಯೊಬ್ಬ ಮೈಸೂರಿನಲ್ಲಿ ಉದ್ಯಮ ಸ್ಥಾಪನೆಗೆ ೫೦೦ ಎಕರೆ ಭೂಮಿಯನ್ನು ಕೊಡಿಸಬೇಕೆಂದು ಪ್ರತಿಫಲ ನೀಡುವುದಾಗಿ ಆಮಿಷವೊಡ್ಡಿದಾಗ ಕಡಿದಾಳ್‌ರು ಜವಾನನಿಂದ ಕತ್ತು ಹಿಡಿದು ತಳ್ಳಿಸಿದ ಘಟನೆ ಕಂಡುಬಂದಿದೆ. ಇಂತಹ ಸಂದರ್ಭಗಳಲ್ಲಿ ನಿರ್ದಾಕ್ಷಿಣ್ಯವಾಗಿ ವರ್ತಿಸುತ್ತಿದ್ದರು. ೧೯೫೭ರಲ್ಲಿ ಎರಡನೆ ಬಾರಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಕಡಿದಾಳ್‌ರು ಶೃಂಗೇರಿ ಕ್ಷೇತ್ರದಿಂದ ಅವಿರೋಧವಾಗಿ ಆಯ್ಕೆಯಾದದ್ದು ಸಾಮಾನ್ಯ ಸಂಗತಿಯಾಗಿರಲಿಲ್ಲ. ಇವರ ಕಾರ್ಯಕ್ಷಮತೆ ಅಷ್ಟೊಂದು ವಿಶಾಲವಾಗಿತ್ತು. ಇದೇ ಸಂದರ್ಭದಲ್ಲಿ ಮುಖ್ಯಮಂತ್ರಿಯಾಗುವಂತೆ ಅವಕಾಶ ಬಂದರೂ ಕೂಡ ಮನಸ್ಸು ಮಾಡಲಿಲ್ಲ. ಕಡಿದಾಳ್‌ರು ಅಧಿಕಾರಕ್ಕೆ ಎಂದೂ ಆಸೆಪಟ್ಟವರಲ್ಲ ಎಂದು ತಿಳಿಯುತ್ತದೆ. ನಿಜಲಿಂಗಪ್ಪನವರು ಮುಖ್ಯಮಂತ್ರಿಯಾಗಿದ್ದಾಗ ಯಾವುದೇ ಸ್ಥಾನವನ್ನು ನೀಡದೆ, ಕಡಿದಾಳ್‌ರು ಎಲ್ಲಿ ಬೆಂಬಲ ಸೂಚಿಸುವುದಿಲ್ಲವೂ ಎಂದು ಬೇರೆಯವರು ಅವಕಾಶ ಮಾಡಿಕೊಡಲಿಲ್ಲ ಎಂಬ ಆಪಾದನೆಯನ್ನು ಹೊರಿಸಿದರು. ಆಗ ಕಡಿದಾಳ್‌ರು "ನಾನು ಕಾಂಗ್ರೆಸ್ ಸದಸ್ಯನಾಗಿದ್ದರಿಂದ ಅವರ ಆಡಳಿತ ಎಲ್ಲಿಯವರೆಗೆ ಸಮರ್ಪಕವಾಗಿ ಇರುತ್ತದೆಯೋ ಅಲ್ಲಿಯವರೆಗೆ ಸಹಕಾರ ನೀಡಲು ನಾನು ಬದ್ಧನಾಗಿದ್ದನೆಂದು ಹೇಳಿದರು. ಇದರಿಂದ ಅವರಲ್ಲಿ ಅಧಿಕಾರದ ಸ್ವಾರ್ಥತೆ ಕಂಡುಬರುವುದಿಲ್ಲ" (ಮಂಜಪ್ಪ ೧೯೯೦:೨೧೨).

ಮುಂದೆ ಬಿ.ಡಿ.ಜತ್ತಿಯವರ ಸಚಿವ ಸಂಪುಟದಲ್ಲಿ ಕಂದಾಯ ಮಂತ್ರಿಯಾಗಿದ್ದಾಗ ಮಂಜಪ್ಪನವರ ಮಾವ ಸರ್ಕಾರಕ್ಕೆ ಸಂಬಂಧಿಸಿದ ಭೂಮಿಯನ್ನು ಕಾಫಿ ತೋಟ ಮಾಡುವುದಕ್ಕಾಗಿ ಅರ್ಜಿ ಸಲ್ಲಿಸಿದಾಗ

ಯಾವುದೇ ನಿರ್ಧಾರವನ್ನು ತೆಗೆದುಕೊಳ್ಳಲಿಲ್ಲ. ಅಧಿಕಾರವಿದ್ದರು ಕೂಡ ಅವರು ನಿರ್ಲಿಪ್ತರಾಗಿದ್ದರು. ಇದು ಅವರ ತತ್ವನಿಷ್ಟತೆಗೆ ಹೆಸರಾಗಿದೆ. ಕಛೇರಿಗಳಿಗೆ ಅನಿರೀಕ್ಷಿತವಾಗಿ ಭೇಟಿ ನೀಡುತ್ತಿದ್ದರು. ಇದಕ್ಕೆ ನಿದರ್ಶನವೆಂಬಂತೆ ದೊಡ್ಡಬಳ್ಳಾಪುರದ ತಾಲ್ಲೂಕು ಕಛೇರಿಗೆ ಅನಿರೀಕ್ಷಿತ ಭೇಟಿ ನೀಡಿದ್ದು, ಅಲ್ಲಿಯ ಕಡತಗಳ ವಿಲೇವಾರಿ ತ್ವರಿತಗೊಳಿಸಲು ಸಂಬಂಧಪಟ್ಟ ಅಧಿಕಾರಿಗಳು ಎಚ್ಚರಗೊಳ್ಳುವಂತೆ ಮಾಡುತ್ತಿದ್ದರು (ಮಂಜಪ್ಪ ೧೯೯೦:೨೨೦). ಸರ್ಕಾರದ ಕೆಲಸ ಕಾರ್ಯಗಳೆಲ್ಲವು ಸಮರ್ಪಕವಾಗಿ ನಡೆಯಬೇಕೆನ್ನುತ್ತಿದ್ದರು. ಮುಖ್ಯಮಂತ್ರಿ ಜತ್ತಿಯವರ ಮಂತ್ರಿ ಮಂಡಲದಲ್ಲಿ ಕಂದಾಯ ಮಂತ್ರಿಯಾಗಿದ್ದಾಗ ೧೯೬೧ರಲ್ಲಿ ಕರ್ನಾಟಕ ದಲ್ಲಿಯೇ ಮೊದಲ ಬಾರಿಗೆ ಉತ್ತಮವಾದ ಭೂಸುಧಾರಣೆಯನ್ನು ತಂದರು. ಈ ಸಮಯದಲ್ಲಿ ಅನೇಕರ ವಿರುದ್ಧ ದನಿಗಳನ್ನು ಎತ್ತಿದ್ದು, ಟೀಕೆಗಳನ್ನು ಕೇಳಬೇಕಾಯ್ತು. ಭೂಮಾಲೀಕರೆಲ್ಲರೂ ಕಡಿದಾಳ್‌ರ ವಿರುದ್ಧವಾಗಿದ್ದರಿಂದ ೧೯೬೨ರ ಚುನಾವಣೆಯನ್ನು ಎದುರಿಸುವುದು ಕಷ್ಟವಾಗಿತ್ತು. "ನಾಯಕರಾಗಿದ್ದ ಕಡಿದಾಳ್‌ರಿಗೆ ಈ ಚುನಾವಣೆ ಅಗ್ನಿ ಪರೀಕ್ಷೆಯಾಗಿತ್ತು" (ಸಂದರ್ಶನ : ಗೋವಿಂದೇಗೌಡ, ೧೭.೦೫.೨೦೦೮). ಕಡಿದಾಳ್‌ರು ರಾಜಕೀಯ ಜೀವನ ನಡೆಸುತ್ತಿರುವಾಗ ಭ್ರಷ್ಟಾಚಾರ, ದುರಾಚಾರ, ಅನಾಚಾರ, ಹಿಂಸಾಚಾರ ಹಾಗೂ ಅರಾಜಕತೆಗಳು ತಾಂಡವಾಡುತ್ತಿದ್ದವು. ಇದನ್ನು ನೋಡಿ ಸಹಿಸದೆ ೧೯೬೨ರಲ್ಲಿ ರಾಜಕೀಯದಿಂದ ನಿವೃತ್ತಿ ಪಡೆದರು. ನಂತರದ ದಿನಗಳಲ್ಲಿ ಕಡಿದಾಳ್‌ರು ಜೀವನ ನಡೆಸುವುದಕ್ಕಾಗಿ ಪುನಃ ವಕೀಲ ವೃತ್ತಿಯನ್ನು ಆರಂಭಿಸಿದರು. ನೆಲೆ ನಿಲ್ಲಲು ಸ್ವತಃ ಮನೆಯಿಲ್ಲದೆ ಬಾಡಿಗೆ ಮನೆಯಲ್ಲಿ ವಾಸಿಸಿದ್ದರು. ಇದರಿಂದ ಅಧಿಕಾರಾವಧಿಯಲ್ಲಿ ನಿಸ್ವಾರ್ಥ ಸೇವೆ ಎಷ್ಟಿತ್ತೆಂದು ತಿಳಿಯುತ್ತದೆ.

ಕಡಿದಾಳ್‌ರು ರಾಜಕೀಯದಿಂದ ನಿವೃತ್ತಿ ಹೊಂದಿದ ಮೇಲೆ ತಮ್ಮ ಸಾಧನೆಯನ್ನು ಸಾಹಿತ್ಯದಲ್ಲಿ ತೊಡಗಿಸಿಕೊಂಡಿದ್ದರು. ಇವರು ಪ್ರಮುಖವಾಗಿ ಮೂರು ಕಾದಂಬರಿಗಳು ಮತ್ತು ಆತ್ಮಕಥನವನ್ನು ಬರೆದಿದ್ದರು. ೧೯೬೨ರಲ್ಲಿ ಹೊರಬಂದ 'ಪಂಜರವಳ್ಳಿಯ ಪಂಜು', 'ನಾಳೆಯ ನೆಳಲು' ೧೯೬೭ರಲ್ಲಿ 'ಕಾಂತ್ರಿ ಕೂಟ' ೧೯೭೫ರಲ್ಲಿ ಪ್ರಕಟವಾಯಿತು. ೧೯೯೦ರಲ್ಲಿ 'ನನಸಾಗದ ಕನಸು' ಆತ್ಮಕಥನವನ್ನು ಇವರ ಸಾಹಿತ್ಯದ ಅಭಿರುಚಿಯನ್ನು ನೋಡಿದರೆ ಹೋರಾಟದ ಜೀವನೊಂದಿಗೆ ಕವಿ ಬಚ್ಚಿಟ್ಟು ಕೊಂಡಿದ್ದಾನೆಂದು ತಿಳಿಯುತ್ತದೆ. ಕಡಿದಾಳರ ಈ ಎಲ್ಲಾ ಸಾಹಿತ್ಯ ಕೃತಿಗಳನ್ನ ಕುರಿತಂತೆ ಜೆ.ಕೆ.ರಮೇಶ್ ಅವರು ವಿಶ್ಲೇಷಿಸಿರುವುದು ಕಂಡುಬಂದಿದೆ (ಭಲಗಾರ, ೦೯.೦೩.೨೦೦೮:೨).

ಕಡಿದಾಳ್‌ರ ಮೊದಲ ಕಾದಂಬರಿಯಾದಂತ 'ಪಂಜರವಳ್ಳಿಯ ಪಂಜು' ಸಂಪೂರ್ಣವಾಗಿ ಇವರ ಗೇಣಿ ಜೀವನದ ಚಿತ್ರಣವನ್ನು ಕಾದಂಬರಿ ರೂಪದಲ್ಲಿ ಇರುವುದು ಕಂಡುಬರುತ್ತದೆ. ಇದು ಕನ್ನಡದ ಪ್ರಥಮ ರಾಜಕೀಯ ಕಾದಂಬರಿಯಾಗಿದೆ. ವರಕವಿ ಬೇಂದ್ರೆಯವರು ಈ ಕಾದಂಬರಿಗೆ ಮುನ್ನುಡಿ ಬರೆದಿದ್ದಾರೆ. "ಕಾದಂಬರಿಯಲ್ಲಿ ಕಡಿದಾಳ್‌ರು ದಾಯಾದಿ ಮತ್ಸರದ ಫಲವಾಗಿ ಭೂಮಾಲೀಕರ ವಿರುದ್ಧ ಬಡ ಗೇಣಿದಾರನ ಮೊಮ್ಮೊಗನೊಬ್ಬ ಹೋರಾಡುವ ಚಿತ್ರಣವಿದೆ." ಈ ಕಾದಂಬರಿಯಲ್ಲಿ ಮಲೆನಾಡಿನ

ಪರಿಸರವನ್ನು ಚಿತ್ರಿಸುವುದರೊಂದಿಗೆ ಹಳ್ಳಿಯ ಜೀವನದ ರಾಜಕಾರಣವನ್ನು ತಿಳಿಸುತ್ತದೆ ಹಾಗೂ ವ್ಯಕ್ತಿಯ ರಾಜಕೀಯ ಪ್ರವೇಶ ಆದರಿಂದ ಗೇಣಿ ಬದುಕಿನ ಜೀವನವನ್ನು ಸುಧಾರಿಸುತ್ತದೆ ಎಂಬುದನ್ನು ವ್ಯಕ್ತಪಡಿಸುತ್ತದೆ. ರಾಷ್ಟ್ರೀಯ ರಾಜಕಾರಣದಲ್ಲಿ ಬಹುಮುಖ್ಯ ಪಾತ್ರ ವಹಿಸುವುದು, ಅಲ್ಲಿಯ ಉತ್ಪಾದನಾ ಕ್ರಮದ ಸಂಬಂಧಗಳ ಲೇವಾದೇವಿಯ ಮೂಲಕ ಗೇಣಿದಾರರನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡು ಜಮೀನ್ದಾರಿಕೆಯನ್ನು ಮುಂದುವರಿಸಿಕೊಳ್ಳುವ ಮೇಲುವರ್ಗದ ಕುತಂತ್ರವನ್ನು ಕಾದಂಬರಿಯಲ್ಲಿ ವಿವರಿಸಿದ್ದಾರೆ. ಕಾದಂಬರಿಯಲ್ಲಿನ ಒಟ್ಟಾರೆ ಚಿತ್ರಣವು ಜಮೀನ್ದಾರರಿಗೆ ಗೇಣಿದಾರರ ಶೋಷಣೆಯನ್ನು ತಿಳಿಸುತ್ತದೆ (ರಾಮದಾಸ್, ೨೦೦೭:೧೬).

ಕಡಿದಾಳ್‌ರು ಕೊನೆಯವರಿಗೂ ವಕೀಲ ವೃತ್ತಿಯನ್ನು ಅವಲಂಬಿಸಿಯೇ ಬದುಕನ್ನು ಸಾಗಿಸಿದರು. ಪ್ರಾಮಾಣಿಕ ನಡವಳಿಕೆಗೆ ಪ್ರಾತಿನಿಧ್ಯ ನೀಡಿದರು. ಭ್ರಷ್ಟಾಚಾರವನ್ನು ದ್ವೇಷಿಸುತ್ತಿದ್ದರು. ನಿಷ್ಠುರ ರಾಜಕಾರಣಿ ಎನಿಸಿಕೊಂಡ ಕಡಿದಾಳ್‌ರು ಸ್ವಭಾವತಃ ಮೃದುವಾಗಿತ್ತು. "ಕಡಿದಾಳರದು ಕರಗುವ ಮನಸ್ಸು. ಸ್ವಭಾವತಃ ಬೇರೆಯವರ ನೋವಿಗೆ ನೊಂದುಕೊಳ್ಳುತ್ತಿದ್ದರು. ಇವರ ಕಾರ್ಯಕ್ಷಮತೆಯು ಮೃದು ಸ್ವರೂಪವಾಗಿತ್ತು" (ಸಂದರ್ಶನ:ಹಿ.ಚಿ.ಬೋರಲಿಂಗಯ್ಯ ೮.೭.೨೦೦೮)." ಜೀವನದುದ್ದಕ್ಕೂ ಪ್ರಾಮಾಣಿಕವಾಗಿ ಯಾವುದೇ ಆಮಿಷಕ್ಕೆ ಒಳಗಾಗದೆ ಅಧಿಕಾರ ನಡೆಸಿದ್ದರಿಂದ ಕೊನೆಯ ದಿನಗಳಲ್ಲಿ ಕೂಡ ಬಿಡುವಿಲ್ಲದೆ ದುಡಿಯಬೇಕಾಯಿತು. ಮನೆಯ ಸಾಲವನ್ನು ತೀರಿಸುವುದಕ್ಕಾಗಿ, ಮಾನಸಿಕ ಚಿಂತನೆಗಳಿಂದ ದೇಹ ದಿನದಿಂದ ದಿನಕ್ಕೆ ಕೃಶವಾಯಿತು. ಹೊಟ್ಟೆಯ ಹುಣ್ಣು ಆದ ಕಾರಣ ಬಹಳ ತೊಂದರೆ ಅನುಭವಿಸಬೇಕಾಯಿತು. ಸಾವಿನಂಚಿನಲ್ಲಿದಾಗಲೂ ಕಡಿದಾಳ್‌ರ ಮನಸ್ಸು ದೇಶದ ದುರಾವಸ್ಥೆಗಳ ಬಗ್ಗೆ ಚಿಂತಿಸುತ್ತಿತ್ತು. ಜನರನ್ನು ಸಂಘಟಿಸಬೇಕು, ಜನತೆಗೆ ತಿಳಿಹೇಳಬೇಕು ಎಂದು ಚಿಂತಿಸುತ್ತಿದ್ದ ಕಡಿದಾಳ್‌ರು ೧೯೭೨ರ ಮಾರ್ಚ್ ೮ರಂದು ವಿಧಿವಶವಾದರು.

## ೨.೨. ಭೂಹೋರಾಟಕ್ಕೆ ಪ್ರೇರಣೆ ನೀಡಿದ ಅಂಶಗಳು

ನಮ್ಮ ಸಮಾಜದಲ್ಲಿನ ಮಹಾನ್ ವ್ಯಕ್ತಿಗಳ ಜೀವನ ಮತ್ತು ಸಾಧನೆಯನ್ನು ತಿಳಿದಾಗ ಅವರು ಒಬ್ಬ ಹೋರಾಟಗಾರನಾಗಿ ರೂಪುಗೊಳ್ಳಲು ಬದುಕಿನುದ್ದಕ್ಕೂ ಕಂಡುಕೊಂಡ ಅನುಭವಗಳು ಕಾರಣವಾಗುತ್ತವೆ. ಅವರು ನೆಲೆಸಿದಂತ ಸಮಾಜದ ಜನಜೀವನ ಮನಸ್ಸು ತಟ್ಟಿ ಅದೇ ಮುಂದೆ ಸುಧಾರಣೆ ಅಥವಾ ಹೋರಾಟದ ರೂಪದಲ್ಲಿ ಕಂಡುಬರುತ್ತದೆ. ಇದೇ ತರಹ ಕಡಿದಾಳ್‌ರ ಭೂಸುಧಾರಣೆ ರೂವಾರಿಯಾಗಿ, ಸಾಹಿತಿಯಾಗಿ ಹಾಗೂ ನಿಸ್ವಾರ್ಥ ರಾಜಕಾರಣಿಯಾಗಿ ರೂಪುಗೊಳ್ಳಲು ಅವರ ಸಮಾಜದಲ್ಲಿದ್ದ ಅಸಮಾನತೆ, ಶೋಷಣೆಯೇ ಕಾರಣವಾಗಿದೆ. ಮಂಜಪ್ಪನವರಿಗೆ ಮಲೆನಾಡಿನ ಪರಿಸರ, ಕುಟುಂಬ, ಮಲೆನಾಡಿನ ಜನಜೀವನ, ಅವರ ವೃತ್ತಿ ಜೀವನ ಇವೆಲ್ಲದವರೊಂದಿಗೆ ಶಿಕ್ಷಣ ಸೈದ್ಧಾಂತಿಕತೆ ಕೂಡ ಅವರ ಮೇಲೆ ಪ್ರಭಾವ ಬೀರಿದ್ದು ಕಂಡುಬಂದಿದೆ.

## ಅ. ಪರಿಸರ ಮತ್ತು ಕುಟುಂಬ ಪ್ರಭಾವ

ಕಡಿದಾಳ್‌ರು ಜನಿಸಿದ ಸ್ಥಳವು ಮಲೆನಾಡಗಿದ್ದು, ಇಲ್ಲಿಯ ಜನರಲ್ಲಿ ಮೌಢ್ಯತೆ ಕಂಡುಬರುತ್ತಿತ್ತು. ಕಡಿದಾಳ್‌ರೇ ಹೇಳಿಕೊಳ್ಳುತ್ತಾ "ಲೇವಾದೇವಿ ಮಾಡುತ್ತಿದ್ದ ಸಾಹುಕಾರರೂ, ವ್ಯಾಪಾರಿಗಳೂ, ಲಂಚಕೋರ ಸರ್ಕಾರಿ ಅಧಿಕಾರಿಗಳು ಜನರನ್ನು ನಾನಾವಿಧದಲ್ಲಿ ಶೋಷಣೆ ಮಾಡುತ್ತಿದ್ದರು. ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯೆಲ್ಲವೂ ಕೆಲವೇ ಜನ ಶ್ರೀಮಂತರ ಕೈ ಸೇರಿಹೋಗಿತ್ತು. ಕೃಷಿಕರಲ್ಲಿ ಶೇಕಡ ತೊಂಬತ್ತರಷ್ಟು ಜನ ಗೇಣಿದಾರರಾಗಿದ್ದರು..... ಅಂದು ಮಲೆನಾಡಿನಲ್ಲಿ ಹಳ್ಳಿಯ ಜನರು ಭಯೋತ್ಪಾದಕ ವಾತಾವರಣದಲ್ಲಿ ಬದುಕಿದ್ದರು. ಒಂದು ಕಡೆ ಕಾಡುಪ್ರಾಣಿಗಳ ಕಾಟ ಇನ್ನೊಂದು ಕಡೆ ಭೂತ ಪ್ರೇತಗಳ ಹೆದರಿಕೆ; ಮತ್ತೊಂದು ಕಡೆ ವಸೂಲಿ ಸಾಹೇಬರ ಕಾಟ"[೩] (ಮಂಜಪ್ಪ, ೧೯೯೦:೧೬). ಕಡಿದಾಳ್‌ರು ತಮ್ಮ ಕಾಲಘಟ್ಟದ ಪರಿಸರ, ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯನ್ನು ನಿಜ ಸ್ವರೂಪದಲ್ಲಿ ತಿಳಿಸಿದ್ದಾರೆ. ಈ ವ್ಯವಸ್ಥೆಯೇ ಗೇಣಿದಾರರ ಪರ ಹೋರಾಡುವುದಕ್ಕೆ ಕಾರಣವಾಯಿತು. ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಜಾತೀಯತೆ, ಮೇಲ್ವರ್ಗ, ಕೆಳವರ್ಗ, ಶ್ರೀಮಂತ-ಬಡವ, ಭೂಒಡೆಯ-ಗೇಣಿದಾರ ಇತ್ಯಾದಿ ಶ್ರೇಣೀಕರಣವನ್ನು ಸಮಾಜದಲ್ಲಿ ಕಡಿದಾಳ್‌ರು ಕಂಡಿದ್ದರು. ವ್ಯವಸ್ಥೆಯೊಳಗಣ ಈ ರೀತಿಯ ದೌರ್ಜನ್ಯವನ್ನು ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಿಂದ ಉಂಟಾಗುತ್ತಿದ್ದ ಅಸಮಾನತೆಯನ್ನು ಗುರುತಿಸುವ ಜಾಣ್ಮೆ, ಸುಶಿಕ್ಷಿತತೆ ಅಲ್ಲಿಯ ಜನರಲ್ಲಿ ಇಲ್ಲವಾಗಿತ್ತು. ಇದನ್ನೇ ಭೂಮಾಲೀಕರು ಬಂಡವಾಳವನ್ನಾಗಿಸಿ ಕೊಂಡು ಅನೇಕ ವರ್ಷಗಳ ಕಾಲ ಗೇಣಿದಾರರ ಮೇಲೆ ತಮ್ಮ ಹತೋಟಿಯನ್ನು ಸಾಧಿಸಿದ್ದರು. ಈ ನಿಟ್ಟಿನಲ್ಲಿ ಸುಶಿಕ್ಷಿತತೆ, ಅನ್ಯಾಯವನ್ನು ಗುರುತಿಸುವಿಕೆ ಮತ್ತು ಅದರ ವಿರುದ್ಧ ಹೋರಾಡಲು ಬೇಕಾದ ಜ್ಞಾನವನ್ನು ಸಂಪಾದಿಸುವ ಯತ್ನ ಮಂಜಪ್ಪನವರದಾಗಿತ್ತು. ಕಡಿದಾಳ್‌ರು ಹೋರಾಟದ ಕ್ಷೇತ್ರವನ್ನು ಆಯ್ದುಕೊಳ್ಳಲು ಅವರ ಸುತ್ತಲಿನ ಸಮಾಜದೊಂದಿಗೆ ಕುಟುಂಬವು ಕಾರಣವಾಗಿತ್ತು.

ಶ್ರೀಮಂತ ಪರಂಪರೆಯನ್ನು ಹೊತ್ತ ಕಡಿದಾಳ್‌ರ ಕುಟುಂಬವು ಸುಮಾರು ಎರಡು ನೂರು ವರ್ಷಗಳ ಇತಿಹಾಸ ಹೊಂದಿದೆ. ಶ್ರೀಮಂತ ಪರಂಪರೆಯನ್ನು ಹೊಂದಲು ಮುಖ್ಯ ಕಾರಣ ಸಾಕಷ್ಟು ಕೃಷಿ ಭೂಮಿಯನ್ನು ಹೊಂದಿತ್ತು. ಮಂಜಪ್ಪನವರು ತಮ್ಮ ಆತ್ಮಕತೆಯಲ್ಲಿ ಬರೆದುಕೊಂಡಂತೆ ತನ್ನ ಕುಟುಂಬ ದೊಡ್ಡ ಜಮೀನ್ದಾರರು ಎನಿಸಿದ್ದರೂ ಕೂಡ ಮುಂದೆ ಬಡಗೇಣಿದಾರನ ಮಗನಾಗಿ ಜನಿಸಬೇಕಾಯಿತು ಎಂಬುದಾಗಿ ತಿಳಿಸಿದ್ದಾರೆ. ಇದಕ್ಕೆ ಕಡಿದಾಳ್‌ರ ಅಜ್ಜ ತಮ್ಮಗೌಡರ ಅಣ್ಣನಾದ ಸಿದ್ದಣ್ಣಗೌಡರೇ ಕಾರಣ. ಅವಿಭಕ್ತ ಕುಟುಂಬದಲ್ಲಿ ಸ್ವಲ್ಪಮಟ್ಟಿನ ಜ್ಞಾನವುಳ್ಳವರು ಆಗಿದ್ದರು. ಇದರಿಂದ ಸರ್ವಾಧಿಕಾರಿಯಂತೆ ವರ್ತಿಸುತ್ತಿದ್ದು ಉಳಿದವರ ಮೇಲೆ ದೌರ್ಜನ್ಯ ನಡೆಸುತ್ತಿದ್ದರು. ಈ ಕಾರಣದಿಂದ ಕುಟುಂಬದ ಉಳಿದೆಲ್ಲ ಸದಸ್ಯರು ಆಸ್ತಿಯನ್ನು ಬಿಟ್ಟು ಹೊರ ನಡೆದರು. ಮತ್ತೆ ಪಿತ್ರಾರ್ಜಿತ ಆಸ್ತಿಯನ್ನು ಪಡೆಯಲು ಕಾನೂನಿನ ಮೂಲಕ ಪಡೆಯಲು ಪ್ರಯತ್ನಿಸಿದ್ದು, ಅದರಿಂದ ವಿಫಲವಾಗಿ, ಜೀವನ

ನಡೆಸುವುದಕ್ಕಾಗಿ ಶ್ರೀ ರಾಮಚಂದ್ರಪುರ ಮಠದ ಗೇಣಿ ಜಮೀನನ್ನು ಅವಲಂಬಿಸಿ ಗುಡಿಸಲಿನಲ್ಲಿನ ವಾಸ, ಬಡತನ ಇವೆಲ್ಲವು ಕಡಿದಾಳ್‌ರ ಮನಸ್ಸಿನ ಮೇಲೆ ಪ್ರಭಾವ ಬೀರಿತು (ಜನ ಹೋರಾಟ, ಸಂಜೆ ಪತ್ರಿಕೆ, ೧೨.೧೨.೨೦೦೭:೪). ಮೇಲು ನೋಟಕ್ಕೆ ಇದು ಕೌಟುಂಬಿಕ ಸಮಸ್ಯೆಯಂತೆ ಕಂಡುಬಂದರೂ, ಅವಿಭಕ್ತ ಕುಟುಂಬವು ಗೇಣಿದಾರರಂತೆ ನಡೆಸಿಕೊಂಡ ರೀತಿ, ವಂಚನೆ ಇವರನ್ನು ಮಲೆನಾಡಿನ ಉಳಿದ ಜಮೀನ್ದಾರರ ಸಮಸ್ಯೆಯಂತೆ ಕಂಡುಬಂತು. ಈ ರೀತಿಯ ದೌರ್ಜನ್ಯಕ್ಕೆ ಒಳಗಾದ ಕುಟುಂಬದ ಸುತ್ತಲಿನ ಸ್ಥಿತಿಯನ್ನು ತಿಳಿದ ಕಡಿದಾಳ್‌ರು ಜಾಗೃತಗೊಂಡು ಅಲ್ಲಿಯ ಸಾಮಾಜಿಕ ಸಮಸ್ಯೆ ವಿರುದ್ಧ ಹೋರಾಡುವಂತೆ ಮಾಡಿತು (ಮಂಜಪ್ಪ, ೧೯೯೦:೧,೨,೩).

ಆಸ್ತಿಯನ್ನು ಕಳೆದುಕೊಂಡು, ಕಾನೂನಿಂದ ನ್ಯಾಯ ಸಿಗದೆ, ಗೇಣಿ ಜಮೀನನ್ನು ಅವಲಂಬಿಸಿದ ಕಡಿದಾಳ್ ಅವರ ತಂದೆ ಮಕ್ಕಳಿಗೆ ಹೊಟ್ಟೆ ತುಂಬ ಊಟ ನೀಡಲಾಗದಂತಹ ಸ್ಥಿತಿಯಲ್ಲಿದ್ದರು. ಮಕ್ಕಳ ಪೋಷಣೆಗಾಗಿ ತಂದೆ, ತಾಯಿ ಇಬ್ಬರು ಹಗಲು ರಾತ್ರಿಯೆನ್ನದೆ ದುಡಿಯುತ್ತಿದ್ದರು. ಇಂತಹ ಸ್ಥಿತಿಯನ್ನು ಕಡಿದಾಳ್‌ರು ಬಾಲ್ಯದಿಂದಲೇ ಗಮನಿಸುತ್ತಿದ್ದರೆನ್ನುವ ವಿಷಯಗಳು ಅವರ ಆತ್ಮಕಥನದಲ್ಲಿ ಸಿಗುತ್ತದೆ. ಹಾಗೆಯೇ ಇಂತಹ ಸಂದರ್ಭಗಳನ್ನು ನೆನೆದುಕೊಳ್ಳುತ್ತಾ ಅವರೇ ಒಂದು ಕಡೆ "The Harsh life lead during the early of my life give me strength and curage to face the future challenges of life" ಎಂದು ಹೇಳಿಕೊಳ್ಳುತ್ತಾರೆ (ಮಂಜಪ್ಪ, What life has taught me Decan Herald, 20-04-1975).

ಬಡತನದಲ್ಲಿಯೇ ತಂದೆಯ ಪ್ರಾಮಾಣಿಕ ಜೀವನ, ನೈತಿಕತೆ ಮತ್ತು ತಾಯಿಯ ಪ್ರೀತಿ ಕಡಿದಾಳ್‌ರ ವ್ಯಕ್ತಿತ್ವ ರೂಪುಗೊಳ್ಳುವಲ್ಲಿ ಸಹಾಯಕವಾಯಿತು. ಕಡಿದಾಳ್‌ರ ತಂದೆ ದಿನದ ಆಯಾಸ ಮರೆತು ಮಕ್ಕಳಿಗೆ ದೇಶದ ವಿದ್ಯಮಾನ ತಿಳಿಸಲು 'ವೃತ್ತಾಂತ ಪತ್ರಿಕೆ'ಯನ್ನು ಓದುತ್ತಿದ್ದರು. ಕಡಿದಾಳ್‌ರು ಆಗ ವಸಾಹತುಶಾಹಿಯಿಂದ ಭಾರತಕ್ಕೆ ಬಂದ ಸ್ಥಿತಿಯನ್ನು ಪತ್ರಿಕೆಯಿಂದ ಅರಿಯುತ್ತಿದ್ದು, ಅಲ್ಲದೇ ಜಮೀನ್ದಾರಿ ನೀತಿಯನ್ನು ಅದೇ ದೃಷ್ಟಿಕೋನದಿಂದ ನೋಡುತ್ತಿದ್ದರು. ಹಾಗೆಯೇ ತನ್ನ ವ್ಯಕ್ತಿತ್ವ ರೂಪಿಸಿಕೊಳ್ಳಲು ಬೇಕಾದ ನೈತಿಕ ಮೌಲ್ಯಗಳನ್ನು ತಂದೆಯಿಂದ ಪಡೆದಿದ್ದರು. ಬಾಲ್ಯದಲ್ಲಿಯೇ ತಂದೆಯೊಂದಿಗೆ ಕೃಷಿಯ ಕೆಲಸದಲ್ಲಿ ತೊಡಗಿದ್ದರು. ತಂದೆಗೆ ಸಹಾಯಕವಾಗುವಂತೆ ಗೊಬ್ಬರ ಎತ್ತುವುದು, ಉಳುಮೆಯ ಸಮಯದಲ್ಲಿ ತಂದೆಯೊಂದಿಗೆ ಇರುತ್ತಿದ್ದರು. ಇಷ್ಟೊಂದು ಕಷ್ಟಪಟ್ಟು ದುಡಿದು ಬಂದಂತಹ ಲಾಭವನ್ನು ಭೂಮಾಲೀಕರಿಗೆ ಕೊಡಲು ಸಹಿಸುತ್ತಿರಲಿಲ್ಲ. ಇದಲ್ಲದೇ "ಗೇಣಿಯನ್ನು ವಸೂಲಿ ಮಾಡುವಾಗ ವಸೂಲಿ ಸಾಹೇಬರುಗಳನ್ನು ಕಳಿಸುತ್ತಿದ್ದರು. ಇವರು ಗೇಣಿದಾರರನ್ನು ಗುಲಾಮ ರಂತೆ ನಡೆಸಿಕೊಳ್ಳುತ್ತಿದ್ದರು. ಜಮೀನ್ದಾರರು ವಸೂಲಿ ಸಾಹೇಬರುಗಳ ಮೂಲಕ ಗೇಣಿದಾರರನ್ನು ಸತತವಾಗಿ ಶೋಷಣೆ ಮತ್ತು ಅನ್ಯಾಯಕ್ಕೆ ಒಳಪಡಿಸುತ್ತಿದ್ದರಲ್ಲದೆ, ಈ ವಸೂಲಿ ಸಾಹೇಬರು

ಹೆಣ್ಣುಮಕ್ಕಳ ಮೇಲೆ ದೌರ್ಜನ್ಯ ನಡೆಸುತ್ತಿದ್ದರು. ಮಲೆನಾಡಿನ ಸಮಾಜದಲ್ಲಿನ ಅಸಮಾನತೆಯ ಪರಿ ಮತ್ತು ಬಾಲ್ಯದಲ್ಲಿ ಕಂಡಂತ ಕುಟುಂಬದ ಬಡತನದ ನೋವು, ಒಪ್ಪೊತ್ತಿನ ಊಟದಲ್ಲಿಯೇ ಹಸಿವನ್ನು ನೀಗಿಸಿದ್ದು, ಇಂತಹ ಅನುಭವಗಳು ಕಡಿದಾಳ್‌ರನ್ನು ಮುಂದೆ ಭೂ ಹೋರಾಟಗಾರನನ್ನಾಗಿ ಮತ್ತು ಭೂ ಸುಧಾರಣಾ ರುವಾರಿಯಾಗಿ ರೂಪಿಸಲು ಕಾರಣವಾಗಿತ್ತು (ಸಂದರ್ಶನ: ಗಣಪತಿಯಪ್ಪ, ೨೦.೦೫.೨೦೦೮).

## ಆ. ಶಿಕ್ಷಣ ಮತ್ತು ಸೈದ್ಧಾಂತಿಕತೆಯ ಪ್ರಭಾವ

ಕಡಿದಾಳ್‌ರು ಕುಟುಂಬದ ನೈತಿಕ ಮೌಲ್ಯಗಳೊಂದಿಗೆ ಶಿಕ್ಷಣ ಪಡೆಯುವ ಸಂದರ್ಭದಲ್ಲಿ ಸೈದ್ಧಾಂತಿಕ ಅಂಶಗಳು ಕಡಿದಾಳ್‌ರ ಮೇಲೆ ಪ್ರಭಾವ ಬೀರಿತ್ತು. ಈ ಸಮಯದಲ್ಲಿ ಮಹಾನ್ ವ್ಯಕ್ತಿಗಳ ತತ್ವ ಚಿಂತನೆಗಳು, ಆ ಕಾಲಘಟ್ಟದಲ್ಲಿನ ಕೆಲವಾರು ಘಟನೆಗಳು ಚಳುವಳಿಗಳು ಕಡಿದಾಳ್‌ರನ್ನು ಸೈದ್ಧಾಂತಿಕವಾಗಿ ರೂಪಿಸಲು ಸಹಾಯಕವಾಗಿವೆ.

ಕಡಿದಾಳ್‌ರು ಮನವತವಾದಿ ಚಿಂತನೆಗಳಿಂದ ಮತ್ತು ಸಮಾನತೆಯ ಸಿದ್ಧಾಂತಗಳಿಂದ ರೂಪುಗೊಳ್ಳಲು ಪ್ರಭಾವ ಬೀರಿದಂತಹ ಮೊದಲ ವ್ಯಕ್ತಿಯೆಂದರೇ ಮಹಾತ್ಮಗಾಂಧೀಜಿ. ಗಾಂಧೀಜಿ ಅವರನ್ನು ಮೊದಲ ಬಾರಿಗೆ ಅಂದರೆ ೧೯೨೭ರಲ್ಲಿ ಶಿವಮೊಗ್ಗದಲ್ಲಿ ಪ್ರೌಢಶಾಲಾ ಶಿಕ್ಷಣ ಪಡೆಯುವಂತಹ ಸಂದರ್ಭದಲ್ಲಿ ನೋಡುವ ಅವಕಾಶ ಒದಗಿ ಬಂತು. ಶಾಲಾ ಆವರಣದಲ್ಲಿ ಅರ್ಧಗಂಟೆಯವರೆಗೆ ಗಾಂಧೀಜಿ ಅವರು ಮಾಡಿದಂತಹ ಭಾಷಣದಿಂದ ಕಡಿದಾಳ್‌ರ ಮನಸ್ಸು ಪ್ರಭಾವಿತಗೊಂಡಿತ್ತು. ದೇಶದ ಸ್ಥಿತಿಯನ್ನು ಕುರಿತಂತೆ ಗಾಂಧೀಜಿ ಅವರ ಮಾತುಗಳಿಂದ ಕೇಳಿ ಸ್ವತಂತ್ರ ಚಳುವಳಿಯ ಅರ್ಥ ತಿಳಿಯ ತೊಡಗಿತು. ಹಾಗೆಯೇ ಗಾಂಧೀಜಿ ಅವರ ಹರಿಜನ ಮತ್ತು ಯಂಗ್ ಇಂಡಿಯಾ ಪತ್ರಿಕೆಗಳನ್ನು ಓದುವುದರ ಮೂಲಕ ಅವರ ತತ್ವ ಚಿಂತನೆಗಳನ್ನು ತಿಳಿಯ ತೊಡಗಿದರು (ಕಡಿದಾಳ್, ೧೯೯೦:೪೨), (ಅನಿತಾ, ೧೯೯೪:೫). ಹಾಗೆಯೇ ೧೯೩೨ರಲ್ಲಿ ಪುಣೆಯಲ್ಲಿ ಕಾನೂನು ಶಿಕ್ಷಣ ಪಡೆಯುವಾಗ ಮಹಾತ್ಮರ ಅಹಿಂಸತ್ಮಾಕ ತತ್ವಕ್ಕೆ ಮಾರು ಹೋಗಿದ್ದನ್ನ ಗುರುತಿಸಬಹುದು. ಪೂನ ಆಗ ರಾಜಕೀಯ ಚಟುವಟಿಕೆಗಳ ಕೇಂದ್ರವಾಗಿತ್ತು. ಇದೇ ಸಮಯದಲ್ಲಿ ಗಾಂಧೀಜಿಯವರು ಕೋಮುವಾರು ತೀರ್ಪಿನ ವಿರುದ್ಧ ಉಪವಾಸ ವ್ರತವನ್ನು ಕೈಗೊಂಡಿದ್ದರು. ದೇಶದಲ್ಲಿ ಉದ್ವಿಗ್ನ ಸ್ಥಿತಿ ಉಂಟಾಗಿತ್ತು.' ಎಲ್ಲಾ ಕಡೆಯಲ್ಲು ಚರ್ಚೆ ಭಾಷಣಗಳು ಬಿರುಸಾಗಿ ನಡೆಯುತ್ತಿತ್ತು. ಕಡಿದಾಳ್‌ರು ದೇಶದ ಸ್ಥಿತಿಯನ್ನು ಅವಲೋಕಿಸುವುದರೊಂದಿಗೆ ಗಾಂಧೀಜಿಯವರ ಪಟ್ಟು ಬಿಡದೆ ಅಹಿಂಸತ್ಮಾಕವಾದ ಉಪವಾಸ ವ್ರತಕ್ಕೆ ಪ್ರಭಾವಿತಗೊಂಡರು ಎಂಬುದಾಗಿ ಅನಿತಾ ಬಿ.ಎಸ್. ಅವರು ಕಡಿದಾಳ್‌ರ "ವ್ಯಕ್ತಿತ್ವ ಮತ್ತು ಸಾಹಿತ್ಯ" (೧೯೯೪) ಎಂಬ ಅಪ್ರಕಟಿತ ಕೃತಿಯಲ್ಲಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಹೊ.ಶ್ರೀನಿವಾಸಯ್ಯನವರು ''ಹೋರಾಟ ಶ್ರೀ''(ಸಂ)(೧೯೯೬)'' ಎಂಬ ಕೃತಿಯಲ್ಲಿ ಈ ಮೇಲಿನ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ಕಡಿದಾಳ್‌ರು ಒಬ್ಬ ಹೋರಾಟಗಾರನಾಗಿ ರೂಪುಗೊಳ್ಳಲು ಗಾಂಧೀಜಿ ಅವರ ಗಾಢವಾದ ಪ್ರಭಾವ ಪ್ರಮುಖ ಕಾರಣವಾಗಿತ್ತೆಂದು ತಿಳಿಸಿದ್ದಾರೆ. ಚಲುವರಾಜು ಅವರು ಹೋರಾಟ ಶ್ರೀ ಕೃತಿಯಲ್ಲಿ ಕಡಿದಾಳ್‌ರ ಕುರಿತಂತೆ ಹೀಗೆ ಹೇಳಿದ್ದಾರೆ. ಗಾಂಧೀಜಿಯಿಂದ ಪ್ರೇರಣೆಗೊಂಡು ಸಮಾಜ ಸುಧಾರಣೆಯಲ್ಲಿ ಕಡಿದಾಳ್‌ರು ತೊಡಗಿದ್ದರು ಎಂಬ ಅಂಶವನ್ನು ತಿಳಿಸಿದ್ದಾರೆ. ಗಾಂಧೀಜಿಯ ತತ್ವದಿಂದಾಗಿ ಪ್ರೇರಣೆಗೊಂಡ ಕಡಿದಾಳ್‌ರು ವರ್ಣಾಶ್ರಮದಿಂದ ಕಡಿದಾಳ್‌ರು ಶಾಲಾ ಕಾಲೇಜು ದಿನಗಳಲ್ಲಿ ಜಾತಿಯ ವಿರುದ್ಧ ಹೋರಾಡಿದರು ಎಂಬ ಅಂಶವನ್ನು ತಿಳಿಸಿದ್ದಾರೆ (ಕಡಿದಾಳ್, ೧೯೯೦: ೨೩, ಶ್ರೀನಿವಾಸಯ್ಯ, ೧೯೯೬:೪೬). ವಿದ್ಯಾರ್ಥಿ ಜೀವನದಿಂದಲೇ ಪ್ರಭಾವಿತಗೊಂಡಿದ್ದ ಕಡಿದಾಳ್‌ರು ಗಾಂಧೀಜಿಯ ತತ್ವ ಆದರ್ಶಗಳ ಮಾದರಿಯಲ್ಲಿಯೇ ಕಾರ್ಯಕೈಗೊಳ್ಳಲು ಶಕ್ತಿ ಮೀರಿ ಪ್ರಯತ್ನಸಿದ್ದನ್ನು ತಿಳಿಯಬಹುದು. ಆದರೆ ಕಡಿದಾಳ್‌ರಿಗೆ ಗಾಂಧೀಜಿಯ ತತ್ವಗಳಲ್ಲಿ ಒಲವಿದ್ದರೂ ಅದರ ಅಳವಡಿಕೆಯಲ್ಲಿನ ಮಿತಿಗಳ ಅರಿವಿತ್ತು. ಈ ಕಾರಣದಿಂದಾಗಿಯೇ ಗಾಂಧೀಜಿಯ ತತ್ವಗಳನ್ನು ಇತರೆ ರಾಜಕಾರಣಿಗಳಂತೆ ಸ್ವಾರ್ಥ ಸಾಧನೆಗಾಗಿ ಬಳಸಿಕೊಳ್ಳಲಿಲ್ಲ. ಹುಸಿ ಪ್ರಚಾರ ಸಾಹಸಕ್ಕೆ ಕೈ ಹಾಕಲಿಲ್ಲ. ಗಾಂಧೀಯವರ ನೇತೃತ್ವದಲ್ಲಿ ಸ್ವಾತಂತ್ರ್ಯಕ್ಕಾಗಿ ನಡೆದ ಹೋರಾಟದಲ್ಲಿ ಸ್ವಲ್ಪಮಟ್ಟಿಗೆ ಭಾಗವಹಿಸಿದ್ದರು. ಗಾಂಧೀಜಿ ಅವರ ತತ್ವಗಳನ್ನು ಉಪದೇಶಗಳನ್ನು ಸಂಪೂರ್ಣವಾಗಿ ಅರ್ಥಮಾಡಿಕೊಂಡಿದ್ದೇನೆಂದು ಹೇಳಲಾರೆ. ನಿತ್ಯ ಜೀವನದಲ್ಲಿ ಗಾಂಧೀಯವರ ಉಪದೇಶದಂತೆ ನಡೆದುಕೊಂಡಿದ್ದೇನೆಂದು ಹೇಳುವ ಧೈರ್ಯ ನನಗಿಲ್ಲ ಎಂದು ಕಡಿದಾಳರು ಪ್ರಮಾಣಿಕವಾಗಿ ಹೇಳಿಕೊಂಡಿದ್ದಾರೆ'' (ಮಂಜಪ್ಪ, ಸರ್ವೋದಯ ಮತ್ತು ಸತ್ಯ ಅಹಿಂಸೆ ಸರ್ವೋದಯ, ಗಾಂಧಿಭವನ ಪ್ರಕಟಣೆ, ೧೯೮೧:೮), (ಅನಿತಾ, ೧೯೯೪:೨೧).

ಗಾಂಧೀಜಿಯ ಪ್ರಭಾವದೊಂದಿಗೆ ಕಡಿದಾಳ್‌ರಿಗೆ ಬಿ.ಎ. ಓದುವ ಸಂದರ್ಭದಲ್ಲಿ ರಾಮಕೃಷ್ಣ ಆಶ್ರಮದೊಂದಿಗೆ ಸಂಪರ್ಕ ಬೆಳೆಸಿಕೊಂಡು ಅಲ್ಲಿಯ ಉಪದೇಶ ತತ್ವಚಿಂತನೆಗಳಿಂದ ಪ್ರಭಾವಿತನಾದೆ ಎಂಬುದಾಗಿ ಕಡಿದಾಳ್‌ರ ಆತ್ಮಕಥೆಯಲ್ಲಿ ಬರೆದುಕೊಂಡಿದ್ದಾರೆ. ಈ ಸಂದರ್ಭದಲ್ಲಿ ವಿವೇಕಾನಂದರಂತೆ ದೊಡ್ಡ ಯೋಗಿಯಾಗಿ ಜಡನಿದ್ರೆಯಲ್ಲಿರುವ ಭಾರತವನ್ನು ಎಚ್ಚರಿಸಬೇಕು ಎಂಬ ಹಂಬಲ ಉಂಟಾಯಿತು. ವಿವೇಕಾನಂದರ ತತ್ವದಿಂದ ಪ್ರಭಾವಗೊಂಡು ಯುದ್ಧ ವೀರರಿಗಿಂತ ತಪಸ್ವಿಗಳು ತ್ಯಾಗಿಗಳು ಶ್ರೇಷ್ಠರೆಂಬ ಭಾವುಕತೆ ತನ್ನಲ್ಲಿ ಮುಡಿತು ಎಂದಿದ್ದಾರೆ. ಕಡಿದಾಳ್‌ರು ಜ್ಞಾನವನ್ನು ವೃದ್ಧಿಸಿಕೊಳ್ಳುವ ಸಲುವಾಗಿ ದಿನದ ಸಮಯವನ್ನೆಲ್ಲ ಗ್ರಂಥಾಲಯಗಳಲ್ಲಿ ಕಳೆಯ ತೊಡಗುತ್ತಿದ್ದರು. ಅಲ್ಲಿ ರೂಸೋ, ವಾಲ್ಟೇರ್ ಅವರ ದಾರ್ಶನಿಕ ಕೃತಿಗಳು, ಹೋಮರ್‌ನ ಈಲಿಯಡ್, ಒಡೆಸ್ಸಿ ಮಹಾಕಾವ್ಯಗಳು ಗಿಬ್ಬನ್‌ನ ಕೃತಿಯಾದ ''ಚಕ್ರಾಧಿಪತ್ಯದ ಉನ್ನತಿ ಮತ್ತು ಅವನತಿ'' ಓದಿದರು, ರವೀಂದ್ರನಾಥ ಟ್ಯಾಗೂರ್, ಬರ್ನಾಡ ಷಾ, ಟಾಲ್‌ಸ್ಟಾಯ್‌ರವರ ಗ್ರಂಥಗಳನ್ನು, ಬಂಕಿಮರ ಕಾದಂಬರಿಗಳನ್ನು ಓದಿದ್ದರಿಂದ ಸತತ ಅಭ್ಯಾಸ,

ಚಿಂತನೆಯೊಂದಿಗೆ ಸಾಂಪ್ರದಾಯಿಕ ಆಸ್ತಿಕತೆಯಲ್ಲಿ ನಂಬಿಕೆಗಿಂತ ಕಡಿದಾಳರಲ್ಲಿ ವೈಚಾರಿಕ ಜಾಗೃತಿ ಮೂಡಲು ಸಾಧ್ಯವಾಯಿತು (ಕಡಿದಾಳ್, ೧೯೯೦: ೫೧-೫೨).

ರೂಸೋ, ವಾಲ್ಟೇರ್, ಲೆನಿನ್ ಮುಂತಾದವರ ದಾರ್ಶನಿಕ ಕೃತಿಗಳನ್ನು ಓದುವುದರೊಂದಿಗೆ ಈ ದಾರ್ಶನಿಕರ ತತ್ವಗಳಿಂದ ಪ್ರಭಾವಗೊಂಡು ಶೋಷಣೆಗೆ ಒಳಗಾಗಿದ್ದ ಜನರು ಕ್ರಾಂತಿ ನಡೆಸಿದ್ದನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಅಂತಹ ಕ್ರಾಂತಿಗಳಲ್ಲಿ ಮುಖ್ಯವಾಗಿ ಫ್ರಾನ್ಸ್ ಮತ್ತು ರಷ್ಯಾಕ್ರಾಂತಿಗಳು ನಡೆದು ಅಲ್ಲಿಯ ರೈತರಿಗೆ ಸಮಾಜವಾದ ಮತ್ತು ಸಮತವಾದದ ಮೂಲಕ ಪ್ರಾಮುಖ್ಯತೆ ದೊರೆತಿದ್ದನ್ನು ಗಮನಸಿದ್ದರು. ಈ ತತ್ವಗಳ ಹಿನ್ನೆಲೆಯಲ್ಲಿ ಭೂಮಿಯು ಗೇಣಿ ದೊರಕಿಸುವ ಆಸ್ತಿ ಎಂಬ ಭಾವನೆಯು ಹೋಗಿತ್ತು. ಈ ಕ್ರಾಂತಿಯು ನಡೆದು ರೈತರ ಗುಲಾಮತನ ಮುಕ್ತಿಯಾಗಿ, ಭೂಮಿಯ ಮೇಲಿನ ಎಲ್ಲಾ ಕಾಯಿದೆಗಳನ್ನ ತೆಗೆದು ಹಾಕಲಾಗಿತ್ತು. ಭೂಮಿ ಸರಕಾರದ ಆಸ್ತಿ, ಎಲ್ಲರ ಆಸ್ತಿ ಎಂಬ ಅಂಶವು ಮಹತ್ವಪಡೆದಿತ್ತು. ರೈತರಿಗೆ ರಾಜಕೀಯ ಹಕ್ಕು ದೊರೆಯುವುದರೊಂದಿಗೆ ಜಮೀನ್ದಾರರು ಎಲ್ಲಾ ಸವಲತ್ತುಗಳನ್ನ ಕಳೆದುಕೊಂಡಿದ್ದರು. ರೈತರ ಪರವಾದ ಚಿಂತನೆಯು ಮತ್ತೆ ಮಹಾಯುದ್ಧಗಳ ನಂತರ ಕಳೆದುಕೊಂಡಿತು. ಕಡಿದಾಳ್‌ರು ಇಂತಹ ಪ್ರಾಪಂಚಿಕ ವಿಷಯಗಳೊಂದಿಗೆ ಭಾರತದಲ್ಲಿ ನಡೆಯುತ್ತಿದ್ದ ರೈತರ ಚಳುವಳಿಯ ಬಗ್ಗೆ ಗಮನಹರಿಸಿದ್ದರು. ಭಾರತದ ಔಧ್ (೧೯ನೇ ಶತಮಾನ) ಎಂಬ ಪ್ರಾಂತ್ಯದಲ್ಲಿ ರೈತರನ್ನು ಉಚ್ಚಾಟನೆ ಮಾಡುವ ಕಾನೂನುಗಳ ಪರಿಷ್ಕರಣಕ್ಕಾಗಿ ಕಾನೂನು ಬಾಹಿರವಾಗಿ ಒಕ್ಕಲೆಬ್ಬಿಸುವುದನ್ನು ರದ್ದುಗೊಳಿಸುವುದಕ್ಕಾಗಿ ಬಲವಂತವಾಗಿ ದುಡಿಸಿಕೊಳ್ಳುವ ಪದ್ಧತಿಯ ವಿರುದ್ಧವಾಗಿ ಚಳುವಳಿ ನಡೆದ್ದಿತು ಎಂಬುದಾಗಿ ಕಡಿದಾಳರು ಸ್ವತಃ ಹೇಳಿಕೊಂಡಿದ್ದಾರೆ (ವೆಂಕಪ್ಪಗೌಡ, ೨೦೦೧:೪೮).

ಈ ಚಳುವಳಿಗಳ ಹಿನ್ನೆಲೆಯಲ್ಲಿ ಕಾಂಗ್ರೆಸ್‌ಪಕ್ಷ ಒತ್ತಡ ತಂದು ೧೯೩೭ರ ಹೊತ್ತಿಗೆ ರೈತರಿಗೆ ಮತದಾನದ ಹಕ್ಕನ್ನು ನೀಡಿರುವುದನ್ನು ಕಡಿದಾಳ್‌ರು ಒಬ್ಬ ಕಾಂಗ್ರೆಸ್ ನಾಯಕರಾಗಿ ಗಮನಿಸಿದ್ದರು. ಈ ಹಕ್ಕು ರೈತರಿಗೆ ಉತ್ಸಾಹ ತುಂಬಿತು. ಜಮೀನ್ದಾರರು ಮತಗಳಿಗಾಗಿ ರೈತರೊಂದಿಗೆ ಸೌಹಾರ್ದ ರೀತಿಯಲ್ಲಿ ಇರುತ್ತಿದ್ದರು. ಕಾಂಗ್ರೆಸ್ ಕೂಡ ರೈತರ ಬೇಡಿಕೆಗಳಿಗೆ ಮಾನ್ಯತೆ ನೀಡಿತು. ಹೀಗೆ ಕಾಂಗ್ರೆಸ್ ರೈತರ ವಿಶ್ವಾಸವನ್ನು ಗೆದ್ದುಕೊಂಡಿದ್ದರಿಂದ ಮಲೆನಾಡಿನ ಗ್ರಾಮೀಣ ಪ್ರದೇಶದಲ್ಲಿ ಕಾಂಗ್ರೆಸ್ ಪ್ರಭಾವ ಹೆಚ್ಚಿತು. ಜಮೀನ್ದಾರರು ಮತ್ತು ಸರಕಾರ ತಮ್ಮ ದುಡಿಮೆಯ ಬಹುಭಾಗವನ್ನು ಕಸಿದುಕೊಂಡು ತಮಗೆ ಅನ್ಯಾಯ ಮಾಡುತ್ತಿದ್ದಾರೆಂಬ ಭಾವನೆ ಬೆಳೆಯಿತು. ಇದರಿಂದ ಜನರು ದಂಗೆ ಏಳಲು ಸಿದ್ಧರಾದರು. ಇಂತಹ ಪರಿಸ್ಥಿತಿ ದೇಶ ವ್ಯಾಪಿಯಾಗಿತ್ತು. ಇವುಗಳ ಬಗ್ಗೆ ಕಡಿದಾಳ್‌ರು ಅಧ್ಯಯನ ಮಾಡಿದ್ದರಿಂದಾಗಿ ಅವರಿಗೆ ನಂತರದ ದಿನಗಳಲ್ಲಿ ಭೂಹೋರಾಟಕ್ಕೆ ಪ್ರಚೋದನೆ ಸಿಕ್ಕಿದಂತಾಯಿತು.

ದ್ವಿತೀಯ ಮಹಾಯುದ್ಧ ನಡೆದ ಸಂದರ್ಭದಲ್ಲಿ ದೇಶದಲ್ಲಿ ಆಹಾರದ ಸಮಸ್ಯೆಯುಂಟಾಯಿತು. ಇದರಿಂದಾಗಿ ಸರ್ಕಾರ "ಹೆಚ್ಚು ಬೆಳೆ ಬೆಳೆಯುವ ಯೋಜನೆ" ಕೈಗೊಂಡಿತು. ಈ ಹೊಸ ನೀತಿಯಿಂದಾಗಿ

ಜಮೀನ್ದಾರರು ದುರಾಸೆಯಿಂದ ಸಾಗುವಳಿಗೆ ಹೆಚ್ಚಿನ ಜಮೀನನ್ನು ಆಕ್ರಮಿಸಿಕೊಂಡರು. ಈ ಒಂದು ಯೋಜನೆಯಿಂದ ಲಕ್ಷಾಂತರ ಎಕರೆ ಜಮೀನು ಜಮೀನ್ದಾರರ ಪಾಲಾಯಿತು. ಭೂಮಿಯೆಲ್ಲವು ಉಳ್ಳವರ ಪಾಲಾಯಿತು (ಮಂಜಪ್ಪ, ೧೯೯೦:೧೫೦). ಇದರಿಂದ ರೈತರಿಗೆ ಶೋಷಣೆ ಮಾಡುವಂತಹ ಜಮೀನ್ದಾರರು ಹುಟ್ಟಿಕೊಂಡರು. ಭೂಮಿಯೆಂದರೆ ಗೇಣಿ ದೊರಕಿಸುವ ಆಸ್ತಿಯೆಂದು ತಿಳಿದರು. ಭೂಮಿ ದುಡಿಮೆಯಿಲ್ಲದೆ, ಶ್ರಮವಹಿಸದೆ ತಿನ್ನಬಹುದಾದ ಉತ್ಪಾದನೆಯ ಮೂಲ ಎಂದು ತಿಳಿದರು. ಇದರಿಂದ ಭೂಮಿಯ ಮೇಲೆ ಹೆಚ್ಚಿನ ಹಿಡಿತ ಉಂಟಾಯಿತು. ರೈತನು ಭೂಮಿಯ ಮೇಲಿನ ಸ್ವಾತಂತ್ರ್ಯ ಕಳೆದುಕೊಂಡು ದುಡಿಯಬೇಕಾಯಿತು. ಇಂತಹ ವಿಷಯ ಕಡಿದಾಳ್‌ರ ಕಾಲಘಟ್ಟದಲ್ಲಿ ಕಂಡುಬರುತ್ತಿತ್ತು. ಅಲ್ಲದೆ ಅವರ ಅಧಿಕಾರಾವಧಿಯಲ್ಲಿ ಇನಾಂ ಜಮೀನು ರದ್ಧತಿ ಕಾನೂನು ತರುವುದಕ್ಕೆ ಇದು ಕಾರಣವಾಯಿತು. ಈ ಮೇಲಿನ ಅಂಶಗಳೊಂದಿಗೆ ಮೈಸೂರು ಸಂಸ್ಥಾನದ ಭೂ ವ್ಯವಸ್ಥೆಯು ಕಡಿದಾಳ್‌ರ ಮೇಲೆ ಪ್ರಭಾವ ಬೀರುತ್ತದೆ. ಆಗ ಮೈಸೂರು ಸಂಸ್ಥಾನದಲ್ಲಿ ಕೃಷಿ ಭೂಮಿಯಲ್ಲವು ದೇವಾಲಯಗಳಲ್ಲಿ, ಮಠಗಳಲ್ಲಿ, ಜಹಾಗೀರದಾರರ ವಶದಲ್ಲಿತ್ತು.

ಆಗ ಮೈಸೂರು ಸಂಸ್ಥಾನದಲ್ಲಿನ ದೇವಾಲಯದ ಮಠಗಳ ಜಮೀನಿನ ಅಂಕಿ ಅಂಶವನ್ನು ವೆಂಕಪ್ಪಗೌಡರು ತಿಳಿಸುವುದರೊಂದಿಗೆ ಈ ವ್ಯವಸ್ಥೆ ಕಡಿದಾಳ್‌ರ ಮೇಲೆ ಪ್ರಭಾವ ಬೀರಿದ್ದನ್ನು ತಿಳಿಸುತ್ತಾರೆ. ''ಇನಾಂ ಜಮೀನು ೧ ಲಕ್ಷ ೮೪ ಸಾವಿರ ಎಕರೆ, ಬ್ರಹ್ಮದಾಯ ಜಮೀನು ೫ ಲಕ್ಷ ಎಕರೆ, ವೈಯಕ್ತಿಕ ಜಮೀನು ೩ ಲಕ್ಷ ೩೭ ಸಾವಿರ ಎಕರೆ ಇನಾಂ ಜಮೀನು ೮ ಸಾವಿರ ಎಕರೆ, ಇತರೆ ಇನಾಂತಿ ಜಮೀನು ೯ ಸಾವಿರ ಎಕರೆ, ಗ್ರಾಮ ಸೇವೆಗಾಗಿ ೨ ಸಾವಿರ ಎಕರೆ ಜಮೀನು ಇತ್ತು.'' (ವೆಂಕಪ್ಪಗೌಡ, ೨೦೦೧:೫೦) ಜಮೀನನ್ನು ಪಡೆದ ಮಠಾಧೀಶರು ಮಾಲೀಕರು ಎಲ್ಲರು ಶೋಷಕರನ್ನು ಸೃಷ್ಟಿ ಮಾಡಿದರು. ಸರಕಾರ ಮತ್ತು ಭೂಮಿಯ ಉಳುವವರ ಮಧ್ಯ ಇರುವ ದಲ್ಲಾಳಿ ಮಧ್ಯವರ್ತಿ ನಿರ್ಮೂಲವಾಗಬೇಕು, ಶೋಷಕರನ್ನು ಹೊರಹಾಕಬೇಕು ಎಂದು ಪ್ರಯತ್ನಪಟ್ಟಿರುವುದು ಕಂಡುಬರುತ್ತದೆ. ಜಮೀನ್ದಾರಿ ಪದ್ಧತಿ ಕೊನೆಗಾಣಿಸಬೇಕು. ಗ್ರಾಮೀಣ ಜನರ ಜೀವನವನ್ನು ಶೋಷಣೆ ಮಾಡುತ್ತಿದ್ದ ಈ ಜಮೀನ್ದಾರಿ ಪದ್ಧತಿ ತೊಲಗಿಸಬೇಕೆಂದು ಕಾಂಗ್ರೆಸಿಗರ ಕನಸಾಗಿತು. ಇಂತಹ ಅಂಶಗಳು ಕಡಿದಾಳ್‌ರಿಗೆ ಮತ್ತು ಗಣಪತಿಯಪ್ಪನವರಿಗೆ ರೈತರ ಬಗ್ಗೆ ಕಳಕಳಿ ಉಂಟಾಗಲು ಕಾರಣವಾಗಿತ್ತು ಎಂಬ ಅಂಶವನ್ನು ವೆಂಕಪ್ಪಗೌಡರು ತಿಳಿಸಿದ್ದಾರೆ. (ವೆಂಕಪ್ಪಗೌಡ, ೨೦೦೧:೫೦,೫೧). ಕಡಿದಾಳ್‌ರನ್ನು ಕೌಟುಂಬಿಕ ಪರಿಸರ, ಮಲೆನಾಡಿನ ಸಾಮಾಜಿಕ ಜೀವನ, ವಿದ್ಯಾರ್ಥಿ ಜೀವನ, ವೃತ್ತಿ, ಸಮಕಾಲೀನ ಘಟ್ಟದ ಎಲ್ಲ ಅಂಶಗಳ ಪ್ರಭಾವವು ಒಬ್ಬ ಭೂಹೋರಾಟಗಾರನಾಗಿ ರೂಪಿಸಿತು ಎಂಬ ಅಂಶವು ಇಲ್ಲಿ ಮುಖ್ಯವಾಗುತ್ತದೆ.

## ೨.೩. ಮೈಸೂರ್ ಕಾಂಗ್ರೆಸ್ ಮತ್ತು ಕಡಿದಾಳ್ ಮಂಜಪ್ಪ

ಭೂ ಸಮಸ್ಯೆಗಳನ್ನು ಪರಿಹರಿಸುವುದು ಕೇವಲ ಹೋರಾಟದಿಂದ ಮಾತ್ರ ಸಾಧ್ಯವಿಲ್ಲ ಎಂದು ಕಡಿದಾಳ್‌ರು ನಂಬಿದ್ದರು. ಆ ಸಮಸ್ಯೆಯನ್ನು ಸಂಪೂರ್ಣವಾಗಿ ಬಗೆಹರಿಸಬೇಕಾದರೆ ಅದನ್ನು ಕಾಯಿದೆಗಳ ಮೂಲಕ ಸುಧಾರಿಸಬೇಕು ಎಂಬ ನಂಬಿಕೆಯನ್ನೇ ಇಟ್ಟವರು ಕಡಿದಾಳ್ ಮಂಜಪ್ಪ. ಈ ಕಾರಣದಿಂದಲೇ ವಕೀಲ ವೃತ್ತಿಯ ಜೊತೆಯಲ್ಲಿಯೇ ಕಾಂಗ್ರೆಸ್ ಪಕ್ಷದ ಕಾರ್ಯಕರ್ತರಾದರು. ಕಾಂಗ್ರೆಸ್ ಪಕ್ಷವು ಪ್ರಾರಂಭದಿಂದಲೂ ರಾಜಕೀಯ ಮತ್ತು ಸಾಮಾಜಿಕ ಸುಧಾರಣೆಯ ಮೂಲ ಉದ್ದೇಶವನಿಟ್ಟುಕೊಂಡು ಸ್ಥಾಪಿಸಿದಂತ ಪಕ್ಷವಾಗಿತ್ತು (ಮೂರ್ತಿ, ೨೦೦೬:೨,೩). ಈ ಹಿನ್ನೆಲೆಯಲ್ಲಿ ನೋಡಿದಾಗ ಕಡಿದಾಳ್‌ರು ಕಾಂಗ್ರೆಸ್ ಪಕ್ಷಕ್ಕೆ ಸೇರಿಕೊಂಡು ಸರ್ಕಾರದ ಮೂಲಕ ಸುಧಾರಣೆಯನ್ನು ತಂದಿರುವುದು ಗುರುತಿಸಬಹುದು. ರಾಷ್ಟ್ರ ನಾಯಕರು ಕಾಂಗ್ರೆಸ್ ಪಕ್ಷವನ್ನು ವೇದಿಕೆಯಾಗಿ ಬಳಸಿಕೊಂಡು ರಾಜಕೀಯದಲ್ಲಿ ಸುಧಾರಣೆ ತಂದಿದ್ದು, ಬ್ರಿಟೀಷರಿಂದ ದಾಸ್ಯ ವಿಮೋಚನೆ ಮಾಡಿರುವುದು ಕಾಂಗ್ರೆಸ್ ಪಕ್ಷದ ಮಹತ್ವದ ಸಾಧನೆಯಾಗಿದೆ. ಸಾಮಾಜಿಕ ಒಳತಿಗಾಗಿ ಅನೇಕ ರಚನಾತ್ಮಕ ಕಾರ್ಯಕ್ರಮಗಳನ್ನು ಹಾಕಿಕೊಂಡು ರಾಮರಾಜ್ಯದ ಕನಸನ್ನು ಕಂಡ ಮಹಾತ್ಮ ಗಾಂಧೀಜಿಯವರು ಕಾಂಗ್ರೇಸ್ ಪಕ್ಷವನ್ನು ಬಲಪಡಿಸಿರುವುದನ್ನು ನಾವು ಗಮನಿಸಬಹುದು. ದೇಶದ್ಯಾಂತ ತನ್ನ ತತ್ವಚಿಂತನೆಗಳಿಂದ ಜನರ ಮೇಲೆ ಪ್ರಭಾವ ಬೀರಿ ಜನರನ್ನು ಒಗ್ಗೂಡುವಂತೆ ಮಾಡಿದರು. ಕಡಿದಾಳ್‌ರು ಕೂಡ ಗಾಂಧಿವಾದವನ್ನು ಮೈಗೂಡಿಸಿಕೊಂಡು ಕಾಂಗ್ರೆಸ್ ಪಕ್ಷದಲ್ಲಿದ್ದುಕೊಂಡೆ ಭೂಹೋರಾಟವನ್ನು ಪ್ರಾರಂಭಿಸಿರುವುದು ಗಮನಾರ್ಹವಾಗಿದೆ (ಜನಹೋರಾಟ ದಿನಪತ್ರಿಕೆ, ೨೨.೧೨.೨೦೦೧:೪).

ವಕೀಲ ವೃತ್ತಿಯ ಪ್ರಸಿದ್ಧತೆಯಿಂದ ಕಡಿದಾಳ್‌ರು ಶಿವಮೊಗ್ಗ ಜಿಲ್ಲೆಯಲ್ಲಿ ಪ್ರಮುಖ ವ್ಯಕ್ತಿಯಾಗಿ ಕಂಡುಬಂದರು. ೧೯೩೬ರಲ್ಲಿ ಜಿಲ್ಲಾ ಕಾಂಗ್ರೆಸ್ ಸಮಿತಿಯ ಸದಸ್ಯರಾದರು. ನಂತರ ೧೯೩೭ರಲ್ಲಿ ಶಿವಮೊಗ್ಗ ಜಿಲ್ಲಾ ಕಾಂಗ್ರೆಸಿನ ಮೊದಲ ಕಾರ್ಯದರ್ಶಿಯಾಗಿ ನೇಮಕವಾದರು. ಇದೇ ಸಂದರ್ಭದಲ್ಲಿ ಸ್ವತಂತ್ರ ಹೋರಾಟಗಾರರಾದಂತಹ ಡಾ.ಪಾರ್ಥನಾರಾಯಣರೊಂದಿಗೆ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯ ಮತ್ತು ಎಸ್.ಮಲ್ಯರವರು ಪರಿಚಯವಾಗಿದ್ದರು (ಕಡಿದಾಳ್ ೧೯೯೦: ೭೦). ಜಿಲ್ಲಾ ಕಾಂಗ್ರೆಸ್ ಕಾರ್ಯದರ್ಶಿಯಾಗಿದ್ದರಿಂದ ಇವರ ಮನೆಗೆ ಕಾಂಗ್ರೆಸಿನ ಪ್ರಮುಖ ವ್ಯಕ್ತಿಗಳು ಬರುತ್ತಿದ್ದು ಹಲವಾರು ವಿಷಯಗಳನ್ನು ಚರ್ಚಿಸುತ್ತಿದ್ದರು. ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಸದಸ್ಯರಾದ ಹಳ್ಳಿಕೇರಿ ಗುದ್ದಪ್ಪನವರು, ಸಂಯುಕ್ತ ಕರ್ನಾಟಕ ದಿನಪತ್ರಿಕೆಯ ಸಂಪಾದಕರಾಗಿದ್ದ ಶ್ರೀ ಹನುಮಂತರಾವ ಮೊಹರೆಯವರು ಹಾಗೂ ಭಾರತ ಸೇವಾದಳದ ಸಂಸ್ಥಾಪಕರಾಗಿದ್ದ ಡಾಕ್ಟರ್ ಹರ್ಡೇಕರ್ ಮಂಜಪ್ಪ, ಉತ್ತರ ಕರ್ನಾಟಕ ಸ್ವಾತಂತ್ರ್ಯ ಹೋರಾಟಗಾರರಾದ ಸರ್ದಾರ ವೆಂಕಟರಾಮಯ್ಯರವರ ಜೊತೆ ಆಗಾಗ ಹಲವಾರು ವಿಷಯಗಳನ್ನು ಕುರಿತು ಚರ್ಚಿಸುತ್ತಿದ್ದರು. ಹಾಗೆಯೇ ರಾಜ್ಯಪಾಲರಾದಂತಹ ಶ್ರೀ

ಆರ್.ಆರ್.ದಿವಾಕರ್ ಅವರು ಕರ್ನಾಟಕ ಕಾಂಗ್ರೆಸ್ ಸಮಿತಿಯ ಸದಸ್ಯರಾದ ಕೃಷ್ಣಮೂರ್ತಿ, ಸಿದ್ದಪ್ಪ ಇವರೆಲ್ಲರ ಪರಿಚಯವಾದದ್ದು ಸಕ್ರಿಯ ರಾಜಕಾರಣದಲ್ಲಿ ಧುಮುಕಲು ಸಹಕಾರಿಯಾಗಿತ್ತು.

ಕಡಿದಾಳ್‌ರು ಕಾಂಗ್ರೆಸ್ ಪಕ್ಷದ ಸದಸ್ಯರಾದ ಕಾಲದಲ್ಲಿ ಕಾಂಗ್ರೆಸ್ ಸಂಸ್ಥೆಯೊಂದೇ ಅಲ್ಲದೇ ಇತರ ರಾಜಕೀಯ ಪಕ್ಷಗಳೂ ಇದ್ದವು. ಆದರೆ ಯಾವುದಕ್ಕೂ ಭದ್ರನೆಲೆಯಿರಲಿಲ್ಲ. ಸರ್ಕಾರ ಅನುಸರಿಸುತ್ತಿದ್ದ ವಿಭಜಿಸಿ ಆಳುವ ನೀತಿ, ಇನ್ನೊಂದು ಕಡೆ ಅಖಿಲ ಭಾರತ ಕಾಂಗ್ರೆಸ್ ಸಂಸ್ಥೆ ಮೈಸೂರು ಕಾಂಗ್ರೆಸಿಗೆ ನೆರವು ನೀಡುತ್ತಿರಲಿಲ್ಲ. ಮೈಸೂರು ಕಾಂಗ್ರೆಸ್ ಸಂಸ್ಥೆಯ ಅಸ್ತಿತ್ವ ಉಳಿಯಬೇಕಾದರೆ ವಿರೋಧ ಪಕ್ಷಗಳಾಗಿದ್ದ ಪ್ರಜಾಪಕ್ಷಗಳನ್ನು[೪] ಮತ್ತು ಪ್ರಜಾಮಿತ್ರಮಂಡಳಿ[೫]ಯನ್ನು ಮೈಸೂರು ಕಾಂಗ್ರೆಸಿನಲ್ಲಿ ಸೇರಿಸುವುದು ಅಗತ್ಯವೆಂದು ಮೈಸೂರು ಕಾಂಗ್ರೆಸ್ ನಾಯಕರು ಭಾವಿಸಿದರು. ಇದಕ್ಕಾಗಿ ಮಹಾತ್ಮಗಾಂಧಿಯನ್ನು ಭೇಟಿ ಮಾಡಲು ವಾರ್ಧಾಕ್ಕೆ ಹೋಗಿ ಅವರ ಸಲಹೆ, ಆಶೀರ್ವಾದಗಳನ್ನು ಪಡೆದು ಮೈಸೂರು ಕಾಂಗ್ರೆಸ್‌ಗೆ ಅಖಿಲ ಭಾರತ ಕಾಂಗ್ರೆಸ್ ಬೆಂಬಲ ದೊರಕಿಸಿಕೊಡುವ ಭರವಸೆಯನ್ನು ಪಡೆದು ಹಿಂದುರುಗಿದರು. ಪ್ರಜಾಮಿತ್ರಮಂಡಳಿ, ಪ್ರಜಾಪಕ್ಷ ಮಂಡಳಿಯನ್ನು ರದ್ದುಪಡಿಸಿ ಇದರಲ್ಲಿರುವ ಸದಸ್ಯರು ಕಾಂಗ್ರೆಸ್‌ಗೆ ಸೇರುವಂತೆ ಹಾಗೂ ಜವಾಬ್ದಾರಿ ಸರ್ಕಾರಕ್ಕಾಗಿ ಹೋರಾಟ ನಡೆಸುವಂತೆ ತಿರ್ಮಾನ ಕೈಗೊಳ್ಳಲಾಯಿತು. ಈ ರೀತಿ ಮೈಸೂರು ಕಾಂಗ್ರೆಸ್‌ನ ಈ ಮಹತ್ವದ ಕಾರ್ಯದಲ್ಲಿ ಕಡಿದಾಳ್ ಪಾತ್ರ ಕೂಡ ಇತ್ತು (ಕಡಿದಾಳ್, ೧೯೯೦:೭೪, ದೇಜಗೌ, ಕಮಲೇಶ್, ೨೦೦೩:೬).

೧೯೩೮ನೇ ಇಸವಿ ಏಪ್ರಿಲ್ ತಿಂಗಳಿನಲ್ಲಿ ಕಾಂಗ್ರೆಸ್ ಪ್ರಮುಖರ ಹಾಗೂ ಪ್ರಜಾಪಕ್ಷದ ಬೃಹತ್ ಸಭೆ ಮದ್ದೂರು ತಾಲೂಕಿನ ಶೀವಪುರದಲ್ಲಿ ಸಮಾವೇಶಗೊಂಡಿತು.[೬] ಈ ಸಭೆಯಲ್ಲಿ ಕಡಿದಾಳ್‌ರು ಭಾಗವಹಿಸಿದರು. ಸಮಾವೇಶದಲ್ಲಿ ಮೂರು ದಿನಗಳ ಕಾಲ ಧ್ವಜ ಸತ್ಯಾಗ್ರಹ ನಡೆದು ಹಲವು ಮುಖಂಡರ ದಸ್ತಗಿರಿಯಾಯಿತು. ಆ ಅಧಿವೇಶನ ಮಹಾರಾಜರ ನೇತೃತ್ವದಲ್ಲಿ ಮೈಸೂರಿನಲ್ಲಿ ಜವಾಬ್ದಾರಿಯುತ ಸರ್ಕಾರದ ಸ್ಥಾಪನೆಗಾಗಿ ಮೈಸೂರು ಕಾಂಗ್ರೆಸ್ ಹೋರಾಟ ನಡೆಸಬೇಕೆಂದು ನಿರ್ಣಯವನ್ನು ಕೈಗೊಂಡಿತ್ತು. ಆಗ ಶಿವಮೊಗ್ಗ ಜಿಲ್ಲಾ ಕಾಂಗ್ರೆಸ್ ಮೈಸೂರು ಕಾಂಗ್ರೆಸ್ ಅಂಗ ಸಂಸ್ಥೆಯಾಗಿ ಕಾರ್ಯನಿರ್ವಹಿಸುತ್ತಿತ್ತು. ಕಡಿದಾಳ್‌ರು ಕೂಡ ಜವಾಬ್ದಾರಿ ಸರ್ಕಾರಕ್ಕೆ ಬೆಂಬಲ ಸೂಚಿಸಿದ್ದರು. ೧೯೩೯ರಲ್ಲಿ ಮೈಸೂರು ಕಾಂಗ್ರೆಸ್ ಅರಣ್ಯ ಸತ್ಯಾಗ್ರಹವನ್ನು ಆರಂಭಿಸಿತು. ರಾಜ್ಯದ ಕೆಲವು ಕಾಂಗ್ರೆಸ್ ನಾಯಕರು ಅರಣ್ಯ ಸತ್ಯಾಗ್ರಹದಲ್ಲಿ ಭಾಗವಹಿಸಿ ಒಬ್ಬೊಬ್ಬರಾಗಿ ಸೆರೆಮನೆ ಸೇರುತ್ತಿದ್ದರು. ಸತ್ಯಾಗ್ರಹಿಗಳಿಗೆ ಸೆರೆಮನೆಯಲ್ಲಿ ಹಾಗೂ ಹೊರಗಡೆ ಪೋಲೀಸರು ಚಿತ್ರಹಿಂಸೆ ಕೊಡುತ್ತಿದ್ದರು. ಪೋಲೀಸರ ದುರ್ವರ್ತನೆ ಮತ್ತು ಸರ್ಕಾರದ ಕ್ರೂರ ದಬ್ಬಾಳಿಕೆ ವಿಚಾರದಲ್ಲಿ ಸೆರೆಮನೆಯ ಹೊರಗಡೆಯಿದ್ದ ಕಾಂಗ್ರೆಸ್ ಮುಖಂಡರು ಮಹಾತ್ಮ ಗಾಂಧೀಜಿಯವರಿಗೆ ದೂರನ್ನು ಸಲ್ಲಿಸಿದ್ದರು. ಗಾಂಧೀಜಿಯವರು ಸತ್ಯಾಂಶ ತಿಳಿದು ವರದಿ ಒಪ್ಪಿಸಲು ಗಾಂಧೀಜಿಯವರ

ಆಪ್ತಕಾರ್ಯದರ್ಶಿಯಾದ ಮಹದೇವ ದೇಸಾಯಿಯವರನ್ನು ಕಳುಹಿಸಿದರು. ದೇಸಾಯಿಯವರು (೧೯೩೪) ಶಿವಮೊಗ್ಗಕ್ಕೆ ಬಂದಂತಹ ಸಮಯದಲ್ಲಿ ಕಡಿದಾಳ್‌ರು ಎಲ್ಲ ವಿಷಯಗಳನ್ನು ದೇಸಾಯಿಯವರಿಗೆ ತಿಳಿಸಿದರು. ಇದು ಕಡಿದಾಳ್ ಮತ್ತು ದೇಸಾಯಿಯವರ ಪ್ರಥಮ ಭೇಟಿಯಾಗಿದೆ (ಕಡಿದಾಳ್, ೧೯೯೦:೮೦).

ಮೈಸೂರು ಕಾಂಗ್ರೆಸ್‌ನ ಆರ್ಥಿಕ ಸ್ಥಿತಿ ಅಷ್ಟೊಂದು ಉತ್ತಮವಿಲ್ಲದ ಸಂದರ್ಭದಲ್ಲಿ ಅದರ ಅಧಿವೇಶನಕ್ಕೆ ಮಲೆನಾಡಿನ ಭಾಗದಲ್ಲ ಪ್ರವಾಸ ಮಾಡಿ ಹಣವನ್ನು ಸಂಗ್ರಹಿಸಿ ಮೈಸೂರು ಕಾಂಗ್ರೆಸ್‌ಗೆ ನೀಡಿದ್ದರು. ಮೈಸೂರು ಕಾಂಗ್ರೆಸ್ ಅಸ್ತಿತ್ವಕ್ಕೆ ಬಂದ ನಂತರ ಕಾಂಗ್ರೆಸಿಗೆ ಸೇರಿದ್ದ ಶ್ರೀ ಎಸ್.ನಿಜಲಿಂಗಪ್ಪ ಮತ್ತು ಸಿವಿಲ್ ಲಿಬರ್ಟಿಸ್ ಯೂನಿಯನ್ ಅಧ್ಯಕ್ಷ ಎಸ್.ರಾಜು ಅವರು ಮೈಸೂರು ಕಾಂಗ್ರೆಸ್ ಮಹತ್ವ ತಿಳಿಸಲು ಅವರಿಬ್ಬರ ಭಾಷಣವನ್ನು ಏರ್ಪಡಿಸಲಾಗಿತ್ತು. ಶಿವಮೊಗ್ಗ ರಾಮಣ್ಣ ಶೆಷ್ಠಿ ಪಾರ್ಕಿನಲ್ಲಿ ಬಹಿರಂಗ ಸಭೆಯನ್ನು ೧೯೩೯ರಲ್ಲಿ ಏರ್ಪಡಿಸಿದ್ದರು. ಕಡಿದಾಳ್‌ರು ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾಗಿದ್ದರಿಂದ ಆ ಸಭೆಯ ಅಧ್ಯಕ್ಷತೆಯನ್ನು ವಹಿಸಿಕೊಂಡಿದ್ದರು. ಈ ಸಂದರ್ಭದಲ್ಲಿ ನಿಜಲಿಂಗಪ್ಪನವರ ಪರಿಚಯವಾಗಿ ಆಪ್ತರಾದರು. ನಂತರದ ದಿನಗಳಲ್ಲಿ ರಾಜಕಾರಣವೇ ಅವರ ಮುಖ್ಯ ಕಸುಬಾಯ್ತು. ವಕೀಲ ವೃತ್ತಿಯನ್ನು ಉಪಕಸುಬನ್ನಾಗಿ ಮಾಡಿಕೊಂಡರು. ಕಾಂಗ್ರೆಸ್‌ನ ಮೂಲಕವೇ ಉನ್ನತ ಹುದ್ದೆಗಳನ್ನು ಆಲಂಕರಿಸುವಂತಾಯಿತು.

೧೯೪೧ರಲ್ಲಿ ಕಡಿದಾಳ್ ಮಂಜಪ್ಪನವರು ಶಿವಮೊಗ್ಗದ ಪ್ರಬಾವಿ ರಾಜಕಾರಣಿಯಾದ ಹೆಚ್. ಸಿದ್ಧಯ್ಯನವರ ಒತ್ತಾಯಕ್ಕೆ ಮಣಿದು ಪ್ರಜಾಪ್ರತಿನಿಧಿ ಸಭೆಗೆ ಕಾಂಗ್ರೆಸಿನಿಂದ ಚುನಾವಣೆಗೆ ನಿಂತರು. ತೀರ್ಥಹಳ್ಳಿ ಕ್ಷೇತ್ರದಿಂದ ಸ್ಪರ್ಧಿಸಿ ಗೆದ್ದರು. ಅಂದಿನ ಕಾಂಗ್ರೆಸ್ ಪಕ್ಷದ ಸದಸ್ಯರೆಂದರೆ ಕೆ.ಸಿ.ರೆಡ್ಡಿ, ಕೆಂಗಲ್ ಹನುಮಂತಯ್ಯ, ಡಿ.ದೇವರಾಜ ಅರಸು, ವಿ.ವೆಂಕಟಪ್ಪ ಮತ್ತು ಎಂ.ಎನ್.ಜೋಯಿಸ್, ಎಸ್. ಎಂ.ಎಸ್.ರಜ್ಜಿ, ಭೂಪಾಳಂ ಚಂದ್ರಶೇಖರಯ್ಯ, ರಾವಬಹದ್ದೂರ ರಾಮಸ್ವಾಮಿ ಮತ್ತು ಶ್ರೀಮತಿ ಸಾಕಮ್ಮ ಅವರು ಪ್ರಜಾಪಕ್ಷದ ಸದಸ್ಯರಾಗಿದ್ದರು. ಇವರೆಲ್ಲರೊಂದಿಗೆ ಕಡಿದಾಳ್‌ರು ಅಭಿವೃದ್ಧಿ ಕಾರ್ಯಗಳನ್ನು ಮಾಡಲು ಯೋಚಿಸಿದ್ದರು. ೧೯೪೨ರಲ್ಲಿ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿ ಸೆರೆಮನೆ ವಾಸವನ್ನು ಅನುಭವಿಸಿದರು. ಪ್ರಜಾಪ್ರತಿನಿಧಿ ಸಭೆ ನಡೆಯುವ ಸಂದರ್ಭದಲ್ಲಿ ಸಭೆಯಲ್ಲಿ ಸರ್ಕಾರದ ಧ್ಯೇಯ ಧೋರಣೆಗಳನ್ನು ತೀವ್ರವಾಗಿ ಖಂಡಿಸುತ್ತಿದ್ದರು. ಇದೇ ಸಂದರ್ಭದಲ್ಲಿ ಆಡಳಿತದಲ್ಲಿರುವ ಭ್ರಷ್ಟಾಚಾರವನ್ನು ಹೋಗಲಾಡಿಸುವ ಸಲುವಾಗಿ ಮತ್ತು ಆಡಳಿತದಲ್ಲಿ ದಕ್ಷತೆಯನ್ನು ಹೆಚ್ಚಿಸುವ ಸಲುವಾಗಿ ನಿರ್ಣಯಗಳನ್ನು ಮಂಡಿಸಿದ್ದು ಆ ನಿರ್ಣಯಕ್ಕೆ ಪ್ರಧಾನ ಸ್ಥಾನ ಸಿಕ್ಕಿತ್ತು. ಭ್ರಷ್ಟಾಚಾರ, ಲಂಚಗುಳಿತನವನ್ನು ಪ್ರಾರಂಭದಿಂದಲೇ ವಿರೋಧಿಸುತ್ತಿದ್ದರು. ಇದರಿಂದ ಇವರ ರಾಜಕೀಯ ನಿಷ್ಪತೆಯನ್ನು ತಿಳಿಯಬಹುದು. ಪ್ರಜಾಪ್ರತಿನಿಧಿ ಸಭೆಯ ಅವಧಿ ಮುಗಿದ ನಂತರ ಶಿವಮೊಗ್ಗ ಜಿಲ್ಲೆಯಿಂದ

ನ್ಯಾಯವಿಧಾಯಕ ಸಭೆಗೆ ಸ್ಪರ್ಧಿಸಿದರು. ಇದರಲ್ಲಿ ಅವಿರೋಧವಾಗಿ ಆಯ್ಕೆಯಾದರು. ನ್ಯಾಯ ವಿಧಾಯಕ ಸಭೆಯಲ್ಲೂ ಕೂಡ ಹಲವು ಮಹತ್ವದ ಮಸೂದೆಗಳನ್ನು ಮಂಡಿಸಿದ್ದರು. ವಿದ್ಯಾರ್ಥಿಗಳ ಆಯ್ಕೆ ಸಮಿತಿಯಲ್ಲಿ ರ್‍ಯಾಂಕ್ ವಿಜೇತರಿಗೆ ಕೆಲವು ಸ್ಥಾನಗಳನ್ನು ಮೀಸಲಾಗಿಡಬೇಕೆಂದು ಮಂಡಿಸಿದರೂ ಕಾಂಗ್ರೆಸ್‌ನ ಕೆಲವು ಪ್ರಮುಖರು ಇದನ್ನು ಕಾರ್ಯರೂಪಕ್ಕೆ ತರಲು ಬಿಡುತ್ತಿರಲಿಲ್ಲ (ಕಡಿದಾಳ್, ೧೯೯೦:೧೧೭-೧೧೮).

ಕಡಿದಾಳ್‌ರು ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದುಕೊಂಡು ೧೯೪೭ ಆಗಸ್ಟ್ ೧೫ರಿಂದ ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದಾಗ ಕಡಿದಾಳ್‌ರ ಅಧ್ಯಕ್ಷತೆಯಲ್ಲಿ ಶಿವಮೊಗ್ಗದಲ್ಲಿ ಒಂದು ಸಭೆಯನ್ನು ಏರ್ಪಡಿಸಿದ್ದು, ಅಧ್ಯಕ್ಷ ಭಾಷಣದಲ್ಲಿ "ಭಾರತವು ಕೆಲವೇ ವರ್ಷಗಳಲ್ಲಿ ಸಂಪತ್ತು ಸಮೃದ್ಧಿಯಿಂದ ಕೂಡಿದ ರಾಷ್ಟ್ರವಾಗುತ್ತದೆ. ಗಾಂಧೀಜಿಯ ತತ್ವಗಳಿಂದ ಸ್ವಾತಂತ್ರ್ಯ ಪಡೆದಿದ್ದು, ಇಡೀ ಜಗತ್ತಿನಲ್ಲಿಯೇ ಮಾದರಿ ರಾಷ್ಟ್ರವಾಗುತ್ತದೆಂದು ಹೇಳಿದ್ದರು. ಆದರೆ ಕೊನೆಯ ಕಾಲದಲ್ಲಿ ತಾನು ಕಂಡ ಕನಸು ನನಸಾಗಲಿಲ್ಲ. ಭಾರತೀಯರು ಅಪ್ರಾಮಾಣಿಕರೂ, ಕ್ರೂರಿಗಳು, ಸ್ವಾರ್ಥ ಸಾಧಕರೂ" ಎಂದು ವ್ಯಥೆಪಟ್ಟಿದ್ದರು (ಸಾಪ್ತಾಹಿಕ ಪುರವಣಿ, ೮.೦೭.೨೦೦೧:೧).

ಮುಂದೆ ನ್ಯಾಯವಿಧೇಯಕ ಸಭೆಯಲ್ಲಿ ಇದ್ದುಕೊಂಡೇ ಗೇಣಿದಾರರ ಪರವಾಗಿ ಒಂದು ನಿರ್ಣಯವನ್ನು ಕಡಿದಾಳ್‌ರು ಕೈಗೊಂಡರು. ಹುಟ್ಟಿನಿಂದಲೇ ಗೇಣಿದಾರರ ಕುಟುಂಬದಿಂದ ಬಂದ ಕಡಿದಾಳ್‌ರು ಗೇಣಿದಾರರ ಸಂಘವನ್ನು ಸ್ಥಾಪಿಸುತ್ತಾರೆ. ಮಲೆನಾಡ ಭಾಗದಲ್ಲಿ ಮೊದಲ ಬಾರಿಗೆ ಗೇಣಿದಾರರನ್ನು ಸಂಘಟಿಸಿದವರು (ಹೆಚ್ಚಿನ ವಿವರ ೩ನೇ ಅಧ್ಯಾಯ ಒಳಗೊಂಡಿದೆ). ಹಾಗೂ ಗೇಣಿದಾರರಿಗೆ ತಮ್ಮ ಹಕ್ಕು ಸ್ವಾತಂತ್ರ್ಯದ ಬಗ್ಗೆ ತಿಳಿಸಿಕೊಟ್ಟರು. ಹಾಗೆಯೇ ಸಾಗರದಲ್ಲಿ 'ರೈತ ಸಂಘ'ವನ್ನು ಸ್ಥಾಪಿಸಲಾಗಿದ್ದು (ಮೂರನೇ ಅಧ್ಯಾಯದಲ್ಲಿ ಮುಂದುವರಿಸಲಾಗಿದೆ), ಇದು ಮುಂದೆ ಸ್ವಾತಂತ್ರ್ಯದ ನಂತರದ ಭೂಹೋರಾಟಕ್ಕೆ ನಾಂದಿಯಾಗಿ, ಕರ್ನಾಟಕದಲ್ಲಿ ಭೂಸುಧಾರಣೆಯನ್ನು ತರಲು ಸಹಕಾರಿಯಾಯಿತು (ನಾಲ್ಕನೇ ಅಧ್ಯಾಯದಲ್ಲಿ ಮುಂದುವರಿಸಲಾಗಿದೆ). ಕಡಿದಾಳ್‌ರು ಭೂಸಮಸ್ಯೆಯನ್ನು ಕುರಿತಂತೆ ನಿರ್ಣಯ ತೆಗೆದುಕೊಂಡಿರುವುದು ಒಂದು ಮಹತ್ವದ ವಿಚಾರವಾಗಿದೆ. ಏಕೆಂದರೆ ಈ ಸುಧಾರಣೆ ತಂದ ಸಮಯದಲ್ಲಿ ಅಲ್ಲಿ ಕಾಂಗ್ರೆಸಿಗರೆಲ್ಲ ಭೂಮಾಲೀಕರೇ ಆಗಿದ್ದರು. ಅವರೆಲ್ಲರು ತಮ್ಮ ಸ್ವಾರ್ಥಪರವಾಗಿ ಚಿಂತಿಸುತ್ತಿದ್ದರು. ಆದರೆ ಕಡಿದಾಳ್ ಮಂಜಪ್ಪನವರು ಕಾಂಗ್ರೆಸ್ ಪಕ್ಷದ ಮೂಲಕ ರಾಜಕೀಯ ರಂಗಕ್ಕೆ ಇಳಿದಿದ್ದು ತನ್ನ ಸಮಾಜದ ಹಿತಕ್ಕಾಗಿ ಹಾಗೂ ರೈತರ ಕಷ್ಟ, ಸುಖಗಳಲ್ಲಿ ಎಲ್ಲದರಲ್ಲಿ ಭಾಗಿಯಾಗುವುದು ಮುಖ್ಯ ಉದ್ದೇಶವಾಗಿತ್ತು. ಹಾಗೂ ಭೂಮಾಲೀಕರ ದೌರ್ಜನ್ಯದಿಂದ ಅತಂತ್ರವಾಗಿದ್ದ ರೈತರ ಸಂಘಟನೆಯಲ್ಲಿ ತೊಡಗಿ ಸರ್ಕಾರದ ಮೂಲಕ ನ್ಯಾಯ ದೊರಕಿಸಿ ಕೊಡುವುದೇ ಅವರ ಮುಖ್ಯ ಉದ್ದೇಶವಾಗಿತ್ತು (ಕವಂಟೆ, ೧೯೯೯:೧೨,೧೩).

ಕಾಗೋಡು ಚಳುವಳಿ ನಡೆಯುತ್ತಿದ್ದ ಸಂದರ್ಭದಲ್ಲಿಯೇ ಮೈಸೂರು ಸರ್ಕಾರದ ಮೇಲೆ ಪ್ರಬಲವಾದ ಒತ್ತಾಯ ತಂದರು. ೧೯೫೭ರ ಸಾರ್ವತ್ರಿಕ ಚುನಾವಣೆಯಲ್ಲಿ ಕಡಿದಾಳ್‌ರು ತೀರ್ಥಹಳ್ಳಿಯಲ್ಲಿ ಸ್ಪರ್ಧಿಸಿದಾಗ ಅವರ ಪ್ರತಿಸ್ಪರ್ಧಿಯಾಗಿ ಆಗರ್ಭ ಶ್ರೀಮಂತರಾಗಿದ್ದ ಶ್ರೀರಾಮಕೃಷ್ಣರಾಯರು ಸ್ಪರ್ಧಿಸುತ್ತಾರೆ. ಅವರ ಸ್ಪರ್ಧೆಗೆ ಮುಖ್ಯ ಕಾರಣವೆಂದರೆ ಬೊಂಬಾಯಿ ಮಾದರಿ ಗೇಣಿಶಾಸನವನ್ನು ತರಲು ಕಡಿದಾಳ್‌ರು ಪ್ರಯತ್ನಪಟ್ಟದ್ದೆ ಆಗಿತ್ತು. ಕಡಿದಾಳ್‌ರ ವಿರುದ್ಧವಾಗಿ ಭೂಮಾಲೀಕರೆಲ್ಲ ಸೇರಿ ಶ್ರೀರಾಮಕೃಷ್ಣರಾಯರಿಗೆ ಬೆಂಬಲ ಸೂಚಿಸಿದರು ಮತ್ತು ಕಡಿದಾಳ್‌ರನ್ನು ಬ್ರಾಹ್ಮಣರ ವಿರೋಧಿಯೆಂದು ಪ್ರಚಾರ ಮಾಡಿದರು. ಈ ಎಲ್ಲ ವಿರೋಧಗಳನ್ನು ಮೀರಿ ಕಡಿದಾಳ್‌ರನ್ನು ಗೇಣಿದಾರರು, ದಲಿತರು ಮತ್ತು ಕೃಷಿ ಕಾರ್ಮಿಕರು ಬಹುಮತದಿಂದ ಗೆಲ್ಲಿಸಿರುವುದು ಮಹತ್ವದೆನಿಸುತ್ತದೆ. ಕಾಂಗ್ರೆಸ್ ಸರ್ಕಾರದ ನೇತೃತ್ವದಲ್ಲಿ ಮುಖ್ಯಮಂತ್ರಿಯಾದ ಕೆಂಗಲ್ ಹನುಮಂತಯ್ಯನವರ ಸಚಿವ ಸಂಪುಟದಲ್ಲಿ ಕಡಿದಾಳ್‌ರು ಕಂದಾಯ ಮಂತ್ರಿಯಾದರು. ಇಲ್ಲಿಯೂ ಕೂಡ ಅವರು ರೈತರಿಗೆ ಅನುಕೂಲವಾಗುವಂತೆ ಶಾಸನಗಳನ್ನು ರೂಪಿಸಿದರು. ಕಂದಾಯ, ನೀರಾವರಿ, ಕ್ಷಾಮ ನಿವಾರಣೆ, ಲಂಚ ನಿರೋಧ, ನೌಕರರ ನೇಮಕ, ಮುಜರಾಯಿ, ಸ್ಟ್ಯಾಂಪ್ ಮತ್ತು ರಿಜಿಸ್ಟ್ರೇಷನ್ ಈ ಎಲ್ಲ ಖಾತೆಗಳನ್ನು ಅವರು ಸಮರ್ಥವಾಗಿ ನಿರ್ವಹಿಸಿದರು. ಇದೇ ಅವಧಿಯಲ್ಲಿ ರಾಜ್ಯಕ್ಕೆ ಭೀಕರವಾದ ಕ್ಷಾಮ ಬಂದಿತು. ಕ್ಷಾಮ ನಿವಾರಣೆಗೆ ಬಹಳಷ್ಟು ಕ್ರಮ ಕೈಗೊಂಡರೂ ಕಾಂಗ್ರೆಸಿಗರೇ ಇವರ ವಿರುದ್ಧ ಆಪಾದನೆ ಹೊರಿಸಿದರು. ಪತ್ರಿಕೆಯ ಹೇಳಿಕೆಯನ್ನು ಕೂಡ ಇವರ ವಿರುದ್ಧ ಹೊರಡಿಸಿದ್ದರು. ಕೋಲಾರ ಜಿಲ್ಲೆಯಲ್ಲಿ ಅತಿಯಾದ ಕ್ಷಾಮದ ಸಮಸ್ಯೆಯನ್ನು ಎದುರಿಸುತ್ತಿದ್ದ ಸಮಯದಲ್ಲಿ ಯಾರಿಗೂ ಗೊತ್ತಾಗದಂತೆ ಅಜ್ಞಾತವಾಗಿ ಕಡಿದಾಳ್‌ರು ಇಡೀ ಜಿಲ್ಲೆಯಲ್ಲಿ ಪ್ರವಾಸ ಕೈಗೊಂಡಿದ್ದು ಮಹತ್ವದ್ದಾಗಿದೆ.

ಕಡಿದಾಳ್ ಅವರು ಕಂದಾಯ ಮತ್ತು ನೀರಾವರಿ ಮಂತ್ರಿಯಾದ ಸಮಯದಲ್ಲಿ ಹಲವಾರು ಮಹತ್ತರವಾದ ಕಾರ್ಯವನ್ನು ಕೈಗೊಂಡರು. ಹಳ್ಳಿಗಳ ಅಭಿವೃದ್ಧಿ, ವ್ಯವಸಾಯ, ನೀರಾವರಿ, ವಿದ್ಯುತ್, ಉತ್ಪಾದನೆ, ರಸ್ತೆಗಳ ನಿರ್ಮಾಣ ಹಾಗೂ ಭೂಹಿಡುವಳಿಗೆ ಸಂಬಂಧಪಟ್ಟಂತೆ ಭೂಸುಧಾರಣೆಯನ್ನು ಜಾರಿಗೆ ತರಲು ಪ್ರಯತ್ನಿಸಿದ್ದರು. ಉಳುವವನೆ ಭೂ ಒಡೆಯನಾಗಬೇಕೆಂದು ರಾಷ್ಟ್ರೀಯ ಕಾಂಗ್ರೆಸಿನ ಮತ್ತು ಯೋಜನಾ ಆಯೋಗದ ಗುರಿಗೆ ತಕ್ಕ ಹಾಗೆ ಪ್ರಯತ್ನಿಸಿದ್ದರು. ಕಂದಾಯ ಮಂತ್ರಿಯಾಗಿ ಇನ್ನು ಮುಖ್ಯವಾದಂತ ಕಾರ್ಯ ಕೈಗೊಂಡಿರುವುದೆಂದರೆ ಭೂರಹಿತರಿಗೆ ಭೂಮಿಯನ್ನು ಹಂಚಿರುವುದು, ವ್ಯವಸಾಯಕ್ಕೆ ಯೋಗ್ಯವಾದ ಸರ್ಕಾರಿ ಭೂಮಿಯನ್ನು ಸಾಮಾನ್ಯವಾಗಿ ಹರಾಜು ಮಾಡುವ ಮೂಲಕ ಹಂಚಲಾಗುತ್ತಿತ್ತು. ಜಮೀನನ್ನು ಹರಾಜು ಮಾಡಿದಾಗ ಶ್ರೀಮಂತರೇ ಅದನ್ನು ಕೊಂಡುಕೊಳ್ಳುತ್ತಿದ್ದರು. ಆದ್ದರಿಂದ ಬಡವರಿಗೆ ಜಮೀನು ಸಿಗುತ್ತಿರಲಿಲ್ಲ. ಇದರಿಂದ ಕಡಿದಾಳ್‌ರು ಸರ್ಕಾರದ ಈ ನೀತಿಯನ್ನೇ ಬದಲಿಸಬೇಕೆಂದು ತೀರ್ಮಾನಿಸಿದರು. ಸರ್ಕಾರದ ಅನುಮತಿಯಿಲ್ಲದೆ ಯಾವುದೇ ಭೂಮಿಯನ್ನು

ಹರಾಜು ಮಾಡುವಂತಿಲ್ಲವೆಂದು ಹಾಗೂ ಬೆಲೆ ಬಾಳುವ ಭೂಮಿಯನ್ನು ಮಾತ್ರ ಮಾಡಬೇಕೆಂದು ತಿಳಿಸಿದರು. ಅಲ್ಲದೆ ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯನ್ನು ಹರಿಜನ, ಗಿರಿಜನರಿಗೂ, ಭೂಹೀನ ಕೃಷಿಕರಿಗೂ, ಅಲ್ಪಸ್ವಲ್ಪ ಭೂಮಿ ಇರತಕ್ಕ ಕೃಷಿಕರಿಗೂ ಹಂಚಬೇಕೆಂದು ತೀರ್ಮಾನಿಸಿದರು (ಕಡಿದಾಳ್, ೧೯೯೦:೧೪೯-೧೫೦).

ಕಡಿದಾಳ್‌ರು ಮಂತ್ರಿಯಾದ ಸಮಯದಲ್ಲಿ ಇನ್ನು ಹೆಚ್ಚಿನ ಸುಧಾರಣೆ ತರುವುದಕ್ಕೆ ಸಹಾಯಕವಾಗುವಂತೆ ಅವರಿಗೆ ಗಣ್ಯ ವ್ಯಕ್ತಿಗಳ ಪರಿಚಯವಾಗುತ್ತದೆ. ಗಾಂಧೀಜಿಯ ಒಡನಾಡಿಯಾದಂತಹ ಸುಶೀಲಾ ನಯ್ಯರ್, ಶ್ರೀ ಯು.ಎನ್.ದೇಬರ್, ಶ್ರೀ ಗುಲ್ಜಾರಿಲಾಲ್ ನಂದ, ಪಾರ್ಲಿಮೆಂಟ್ ಸದಸ್ಯರಾದ ಶ್ರೀಮಾವಗಿರಿ, ಅಜಿತ್ ಪ್ರಸಾದ್ ಜೈನ್, ಮಹಾವೀರ ತ್ಯಾಗಿ, ಲಾಲ್ ಬಹದ್ದೂರ ಶಾಸ್ತ್ರಿ, ಕಾಂಗ್ರೆಸ್ ಕಾರ್ಯದರ್ಶಿಯಾದ ಶ್ರೀಮನ್ನಾರಾಯಣ ಸರ್ ಎಂ.ವಿಶ್ವೇಶ್ವರಯ್ಯ, ಪಂಡಿತ ಜವಹಾರ್ ಲಾಲ್ ನೆಹರು, ಬಾಬು ರಾಜೇಂದ್ರ ಪ್ರಸಾದ್, ಜಯಪ್ರಕಾಶ ನಾರಾಯಣ, ರಾಜಗೋಪಾಲಚಾರಿ, ಪರಿಚಯವಾದ್ದರಿಂದ ಇನ್ನೂ ಹೆಚ್ಚಿನ ಸುಧಾರಣೆಗೆ ಸಹಕಾರಿಯಾಯಿತು (ಸಂಸದೀಯ ವ್ಯವಹಾರಗಳ ಸಂಸ್ಥೆ, ಗಾಂಧಿಭವನ, ಕಡಿದಾಳ್ ಮಂಜಪ್ಪ ದತ್ತಿ ಉಪನ್ಯಾಸ, ೧೦.೦೭.೧೯೮೫:೪).

ಮುಖ್ಯಮಂತ್ರಿ ಕೆಂಗಲ್ ಹನುಮಂತಯ್ಯನವರ ಕಾರ್ಯವೈಖರಿಯಿಂದ ಬಹುಮಂದಿ ಶಾಸಕರು ಅಸಮಾಧಾನಗೊಂಡಿದ್ದು ಅಧಿಕಾರದಿಂದ ಕೆಳಗಿಳಿಸಲು ಪ್ರಯತ್ನಪಟ್ಟಾಗ. ಹನುಮಂತಯ್ಯ ಅವರನ್ನು ರಾಜ್ಯಗಳ ಪುನರ್ವಿಂಗಡನೆ ಆಗುವುದರೊಳಗೆ ಪದಚ್ಯುತಿಗೊಳಿಸಬಾರದೆಂದು ಕಡಿದಾಳ್‌ರು ಮಾಡಿದ ಪ್ರಯತ್ನ ವಿಫಲವಾಯಿತು. ''ಕಡಿದಾಳ್‌ರ ಆತ್ಮಕಥೆಯಲ್ಲಿ ಈ ಸತ್ಯವನ್ನು ತಿಳಿಸಿದ್ದಾರೆ. ಕಾಂಗ್ರೆಸ್ ಪಕ್ಷ ಕಾರಣಾಂತರದಿಂದ ಒಡೆಯಿತು. ಕರ್ನಾಟಕ ಏಕೀಕರಣವಾಗುವ ಮುನ್ನ ಕೆಂಗಲ್ ಹನುಮಂತಯ್ಯನವರು ಮುಂಬೈಗೆ ಹೋಗಿದ್ದು ಶ್ರೀಪಾಟೀಲ್ ಅವರ ಮನೆಯಲ್ಲಿ ಸಭೆ ಸೇರಿದರು. ಹನುಮಂತಯ್ಯನವರು ಬಂದಾಗ ಇಡೀ ಸಭೆ ಎದ್ದು ನಿಂತಿತು. ಆದರೆ ಸಾವುಕರ್ ಚನ್ನಯ್ಯನವರು ಏಳಲಿಲ್ಲ. ಆಗ ಸಾವುಕರ ಚನ್ನಯ್ಯನವರು ಮೈಸೂರು ಪ್ರದೇಶ ಕಾಂಗ್ರೆಸ್ ಕೂಡ ಇದರಿಂದ ತಮಗೆ ಅಪಮಾನವಾಯಿತೆಂದು ಹನುಮಂತಯ್ಯನವರು ಗೊಣಗುಟ್ಟಿದರು (ಎನ್.ಮೂರ್ತಿ, ೨೦೦೬:೧೫೩). ನಂತರ ಹನುಮಂತಯ್ಯನವರು ಮುಖ್ಯಮಂತ್ರಿ ಪದವಿಯಿಂದ ಪದಚ್ಯುತಿಯಾಗಿ ಅನಂತರ ಕಡಿದಾಳ್ ಮಂಜಪ್ಪನವರು ೧೯-೮-೧೯೫೬ರಿಂದ ೧-೧೧-೧೯೫೬ರವರೆಗೆ ರಾಜ್ಯದ ಮುಖ್ಯಮಂತ್ರಿಯಾಗಿ ಮೂರು ತಿಂಗಳವರೆಗೆ ಆಳ್ವಿಕೆ ನಡೆಸಿದ್ದರು. ಮೈಸೂರು ರಾಜ್ಯದ ಕಟ್ಟಕಡೆಯ ಮುಖ್ಯಮಂತ್ರಿಯಾಗಿದ್ದರು (ಕಡಿದಾಳ್, ೧೯೯೦, ೧೮೭-೧೮೮).

೧೯೫೭ರ ಸಾರ್ವತ್ರಿಕ ಚುನಾವಣೆಯಲ್ಲಿ ಕಡಿದಾಳ್‌ರು ಶೃಂಗೇರಿ ಕ್ಷೇತ್ರದಿಂದ ಅವಿರೋಧ ಆಯ್ಕೆಯಾದರು. ಚುನಾವಣೆ ಮುಗಿದ ನಂತರ ೧-೪-೧೯೫೭ರಂದು ಮುಖ್ಯಮಂತ್ರಿ ನಿಜಲಿಂಗಪ್ಪನವರು

ಮುಂದಿನ ಮುಖ್ಯಮಂತ್ರಿಯಾದರು. ಇವರ ಸಚಿವ ಸಂಪುಟದ ಸದಸ್ಯರ ಒತ್ತಡದಿಂದ ಕಡಿದಾಳ್‌ರಿಗೆ ಯಾವುದೇ ಮಂತ್ರಿ ಪದವಿ ಸಿಗಲಿಲ್ಲ. ಕಡಿದಾಳ್‌ರು ಕೂಡ ಮಂತ್ರಿ ಪದವಿ ಸಿಗಬೇಕೆಂದು ಯಾವುದೇ ಒತ್ತಡವನ್ನು ತರಲಿಲ್ಲ. ಕೇಂದ್ರ ವರಿಷ್ಠ ಮಂಡಳಿಗೆ ದುಂಬಾಲು ಬೀಳಲಿಲ್ಲ. ಹೀಗಾಗಿ ಕಡಿದಾಳ್‌ರು ಮತ್ತೆ ವಕೀಲ ವೃತ್ತಿಯನ್ನು ಪ್ರಾರಂಭಿಸಬೇಕಾಯಿತು.

೧೯೫೮ನೇ ವರ್ಷ ಮಾರ್ಚ್ ತಿಂಗಳಲ್ಲಿ ನಿಜಲಿಂಗಪ್ಪನವರು ಶಾಸಕರ ಬೆಂಬಲ ಕಳೆದುಕೊಂಡಾಗ ಮುಖ್ಯಮಂತ್ರಿ ಪದವಿಗೆ ರಾಜಿನಾಮೆ ಕೊಟ್ಟರು. ೧೯೫೮ನೇ ಇಸವಿ ಮೇ ತಿಂಗಳಿನಲ್ಲಿ ಬಿ.ಡಿ.ಜತ್ತಿಯವರು ನಾಯಕರಾಗಿ ಆಯ್ಕೆಗೊಂಡರು. ಜತ್ತಿಯವರ ಒತ್ತಾಯದ ಮೇರೆಗೆ ಕೆಲವೊಂದು ಷರತ್ತಿನ ಮೇಲೆ ಕಡಿದಾಳ್‌ರು ಮಂತ್ರಿಯಾದರು. ಕಡಿದಾಳ್‌ರ ಸ್ವತಹ ಆತ್ಮಕಥೆಯಲ್ಲಿ ಹೇಳಿಕೊಂಡ ಹಾಗೆ ಮೊದಲನೆಯ ಷರತ್ತಾಗಿ ಸಚಿವ ಸಂಪುಟದಲ್ಲಿ ಎರಡನೆಯ ಸ್ಥಾನ ಕೊಡುವುದು, ಎರಡನೆಯದಾಗಿ ಕೇಳಿದ ಖಾತೆ ಕೊಡುವುದು. ಮೂರನೆಯದು ಕಡಿದಾಳ್‌ರು ಅಪೇಕ್ಷೆಪಟ್ಟಾಗ ಜತ್ತಿಯವರು ಅವರೊಂದಿಗೆ ರಾಜಿನಾಮೆ ಕೊಡುವುದು. ಈ ಎಲ್ಲ ಷರತ್ತಿಗೂ ಜತ್ತಿಯವರು ಒಪ್ಪಿಗೆ ನೀಡಿದರು. ತದನಂತರ ಸಚಿವ ಸಂಪುಟ ರಚಿಸುವಾಗ ಜತ್ತಿಯವರು ಕಡಿದಾಳ್‌ರಿಗೆ ತಿಳಿಯದಂತೆ ಹೆಚ್.ಕೆ.ವೀರಣ್ಣಗೌಡರಿಗೆ ಎರಡನೇ ಸ್ಥಾನವನ್ನು ಕೊಟ್ಟಿದ್ದರು. ಇದು ತಿಳಿದ ಕಡಿದಾಳ್‌ರು ಜತ್ತಿಯವರಿಗೆ "ನೀವು ಮಾತಿಗೆ ತಪ್ಪಿದ್ದೀರಿ, ಆದ್ದರಿಂದ ನನಗೆ ಸಂಪುಟದಲ್ಲಿ ಎರಡನೇ ಸ್ಥಾನವನ್ನು ಕೊಡಬೇಕು. ಇಲ್ಲವೇ ತನ್ನ ರಾಜಿನಾಮೆಯನ್ನು ಅಂಗೀಕರಿಸಬೇಕು ಎಂದು ಒತ್ತಾಯಿಸಿದರು". ಇಕ್ಕಟ್ಟಿಗೆ ಸಿಕ್ಕಿಬಿದ್ದು ಜತ್ತಿಯವರು ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷ ಸಂಜೀವರೆಡ್ಡಿಯವರಿಗೆ ಮತ್ತು ನಿಜಲಿಂಗಪ್ಪನವರಿಗೆ ಮಧ್ಯ ಪ್ರವೇಶಿಸಲು ಕೇಳಿಕೊಂಡರು. ರೆಡ್ಡಿ ಮತ್ತು ನಿಜಲಿಂಗಪ್ಪನವರು ಕಡಿದಾಳ್‌ರನ್ನು ಸಮಾಧಾನ ಮಾಡಲು ಯತ್ನಿಸಿದಾಗ ಕಡಿದಾಳ್‌ರು ಜತ್ತಿಯವರು ನನಗೆ ಈ ಮೊದಲೇ ಸಂಪುಟದಲ್ಲಿ ಎರಡನೇ ಸ್ಥಾನ ಕೊಡುವುದಾಗಿ ವಾಗ್ದಾನ ಮಾಡಿದ್ದರೆಂದು ಈ ಕಾರಣಕ್ಕಾಗಿ ಅವರ ಸಂಪುಟ ಸೇರಲು ಒಪ್ಪಿಕೊಂಡಿದ್ದಾಗಿ ತಿಳಿಸಿದರು. ರೆಡ್ಡಿ ಮತ್ತು ನಿಜಲಿಂಗಪ್ಪನವರು ತಾವು ಜತ್ತಿಯವರೊಂದಿಗೆ ಮಾತನಾಡುವುದಾಗಿ ತಿಳಿಸಿದರು. ನಂತರ ಜತ್ತಿಯವರು ಕಡಿದಾಳ್‌ರ ಬೇಡಿಕೆಗೆ ಮಣಿದು ಸಂಪುಟದಲ್ಲಿ ಎರಡನೆ ಸ್ಥಾನ ಕಲ್ಪಿಸಿಕೊಟ್ಟರು (ಮಂಜಪ್ಪ, ೧೯೯೦:೨೩೦). ಕಡಿದಾಳ್‌ರು ಕೇಳಿದ ಕಂದಾಯ ಸಚಿವ ಖಾತೆಯನ್ನು ಕೊಡಲಾಗಿದ್ದಿತು.

ಕಂದಾಯ ಮಂತ್ರಿಯಾಗಿದ್ದಾಗ ಕಡಿದಾಳ್‌ರು ಭೂಸುಧಾರಣಾ ವಿಧೇಯಕವನ್ನು ಜಾರಿಗೊಳಿಸಲು ೧೯೬೧ರಲ್ಲಿ ವಿಧಾನಸಭೆಯಲ್ಲಿ ವಿಧೇಯಕವನ್ನು ಮಂಡಿಸಿದರು. ವಿಧೇಯಕಕ್ಕೆ ೧೫-೯-೧೯೬೧ರಂದು ವಿಧಾನಸಭೆ ಒಪ್ಪಿಗೆ ನೀಡಿತು. ಇದರೊಂದಿಗೆ ರಾಜ್ಯಾದ್ಯಾಂತ ಇದ್ದ ಗ್ರಾಮಾಧಿಕಾರಿಗಳ ಆನುವಂಶಿಕ ಹುದ್ದೆಗಳನ್ನು ರದ್ದುಪಡಿಸಲು ಕಾನೂನನ್ನು ರಚಿಸುವುದು ಕಡಿದಾಳ್‌ರಿಗೆ ಅನಿವಾರ್ಯವಾಯಿತು. ಕುಲಕರ್ಣಿಗಳಿಗೂ ಪಟೇಲರುಗಳು ಗ್ರಾಮಾಂತರ ಪ್ರದೇಶಗಳಲ್ಲಿ ಸ್ಥಳೀಯ ರಾಜಕಾರಣದಲ್ಲಿ ಕೈಹಾಕಿ

ಗುಂಪು ರಾಜಕಾರಣವನ್ನು ಬೆಳೆಸುತ್ತಿದ್ದಾರೆಂದೂ ಅವರ ಅನುವಂಶಿಕ ಹುದ್ದೆಗಳನ್ನು ರದ್ದುಪಡಿಸಬೇಕೆಂದೂ ಆಗಾಗ ಶಾಸನಸಭೆಯ್ನಲ್ಲಿ ಕೆಲವು ಸದಸ್ಯರು ಒತ್ತಾಯ ಪಡಿಸುತ್ತಿದ್ದರು. ಜೊತೆಗೆ ತಾವು ಚುನಾವಣೆಗಳಿಗೆ ಸ್ಪರ್ಧಿಸಲು ಅವಕಾಶವನ್ನು ಕಲ್ಪಿಸುವ ಸಲುವಾಗಿ ತಮ್ಮ ಅನುವಂಶಿಕ ಹುದ್ದೆಗಳನ್ನು ರದ್ದುಪಡಿಸಬೇಕೆಂದು ಹಳೇ ಮೈಸೂರು ರಾಜ್ಯದ ಶಾನುಭೋಗರೂ ಪಟೇಲರೂ ಸೇರಿ ಮೈಸೂರು ನಗರದಲ್ಲಿ ಒಂದು ಸಮ್ಮೇಳನ ನಡೆಸಿದ್ದರು. ಈ ಕಾರಣಗಳ ದೆಸೆಯಿಂದ ಕಡಿದಾಳ್‌ರ ನೇತೃತ್ವದಲ್ಲಿ ರಾಜ್ಯ ಸರ್ಕಾರವು ಒಂದು ವಿಧೇಯಕವನ್ನು ರಚಿಸಿತು. ವಿಧೇಯಕವು ವಿಧಾನಸಭೆ ಮತ್ತು ವಿಧಾನ ಪರಿಷತ್ತಿನ ಅನುಮೋದನೆ ಪಡೆಯಿತು. ಇದರಿಂದಾಗಿ ಶಾನುಭೋಗರು ಕುಲಕರ್ಣಿಗಳು ಪಟೇಲರು ವಿನಾಕಾರಣವಾಗಿ ಕಡಿದಾಳ್‌ರಿಗೆ ಶಾಪ ಹಾಕಿದರು. ಕಡಿದಾಳ್‌ರು ಕಂದಾಯ ಇಲಾಖೆಯ ಆಡಳಿತವನ್ನು ಚುರುಕುಗೊಳಿಸುವ ಸಲುವಾಗಿ ಆಗಾಗ ತಾಲ್ಲೂಕುಗಳ ತಹಸೀಲ್ದಾರರಿಗೆ, ಅಸಿಸ್ಟೆಂಟ್ ಕಮಿಷನರುಗಳು ಮತ್ತು ಜಿಲ್ಲಾಧಿಕಾರಿಗಳ ಕಚೇರಿಗಳಿಗೆ ಭೇಟಿ ಕೊಟ್ಟು ಪರಿಶೀಲಿಸುತ್ತಿದ್ದರು (ಸಂದರ್ಶನ : ಹೆಚ್.ಜಿ.ಗೋವಿಂದಗೌಡ, ೧೭.೦೫. ೨೦೦೮).

೧೯೬೨ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಕಡಿದಾಳ್‌ರು ಶೃಂಗೇರಿ ಕ್ಷೇತ್ರದಿಂದ ಸ್ಪರ್ಧಿಸಿದರು. ಈ ಚುನಾವಣೆ ಮಂಜಪ್ಪನವರ ಬದುಕಿನಲ್ಲಿ ತುಂಬ ಮಹತ್ವದ ಘಟ್ಟವಾಗಿತ್ತು. ಹೆಚ್.ಜಿ.ಗೋವಿಂದೇಗೌಡರು ಹೇಳುವ ಹಾಗೆ ಕಡಿದಾಳರಿಗೆ ಈ ಚುನಾವಣೆ ಅಗ್ನಿಪರೀಕ್ಷೆಯಾಗಿತ್ತು. ಗೇಣಿದಾರನ ಮಗನಾಗಿದ್ದು, ಭೂಸುಧಾರಣೆಗೆ ಚಾಲನೆ ನೀಡಿದರು. ಇದರಿಂದ ಕಾಂಗ್ರೆಸ್ ಪಕ್ಷದಲ್ಲಿನ ಸದಸ್ಯರೊಂದಿಗೆ, ಭೂಮಾಲೀಕರೊಂದಿಗೆ, ಶ್ರೀಮಂತರೊಂದಿಗೆ ವೈಷಮ್ಯ ಕಟ್ಟಿಕೊಂಡಿದ್ದರು. (ಸಂದರ್ಶನ : ಹೆಚ್.ಜಿ.ಗೋವಿಂದೇಗೌಡರು, ೧೭.೦೫.೨೦೦೮) ಈ ಸಮಯದಲ್ಲಿ ಮಾಜಿ ಶಿಕ್ಷಣ ಸಚಿವರಾದ ಗೋವಿಂದೇಗೌಡರು ಇವರ ಸಹಾಯಕ್ಕೆ ಬಂದರು. ಕಡಿದಾಳ್‌ರ ವಿರುದ್ಧ ಸಮಾಜವಾದಿ ಪಕ್ಷದ ನಾಯಕರಾದ ಎನ್.ಪಿ.ಗೋವಿಂದೇಗೌಡರು ಚುನಾವಣೆಗೆ ಸ್ಪರ್ಧಿಸಿದ್ದರು. ಭೂಮಾಲೀಕರೆಲ್ಲ ಸೇರಿ ಅವರಿಗೆ ಸಮಾಜವಾದಿ ಪಕ್ಷಕ್ಕೆ ಬೆಂಬಲ ಸೂಚಿಸಿದರು. ಈ ಎಲ್ಲ ವಿರೋಧಗಳ ನಡುವೆಯೂ ಗೇಣಿದಾರರ ಬೆಂಬಲದಿಂದ ವಿಜಯಶಾಲಿಗಳಾದರು.

ಚುನಾವಣೆಯ ನಂತರ ಕಾಂಗ್ರೆಸ್ ಪಕ್ಷಕ್ಕೆ ಬಹುಮತ ಬಂದಿದ್ದು ನಾಯಕನನ್ನು ಆಯ್ಕೆ ಮಾಡಲು ಲಾಲ್ ಬಹದ್ದೂರ್ ಶಾಸ್ತ್ರಿಯವರು ಬಂದಿದ್ದರು. ಕಡಿದಾಳ್‌ರನ್ನು ನಾಯಕರಾಗಲು ಕೇಳಿಕೊಂಡರೂ ಕೂಡ ಅವರು ಒಪ್ಪಲಿಲ್ಲ(ಉತ್ತರ ಕರ್ನಾಟಕದ ಶಾಸಕರ ಬೆಂಬಲವಿಲ್ಲದ್ದರಿಂದ ಒಪ್ಪಿಕೊಂಡಿರಲಿಲ್ಲ). ಮಂತ್ರಿ ಪದವಿಗಾಗಿ ಯಾರ ಮೇಲೂ ಒತ್ತಡ ತರಲಿಲ್ಲ. ಕಡಿದಾಳ್‌ರ ಪ್ರಾಮಾಣಿಕತೆಯನ್ನು, ಭ್ರಷ್ಟತೆಯ ವಿರುದ್ಧ ಹೋರಾಡಿರುವುದನ್ನು ಗಮನಿಸಿ ರಾಜಕೀಯ ರಂಗದಿಂದ ಹೊರಗಿಡಲು ಪ್ರಯತ್ನಿಸಿದವರ ಹಿನ್ನೆಲೆಯನ್ನು ಅರಿತು ಕಡಿದಾಳ್‌ರು ಒಪ್ಪಿಕೊಳ್ಳಲಿಲ್ಲ. ರಾಜಕೀಯದಲ್ಲಿ ನಡೆಯುವ ಮಿಥ್ಯಾರೋಪ,

ಭ್ರಷ್ಟಾಚಾರ, ಸಮಯ ಸಾಧಕತನವನ್ನು ನೋಡಿ ಅವರು ಜಿಗುಪ್ಸೆಗೊಂಡಿದ್ದರು. ೧೯೬೭ರಲ್ಲಿ ವಿಧಾನಸಭೆಯ ಚುನಾವಣೆಗೆ ನಿಲ್ಲುವ ಗೋಜಿಗೆ ಹೋಗಲಿಲ್ಲ. ನಂತರದ ದಿನಗಳಲ್ಲಿ ಅವರು ಸಕ್ರಿಯ ರಾಜಕಾರಣದಿಂದ ನಿವೃತ್ತರಾದರು ಎನ್ನಬಹುದು (ರಾಮದಾಸ್, ೨೦೦೭:೧೫).

೧೯೬೯ರಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಒಡೆದು ಇಬ್ಬಾಗವಾಯಿತು. ಇಂದಿರಾಗಾಂಧಿ ಮತ್ತು ಕಡಿದಾಳ್‌ರ ನಡುವೆ ವೈಮನಸ್ಸಾಗಿದ್ದರಿಂದ ತಾತ್ವಿಕ ಹಾಗೂ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳು ಮೂಡಿಬಂದಿದ್ದರಿಂದಾಗಿ ೨೨-೧೧-೧೯೬೯ರಂದು ದೆಹಲಿಯಲ್ಲಿ ಸೇರಿದ್ದ ವಿಶೇಷ ಕಾಂಗ್ರೆಸ್ ಅಧಿವೇಶನದಲ್ಲಿ ನಿಜಲಿಂಗಪ್ಪನವರನ್ನು ಪಕ್ಷದಿಂದ ಉಚ್ಚಾಟಿಸಲಾಯಿತು. ಮುಂದೆ ಶ್ರೀಮತಿ ಇಂದಿರಾ ಗಾಂಧಿಯವರ ನೇತೃತ್ವದಲ್ಲಿ ಒಂದು ಭಾಗ ಆಡಳಿತ ಕಾಂಗ್ರೆಸ್ ಪಕ್ಷವಾಗಿ ಉದಯವಾಯಿತು. ಇನ್ನೊಂದು ಭಾಗ ನಿಜಲಿಂಗಪ್ಪನವರ ನೇತೃತ್ವದಲ್ಲಿ ಸಂಸ್ಥಾ ಕಾಂಗ್ರೆಸ್ಸಾಗಿ ಉದಯವಾಯಿತು. ಇಂದಿರಾ ಗಾಂಧಿಯವರ ನೇತೃತ್ವದ ಕಾಂಗ್ರೆಸ್ಸಿಗೆ ಅಧ್ಯಕ್ಷನಾಗಬೇಕೆಂದು ಕೇಳಿಕೊಂಡರು. ಆಗ ಕಡಿದಾಳ್‌ರು ನಾನು ಒಂದು ವೇಳೆ ಅಧ್ಯಕ್ಷನಾದರೆ ನನ್ನೊಂದಿಗೆ ಯಾರು ಇರುತ್ತಾರೆ ಎಂದು ಕೇಳಿದರು. ಇದರಿಂದ ಅವರ ಜೊತೆಯಲ್ಲಿರುವ 'ಭ್ರಷ್ಟತೆ'ಯ ಸದಸ್ಯರನ್ನು ಹೆಸರಿಸಿದಾಗ ದೂರ ಸರಿದರು. ಕಡಿದಾಳ್‌ರು ಶುದ್ಧ ರಾಜಕಾರಣವನ್ನೇ ಇಷ್ಟಪಡುತ್ತಿದ್ದರು. ಮುಂದೆ ಕೂಡಾ ಚುನಾವಣೆಗೆ ಸ್ಪರ್ಧಿಸುವ ಅವಕಾಶ ಬಂದರೂ ಕೂಡ ಒಪ್ಪಲಿಲ್ಲ (ಕಡಿದಾಳ್ ೧೯೯೦:೨೮೦).

೧೯೭೪ರಲ್ಲಿ ರಾಜಕಾರಣ ಹೊಲಸಾಗುತ್ತಿದ್ದದನ್ನು ನೋಡಿ ಕಡಿದಾಳ್‌ರಿಗೆ ಸುಮ್ಮನಿರಲಾಗಲಿಲ್ಲ. ಕೆಲವೊಂದು ಮಿತ್ರರೊಂದಿಗೆ ಸೇರಿ ನವನಿರ್ಮಾಣ ಕ್ರಾಂತಿ ಎಂಬ ಸಂಸ್ಥೆಯನ್ನು ಅಸ್ತಿತ್ವಕ್ಕೆ ತರಬೇಕೆಂದು ತೀರ್ಮಾನವನ್ನು ಕೈಗೊಂಡರು. ಈ ಸಂಸ್ಥೆಯ ಸ್ಥಾಪನೆಯ ಮುಖ್ಯ ಉದ್ದೇಶವೆಂದರೆ ಹೊಲಸಾಗುತ್ತಿದ್ದ ರಾಜಕಾರಣವನ್ನು ಶುದ್ಧಗೊಳಿಸುವುದಾಗಿತ್ತು. ಆದರೆ ಸಂಸ್ಥೆಯ ಉದ್ಘಾಟನೆಯ ದಿನವೇ ಸದಸ್ಯರಲ್ಲಿ ಆರೋಪ, ಪ್ರತ್ಯಾರೋಪಗಳು ಉಂಟಾಗಿದ್ದರಿಂದ ಹೊಸ ಸಂಸ್ಥೆ ಹುಟ್ಟಿದ ದಿನವೇ ನಾಶವಾಯಿತು (ರಾಮದಾಸ್, ೨೦೦೭:೧೭).

ಕವಂಟೆ ಅವರ ಅಭಿಪ್ರಾಯದಲ್ಲಿ ಕಡಿದಾಳ್‌ರು ಕಾಂಗ್ರೆಸ್ ಪಕ್ಷದಲ್ಲಿದ್ದುಕೊಂಡು ಅಧಿಕಾರವಧಿಯಲ್ಲಿ ಸಮಾಜವಾದಕ್ಕೆ ಪೂರಕವಾದಂಥ ಕಾರ್ಯಕೈಗೊಂಡಿದ್ದರಲ್ಲದೆ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿಯಲ್ಲಿ ಸಮಾಜವಾದವನ್ನು ಅನುಷ್ಠಾನಕ್ಕೆ ತರುವಲ್ಲಿ ತುಂಬ ಕಷ್ಟಪಟ್ಟಿದ್ದರು. ಜಿಲ್ಲೆಯ ಜನತೆಯಲ್ಲಿ ರಾಜಕೀಯ ಹಾಗೂ ವೈಚಾರಿಕ ಜಾಗೃತಿಯನ್ನು ಉಂಟು ಮಾಡಿದರು. ಇದರ ಫಲವಾಗಿಯೇ ಶ್ರೀ.ಜೆ.ಹೆಚ್.ಪಟೇಲ್, ಗೋಪಾಲಗೌಡ, ಎಸ್.ಬಂಗಾರಪ್ಪ, ಕಾಗೋಡು ತಿಮ್ಮಪ್ಪ ಹಿಂದುಳಿದ ಜನಾಂಗದಿಂದ ಬಂದವರು. ಭೂಮಾಲೀಕರಿಗೆ ಕೂಲಿ ಆಳಾಗಿದ್ದ ಇಂಥ ಜನಾಂಗ ರಾಜಕೀಯದಲ್ಲಿ ಮುಂದೆ ಬರಬೇಕಾದರೆ ತುಂಬ ಪರಿಶ್ರಮ ಪಡಬೇಕಾಗುವುದು. ಇದಕ್ಕೆ ಯಾರಾದರೂ ಮುಖಂಡರ

ಸಹಾಯ ಬೇಕು. ಕಡಿದಾಳ್ ಮಂಜಪ್ಪನವರು ಇಂಥವರಲ್ಲಿ ಧೈರ್ಯ, ಶಕ್ತಿ ತುಂಬಿ ಮುನ್ನಡೆಸುವಲ್ಲಿ ಯಶಸ್ವಿಯಾದರು. ಅವರ ಸಮಾಜ ಸೇವೆಯನ್ನು ಪರಿಗಣಿಸಿದಾಗ ಸಮಾಜವಾದಿ ಸಿದ್ಧಾಂತದಲ್ಲಿ ನಂಬಿಕೆಯಿಟ್ಟುಕೊಂಡಿದ್ದರು. ಅವರು ಸಮಾಜವಾದವನ್ನು ತಮ್ಮ ಕಾರ್ಯಕ್ಷೇತ್ರದಲ್ಲಿ ಅನುಷ್ಠಾನಕ್ಕೆ ತರಲು ಪ್ರಯತ್ನಿಸಿದರು. ಸಮಾಜವಾದಿ ಪಕ್ಷದ ಸಂಘಟನೆ, ಆ ಮೂಲಕ ಕ್ರಾಂತಿ ಇವುಗಳ ಬಗ್ಗೆ ಯಾವುದೇ ರೀತಿಯ ಕನಸಾಗಲಿ ನಂಬಿಕೆಯಾಗಲಿ ಇರಲಿಲ್ಲ. ಅವರು ತಮ್ಮ ಮಿತಿಯಲ್ಲಿ ಸಮಾಜ ಸುಧಾರಣೆಯನ್ನು ತರಲು ಸಮಾಜವಾದಿ ಸಿದ್ಧಾಂತವನ್ನು ಬಳಸಿಕೊಂಡಿದ್ದರು (ಕವಂಟೆ ಮತ್ತು ಪೂಜಾರ್, ೧೯೯೯:೧೦೬).

ಸಮಾಜ ಸುಧಾರಣೆ ಬಡವರ ಉದ್ಧಾರ ಕೇವಲ ರಾಜಕಾರಣಗಳಿಂದಾಗಲಿ, ಸಮಾಜ ಸುಧಾರಣೆಯಾಗಲಿ ಆಗದು, ಇದಕ್ಕೆ ಜನತೆಯ ಸಹಕಾರ ಬೇಕು. ಸರಕಾರ ಮಾಡಿದ ಯೋಜನೆಗಳನ್ನು ಕಾರ್ಯರೂಪಕ್ಕೆ ತರಬೇಕಾದರೆ ಜನತೆಯ ಪ್ರಾಮಾಣಿಕವಾದ ಸಹಕಾರ ಬೇಕು. ದೇಶದ ಜನತೆಯ ಏಳ್ಗೆಗಾಗಿ ದುಡಿಯುವ ರಾಜಕಾರಣಿಗಳು ಹುಟ್ಟಿ ಬರಬೇಕೆಂದು ಜೀವಿತದ ಕೊನೆಯ ಗಳಿಗೆಯಲ್ಲಿ ಹೇಳುತ್ತಿದ್ದರು. ರಾಜಕಾರಣಿಗಳು ಪ್ರಾಮಾಣಿಕರಾಗಿರಬೇಕು, ನೀತಿವಂತರಾಗಿರಬೇಕು ಅಂದಾಗ ಜನ ಅವರನ್ನು ಮುಖಂಡರೆಂದು ಭಾವಿಸುವರು ಅಂಥ ಮುಖಂಡರಿಂದ ಸಮಾಜದ ಏಳ್ಗೆ ಆಗುವುದು ಎನ್ನುತ್ತಿದ್ದರು. ಎಲ್ಲಿಯವರೆಗೆ ರಾಜಕಾರಣದಲ್ಲಿ ಭ್ರಷ್ಟರ ಕೈವಾಡ ಹೆಚ್ಚಾಗಿರುತ್ತದೆಯೋ ಅಲ್ಲಿಯವರೆಗೆ ಸಾಮಾಜಿಕ, ಆರ್ಥಿಕ ಕ್ಷೇತ್ರಗಳಲ್ಲಿ ಸುಧಾರಣೆ ಮತ್ತು ಪ್ರಗತಿ ಸಾಧ್ಯವಿಲ್ಲ ಎಂದು ಕಡಿದಾಳ್‌ರು ಆತ್ಮಕಥೆಯಲ್ಲಿ ಹೇಳಿಕೊಂಡಿದ್ದಾರೆ. ಸವಜ ಸುಧಾರಣೆ ಆಗಬೇಕಾದರೆ ಜನ ನೆಮ್ಮದಿಯಿಂದ ಬದುಕಬೇಕಾದರೆ ಮೇಲಿನಿಂದ ಸುಧಾರಣೆ ಆಗಬೇಕು ಇಲ್ಲವೆ ಕೆಳಗಡೆ ಕ್ರಾಂತಿ ಆಗಬೇಕು ಎನ್ನುತ್ತಿದ್ದರು. ಈ ನಿಟ್ಟಿನಲ್ಲಿ ಕಡಿದಾಳ್‌ರು ರಾಷ್ಟ್ರೀಯ ಜಾಗೃತಿ ಮಂಡಲಿ ಸ್ಥಾಪಿಸಿರುವುದು ಸಮಂಜಸವೆನಿಸುತ್ತದೆ (ಕಡಿದಾಳ್, ೧೯೯೦:೩೪೪). ಈ ತರಹದ ನಿಷ್ಠುರ ಅಂಶಗಳನ್ನು ಕಡಿದಾಳ್‌ರು ಅಳವಡಿಸಿಕೊಂಡು ಕಾಂಗ್ರೆಸ್ ಪಕ್ಷದಲ್ಲಿದ್ದು ಸಮಾಜವಾದಿ ತತ್ವಗಳ ಮೂಲಕ ಕರ್ನಾಟಕದಲ್ಲಿ ಭೂ ಸುಧಾರಣೆಗೆ ಅಡಿಪಾಯ ಹಾಕಿ ರಾಜ್ಯದ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿರುವುದು ಮಹತ್ವದೆನಿಸುತ್ತದೆ.



**ಟಿಪ್ಪಣಿ**

೧. **ಸಾಗರ ತಾಲ್ಲೂಕಿನ ರೈತ ಸಂಘ** : ಕಾಗೋಡು ಸತ್ಯಾಗ್ರಹಕ್ಕೆ ಮೂಲ ಪ್ರೇರಣೆ ನೀಡಿದಂತ ಪ್ರಮುಖ ಸಂಘಟನಾಯಾಗಿದೆ. ೧೯೪೮ರಲ್ಲಿ ಮಲೆನಾಡು ಗೇಣಿದಾರರ ಸಂಘ ಸ್ಥಾಪನೆಯಾಗಲು ಪ್ರಮುಖವಾಗಿ ಗಣಪತಿಯಪ್ಪ ಮತ್ತು ಕಡಿದಾಳ್ ಮಂಜಪ್ಪನವರು ಕಾರಣವಾಗಿದ್ದರು. ಸಂಘ ದೀವರ ಜಾತಿಯವರಿಗೆ ಸಂಬಂಧಪಟ್ಟಿತ್ತಾದರೂ ವಾಸ್ತವವಾಗಿ ಅದು ಆ ಪ್ರದೇಶದ ಗೇಣಿದಾರರ ಸಂಘವೇ ಆಗಿತ್ತು. ಕಾರಣ ಆ ಪ್ರದೇಶದ ಗೇಣಿದಾರರಲ್ಲಿ ಮತ್ತು ಗೇಣಿ ಜಮೀನನ್ನು ನಂಬಿಕೊಂಡು ಬದುಕುವರಲ್ಲಿ ಶೇ.೮೦ಕ್ಕೂ ಹೆಚ್ಚು ಜನ ದೀವರ ಜಾತಿಯವರಾಗಿದ್ದರು. ಸಂಘದ ಹೆಸರನ್ನು ಮಾದಲಿಗೆ ದೀವರ ಸಂಘವೆಂದೂ ಇಡಲು

ಕೆಲವರು ತೀರ್ಮಾನಿಸಿದ್ದರೂ ಗಣಪತಿಯಪ್ಪನ ಸಲಹೆಯ ಮೇರೆಗೆ ಸಂಘಕ್ಕೆ ಸಾಗರ ತಾಲ್ಲೂಕು ರೈತ ಸಂಘ ಎಂದು ಹೆಸರಿಟ್ಟರು. ಸಂಘದ ಬೇಡಿಕೆಗಳು ಗೇಣಿರೈತರ ಸಮಸ್ಯೆಯನ್ನು ಕುರಿತೇ ಆಗಿದ್ದವು. ಸಂಘದ ಪ್ರಮುಖ ಚಟುವಟಿಕೆಗಳೆಂದರೆ ಪ್ರತಿಗ್ರಾಮದಲ್ಲಿಯೂ ರೈತರ ಸಭೆಗಳನ್ನು ನಡೆಯಿಸಿ ಅವರ ಮುಂದೆ ರೈತರ ಸಮಸ್ಯೆಗಳನ್ನು ವಿವರಿಸಿ ಹೇಳುವುದು ಮುಖ್ಯ ಉದ್ದೇಶವಾಗಿತ್ತು (ಕೋಣಂದೂರು ವೆಂಕಪ್ಪಗೌಡ, ೧೯೮೧ : ೧೨೦).

೨. **ಕಡಿದಾಳ್** : ಕಡಿದಾಳ್ ಎಂಬುದು ಕಡಿದಾಳ್ ಮಂಜಪ್ಪನವರ ಮನೆತನದ ಹೆಸರಾಗಿದೆ. ಕಡಿದಾಳ್‌ರ ಪೂರ್ವಜರೊಬ್ಬರು ರಾಜನ ಅಥವಾ ಪಾಳೆಯಗಾರನ ಸೈನ್ಯದಲ್ಲಿ ಸೈನಿಕರಾಗಿ ಸೇರಿ ಯುದ್ಧದಲ್ಲಿ ಬಹಳ ಪರಾಕ್ರಮದಿಂದ ಹೋರಾಡಿ ನಂತರ ಊರಿಗೆ ಬಂದು ನೆಲೆಸಿದರು. ಊರಿನ ಜನರು 'ಕಡಿದ ಆಳು' ಎಂದು ಕರೆಯುತ್ತಿದ್ದರಿಂದ ಮಂಜಪ್ಪನವರ ಮನೆತನಕ್ಕೆ 'ಕಡಿದಾಳು' ಅಥವಾ 'ಕಡಿದಾಳ್' ಎಂಬ ಹೆಸರು ಬಂದಿದೆ. (ಕವಂಟೆ ಮತ್ತು ಪೂಜಾರ, ೧೯೯೩: ೩)

೩. ಮಲೆನಾಡ ಭಾಗದಲ್ಲಿ ಭೂಮಾಲೀಕರೂ, ಸಾಹುಕಾರರೂ ಗೇಣಿಯನ್ನೂ ಮತ್ತು ಸಾಲವನ್ನು ವಸೂಲಿ ಮಾಡುವುದಕ್ಕಾಗಿ ವಸೂಲಿ ಸಾಹೇಬರುಗಳನ್ನು ಕೇರಳದಿಂದ ಕರೆಸುತ್ತಿದ್ದರು. ಇವರು ಕೇರಳದಿಂದ ಬಂದಂತಹ ವಲಸೆ ಮಾಪ್ಪಿಳ್ಳೆಯವರಾಗಿದ್ದರು. ಈ ಜನರನ್ನು ಕಂಡರೆ ಮಲೆನಾಡಿನ ಜನರು ಭಯಪಡುತ್ತಿದ್ದರು. ಗೇಣಿ ಅಥವಾ ಸಾಲ ಬಾಕಿಯಿರುವವರು ಅವರ ಕಣ್ಣಿಗೆ ಬೀಳದಂತೆ ತಲೆ ತಪ್ಪಿಸಿಕೊಳ್ಳುತ್ತಿದ್ದರು. ಕೆಲವು ಸಂದರ್ಭಗಳಲ್ಲಿ ಮನೆಯಲ್ಲಿ ಗಂಡಸರಿಲ್ಲದಿದ್ದಾಗ ಈ ವಸೂಲಿ ಸಾಹೇಬರುಗಳು ಹೆಣ್ಣುಮಕ್ಕಳ ಶೀಲವನ್ನು ಕೆಡಿಸಲು ಪ್ರಯತ್ನಿಸುತ್ತಿದ್ದರು. ಇದರಿಂದಾಗಿ ಮಲೆನಾಡಿನ ಜನರು ಒಂದು ವಿಧವಾದ ಭಯೋತ್ಪಾದಕ ವಾತಾವರಣದಲ್ಲಿ ಬದುಕಿರುತ್ತಿದ್ದರು ಎಂದು ಕಡಿದಾಳ್‌ರು ತನ್ನ ಆತ್ಮಕಥೆಯಲ್ಲಿ ಹೇಳಿಕೊಂಡಿದ್ದಾರೆ (ಕಡಿದಾಳ್, ೧೯೯೦:೧೬).

೪. ಸವಿನಯ ಕಾನೂನುಭಂಗ ಚಳುವಳಿ ಮುಷ್ಕರ ಬರಿಷ್ಕಾರ, ಹಿಂಸೆ ಇವುಗಳಿಂದ ಸರ್ಕಾರಕ್ಕೆ ಮತ್ತು ಬ್ರಿಟಿಷರಿಗೆ ನಷ್ಟವುಂಟಾದುದಲ್ಲದೆ ರಾಷ್ಟ್ರೀಯ ಚಳುವಳಿಯನ್ನು ಬಲತ್ಕಾರದಿಂದ ಹತ್ತಿಕ್ಕಲು ಸಾಧ್ಯವಿಲ್ಲವೆಂದೂ ಗಾಂಧಿ ಮತ್ತು ಕಾಂಗ್ರೆಸನ್ನು ಹೊರಗಿಟ್ಟು ಯಾವ ಸಮಲಾಚನೆಯೂ ಪೂರ್ಣಗೊಳ್ಳುವುದಿಲ್ಲವೆಂದು ತಿಳಿದು ಸರ್ಕಾರ ಗಾಂಧೀಯೊಡನೆ ಸಂಧಾನ ಕ್ರಮಗಳನ್ನು ಪ್ರಾರಂಭಿಸಿದರು. ೧೯೩೧ರಲ್ಲಿ ಗಾಂಧಿ ಮತ್ತು ಇರ್ವಿನ್ ಒಪ್ಪಂದವಾಯಿತು. ಹೀಗಾಗಿ ಗಾಂಧೀ ಚಳುವಳಿಯನ್ನು ಸ್ಥಗಿತಗೊಳಿಸಿ ಎರಡನೆ ದುಂಡು ಮೇಜಿನ ಪರಿಷತ್ತಿನಲ್ಲಿ ಭಾಗವಹಿಸಲು ಲಂಡನಿಗೆ ತೆರಳಿದರು. ಇದಕ್ಕೆ ಹಲವು ವಾಯಕರಿಂದ ಮಿಶ್ರಪ್ರತಿಕ್ರಿಯೆ ವ್ಯಕ್ತವಾಗಿತ್ತು. ಇದೇ ಸಂದರ್ಭದಲ್ಲಿ ಕಾಂಗ್ರೆಸಿನ ಬಹಿಷ್ಕಾರದಿಂದ ಮೊದಲನೇ ದುಂಡುಮೇಜಿನ ಪರಿಷತ್ ಅಪೂರ್ಣಗೊಂಡಿತು. ಅಲ್ಲದೆ, ಮಹಮ್ಮದ ಆಲಿ ಜಿನ್ನಾ ಮತ್ತು ಡಾ.ಬಿ.ಆರ್.ಅಂಬೇಡ್ಕರ್‌ರವರ ಪ್ರತ್ಯೇಕ ಪ್ರಾತಿನಿಧ್ಯ ಹಾಗೂ ಮತ ಕ್ಷೇತ್ರಗಳ ಬೇಡಿಕೆಯಿಂದ ಯಾವುದೇ ತೀರ್ಮಾನಕ್ಕೆ ಬರಲು ಸಾಧ್ಯವಾಗಿರಲಿಲ್ಲ. ಎರಡನೆ ದುಂಡು ಮೇಜಿನ ಪರಿಷತ್ ಸೆಪ್ಟೆಂಬರ್ ೧೯೩೧ರಲ್ಲಿ ಸೇರಿದಾಗ ಗಾಂಧಿ ಕಾಂಗ್ರೆಸ್ಸಿನ ಏಕೈಕ ಪ್ರತಿನಿಧಿಯಾಗಿ ಹೋದರು. ಮುಖ್ಯವಾಗಿ ಕೋಮು ಸಮಸ್ಯೆ ಮತ್ತು ನಿಮ್ನ ವರ್ಗದ ಪ್ರಾತಿನಿಧ್ಯದ ಬಗ್ಗೆ ತೀವ್ರ ಭಿನ್ನಾಭಿಪ್ರಾಯವುಂಟಾಗಿತ್ತು. ಗಾಂಧಿಜೀಯವರ ನಿಲುವು ಎಲ್ಲ ವರ್ಗದವರನ್ನು ಪ್ರತಿನಿಧಿಸುತ್ತಿತ್ತು. ಆದರೆ ಅಂಬೇಡ್ಕರ್ ಒಪ್ಪದೆ ನಿಮ್ನವರ್ಗಗಳಿಗೆ ಪ್ರತ್ಯೇಕ ಚುನಾವಣಾ ಕ್ಷೇತ್ರಬೇಕೆಂದು ವಾದಿಸಿದರು. ಈ ವಾದಕ್ಕೆ ಸಿಖ್ಖರ ವಿನಾ ಉಳಿದ ಎಲ್ಲಾ ಅಲ್ಪಸಂಖ್ಯಾತರ ಬೆಂಬಲ ದೊರೆತಿತು. ಮುಸ್ಲಿಂರು ಸಿಖ್ಖರು ಕಾಂಗ್ರೆಸ್ಸಿನ ಸಂಯುಕ್ತ ರಚನಾ ವ್ಯವಸ್ಥೆಯಲ್ಲಿ ಪಾಲ್ಗೊಳ್ಳುವುದಿಲ್ಲವೆಂದು ತಿಳಿಸಿದರು. ಇದರಿಂದ ಅಂಬೇಡ್ಕರರು ಗಾಂಧಿ ಹಾಗೂ ಕಾಂಗ್ರೆಸ್ಸಿನಿಂದ ನ್ಯಾಯ ದೊರಕುವುದಿಲ್ಲವೆಂದು ನಿಮ್ನವರ್ಗಗಳಿಗೆ ಪ್ರತ್ಯೇಕ ಚುನಾವಣೆ ಕ್ಷೇತ್ರಬೇಕೆಂದು ವಾದಿಸಿ ಬ್ರಿಟಿಷ ಸರ್ಕಾರದ ಬಗ್ಗೆ ಮರು ಚಿಂತನೆ ಮಾಡುವಂತೆ ಮಾಡಿದರು. ಮುಸ್ಲಿಂ

ಲಿಂಗ್ ಕೂಡ ತನ್ನ ಬೇಡಿಕೆಯನ್ನು ಕೈಬಿಡಲಿಲ್ಲ. ಇದರಿಂದ ಗಾಂಧಿಜೀಯವರು ನಿರಾಶರಾಗಿ ಹಿಂದಿರುಗಿದರು. ೧೯೫೨ರಲ್ಲಿ ಬ್ರಿಟಿಷ್ ಪ್ರಧಾನಿ ೧೯೩೨ರಲ್ಲಿ ತೀರ್ಪನ್ನು ನೀಡಿ ನಿಮ್ಮ ವರ್ಗಗಳಿಗೆ ಪ್ರತ್ಯೇಕ ಪ್ರಾತಿನಿಧ್ಯ ಕೊಡುವುದಾಗಿ ತಿಳಿಸಿದರು. ಇದರಿಂದ ಗಾಂಧಿಜೀಯವರು ಭಾರತದ ಸಮಾಜವನ್ನು ದೇಶವನ್ನು ಛಿದ್ರಗೊಳಿಸುವ ತೀರ್ಪೆಂದು ಕಟುವಾಗಿ ಟೀಕಿಸಿ ಅಮರಣಾಂತ ಉಪವಾಸ ವ್ರತಕೈಗೊಂಡರು. ಅವರು ಕೈಗಂಡಿದ್ದ ಉಪವಾಸದಿಂದ ಇಡೀ ರಾಷ್ಟ್ರವೇ ತಲ್ಲಣಗೊಂಡಿತು (ಕಡಿದಾಳ್ ೧೯೯೦:೫೫-೫೬), (ವಿಜಯ(ಸಂ), ೨೦೦೧: ೭೪೭-೭೪೮).

೫. **ಪ್ರಜಾಪಕ್ಷ :** ೧೯೧೭ರಲ್ಲಿ ಸ್ಥಾಪನೆಯಾದಂತ ಪ್ರಜಾಮಿತ್ರ ಮಂಡಳಿಯು ರಾಜ್ಯದಲ್ಲಿ ಮೊದಲ ರಾಜಕೀಯ ಪಕ್ಷವಾಗಿ ಹುಟ್ಟಿಕೊಂಡಿದ್ದು ಹಿಂದುಳಿದ ವರ್ಗಗಳ ಚಳುವಳಿಯ ಮೂಲಕ ಗಣನೀಯ ಸವಲತ್ತುಗಳನ್ನು ನೀಡಿತು. ಈ ನಂತರದ ಬೆಳವಣಿಗೆಯಲ್ಲಿ ಚಳುವಳಿಯ ಹಲವು ಪರಿಣಾಮಗಳಿಂದ ಮತ್ತು ರಾಜ್ಯದ ಹೊರಗಿನ ಪರಿಸ್ಥಿತಿಯಿಂದಾಗಿ ಬ್ರಾಹ್ಮಣೇತರಲ್ಲಿ ಅಸ್ಪೃಶ್ಯರನ್ನು ಒಂದು ಪಂಗಡವೆಂದು ಒಪ್ಪಿಕೊಳ್ಳದೇ ಇದ್ದದ್ದು. ಸ್ಪೃಶ್ಯ ಬ್ರಾಹ್ಮಣೇತರರು ಲಾಭದಾಯಕ ದೃಷ್ಟಿಯಿಂದ ಒಪ್ಪಿಕೊಂಡರು ಮುಖ್ಯ ವಾಹಿನಿಯಲ್ಲಿ ಸೇರಿಸಿಕೊಳ್ಳದಿದ್ದುದ್ದು. ಎಲ್ಲರ ಸಮಿತಿಯು ಕೂಡ ಪ್ರತ್ಯೇಕವಾಗಿಯೇ ಇಟ್ಟಿತ್ತು. ಈ ಅಂಶದಿಂದಾಗಿ ಹಿಂದುಳಿದ ವರ್ಗದವರ ನಡುವಿನ ಐಕಮತ್ಯವಿಲ್ಲದಂತಾಯಿತು. ಕೆಲವು ಹಿಂದುಳಿದ ಕೋಮುಗಳು ತಮ್ಮ ಜನಸಂಖ್ಯೆಯ ಆಧಾರದ ಮೇಲಿ ಸವಲತ್ತುಗಳಿಗಾಗಿ ಒತ್ತಾಯ ತರಲೆತ್ನಿಸಿದವು. ೧೯೨೬ರ ನಂತರ ವಿವಿಧ ಕೋಮುಗಳಲ್ಲಿ ಪರಸ್ಪರ ಭಿನ್ನಾಭಿಪ್ರಾಯವಿದ್ದರೂ ಸಮಾನ ಆಶಕ್ತಿಯಿಂದ ಒಂದಾಗುತ್ತಿದ್ದನು. ೧೯೨೯ರಲ್ಲಿ ೩.೬ರಷ್ಟು ಗೆಜೆಟಾಡ್ ಅಧಿಕಾರಿಗಳು ಹಾಗೂ ೨೫೭ ನಾನ್ ಗೆಜೆಟೆಡ್ ಅಧಿಕಾರಿಗಳು ನಿವೃತ್ತಿ ಅವಧಿಯ ಅವಧಿಯ ವಿಸ್ತರಣೆಯನ್ನು ಏಕ ಕಂಠದಿಂದ ವಿರೋಧಿಸಿದವು. ಇದರಿಂದ ಬ್ರಾಹ್ಮಣರಿಗೆ ಅನುಕೂಲವಾಗಿ ಹಿಂದುಳಿದ ಅಭ್ಯರ್ಥಿಗಳಿಗೆ ಸೇವಾಕಾಶ ದೊರಕದೆಂಬ ಭಯವಿತ್ತು. ರಾಜಕೀಯದಲ್ಲಿ ನಂಬಿಕೆ ಕಳೆದುಕೊಳ್ಳುತ್ತಿದ್ದ ಯುವನಾಯಕರು ಸರ್ಕಾರವನ್ನು ಟೀಕಿಸಲು ತೊಡಗಿದರು. ಅವು ಸರ್ಕಾರದೊಡನೆ ತಮ್ಮ ಕುಂದು ಕೊರತೆಗಳ ಬಗ್ಗೆ ಸಮರ್ಥವಾಗಿ ವ್ಯವಹರಿಸಲು ಆಶಕ್ತವಾಗಿದೆಯೆಂಬ ಜವಾಬ್ದಾರಿ ಸರ್ಕಾರದ ಬೇಡಿಕೆಗೆ ಅನುಕೂಲಕರವಾಗಿರಲಿಲ್ಲವೆಂಬ ಕಾರಣದಿಂದ ೧೯೩೦ರಲ್ಲಿ ಪ್ರಜಾಮಿತ್ರ ಮಂಡಲ ಒಡೈದು 'ಪ್ರಜಾಪಕ್ಷ'ವೆಂಬ ಹೊಸ ಪಕ್ಷ ಸ್ಥಾಪನೆಗೊಂಡಿತು. ಜವಾಬ್ದಾರಿ ಸರ್ಕಾರದ ಹೋರಾಟಕ್ಕೆ ಅಣಿಯಾಯಿತು. ಇದು ತನ್ನನ್ನು ಭದ್ರಪಡಿಸಿಕೊಳ್ಳಬೇಕೆಂಬುದನ್ನು ಅರಿತು ರೈತರ ಸಂಘಟನೆಯನ್ನು ಪ್ರಾರಂಭಿದ್ದನ್ನು ತಿಳಿಯಬಹುದು (ದೇ.ಜ.ಗೌ., ಕಮಲೇಶ, ೨೦೦೩: ೪೩೩-೪೩೪).

೬. **ಪ್ರಜಾಮಿತ್ರ ಮಂಡಳಿ :** ೧೯ ಮತ್ತು ೨೦ನೆಯ ಶತಮಾನದಲ್ಲಿ ಭಾರತದಲ್ಲಿ ವಿಶೇಷವಾಗಿ ದಕ್ಷಿಣ ಭಾರತದಲ್ಲಿ ಹಲವಾರು ಸಾಮಾಜಿಕ ಸಂಘರ್ಷಗಳಾದವು. ಈ ಸಂಘರ್ಷಗಳಲ್ಲಿ ಪ್ರಮುಖವಾದವು ಬ್ರಾಹ್ಮಣೊತ್ತರ ಮತ್ತು ಹಿಂದುಳಿದ ವರ್ಗಗಳ ಚಳುವಳಿ ಹಾಗೂ ದಲಿತ ಚಳುವಳಿ. ಇವು ಸಮಾಜದಲ್ಲಿ ಪ್ರಭುತ್ವ ಸಾಧಿಸಿದ ಮೇಲ್ವರ್ಗಗಳ ವಿರುದ್ಧವಾಗಿಯೂ ನಡೆದವು. ದಕ್ಷಿಣ ಭಾರತದ ಇತರ ದೇಶಿ ಸಂಸ್ಥಾನಗಳಲ್ಲಿ ಬೆಳೆಯುವ ಹಿಂದುಳಿದ ವರ್ಗಗಳ ಚಳವಳಿ ಮೈಸೂರಿನಲ್ಲಿ ಬೆಳೆಯಿತು. ಈ ಹಿಂದುಳಿದ ವರ್ಗಗಳ ಚಳುವಳಿಗೆ ಕಾರಣ ಮೈಸೂರು ಸಂಸ್ಥಾನದಲ್ಲಿ ೧೮೮೧ ರಿಂದ ರಾಜ್ಯ ಸೇವೆಗೆ ನೇಮಕವಾದವರಲ್ಲಿ ಬಹುಪಾಲು ಬ್ರಾಹ್ಮಣವರ್ಗಕ್ಕೆ ಸೇರಿದವರೇ ಆಗಿದ್ದರು. ಕೆಳದರ್ಜೆ ಹುದ್ದೆಗಳಲ್ಲಿ ಮಾತ್ರ ಬ್ರಾಹ್ಮಣೇತರರಿದ್ದರು. ಈ ಕಾರಣದಿಂದ ಅಧಿಕಾರ ಮತ್ತು ಗೌರವಕ್ಕಾಗಿ ಹಿಂದುಳಿದ ವರ್ಗಗಳು ಒಟ್ಟಾಗಿ ಪ್ರಯತ್ನ ನಡೆಸಿದರು. ಬ್ರಾಹ್ಮಣೇತರರ ನಾಯಕತ್ವವನ್ನು ಸಿ.ಆರ್.ರೆಡ್ಡಿ ಮತ್ತು ಎಂ.ಬಸವಯ್ಯನವರು ಹಿಂದುಳಿದ ವರ್ಗಗಳ ವಿಧ್ಯಾಭ್ಯಾಸಕ್ಕಾಗಿ ಒಂದು ಲಕ್ಷ ರೂಪಾಯಿಗಳ ವಿಶೇಷ ಅನುದಾನವನ್ನು ತೆಗೆದಿಡುವ ನಿರ್ಣಯವನ್ನು ನ್ಯಾಯ ವಿಧೇಯಕ ಸಭೆಯಲ್ಲಿ ಮಂಡಿಸಿದಾಗ ನಿರ್ಣಯದ ಬಗ್ಗೆ ಚರ್ಚೆಗೆ ಆಗಿನ ಅಧ್ಯಕ್ಷರಾದ ದಿವಾಲರು

ಅವಕಾಶ ಮಾಡಿಕೊಡಲಿಲ್ಲ. ದಿವಾನರ ದಿವ್ಯಮೌನ ಹಿಂದುಳಿದ ವರ್ಗಗಳ ವಿರೋಧಿ ನೀತಿಯೆಂಬ ಟೀಕೆಗೆ ಒಳಗಾಯಿತು. ವಿಶ್ವೇಶ್ವರಯ್ಯನವರು ಮೈಸೂರು ಪಕ್ಷದವರು ಬಯಸಿದಂತೆ ಸರ್ಕಾರಿ ಸೇವೆಯನ್ನು ಬೇಡಿಕೆಗೆ ಒಪ್ಪಿ ಆಜ್ಞೆ ಹೊರಡಿಸಿದರೂ ಬ್ರಾಹ್ಮಣೇತರರು ಸಮಧಾನಗೊಳ್ಳದೆ ವಿಶ್ವೇಶ್ವರಯ್ಯನವರ ಯೋಜನೆಗಳು ಪಟ್ಟಣದ ವಿದ್ಯಾವಂತ ಬ್ರಾಹ್ಮಣರಿಗೆ ಮಾತ್ರವೆಂದು ಟೀಕಿಸಲಾರಂಭಿಸಿದರು. ಅವರನ್ನು ತೃಪ್ತಿಪಡಿಸಲೆಂಬಂತೆ ವಿಶ್ವೇಶ್ವರಯ್ಯನವರು ಕನಿಷ್ಟ ವಿದ್ಯಾರ್ಹತೆಯುಳ್ಳ ಬ್ರಾಹ್ಮಣೇತರರಿಗೆ ಸರ್ಕಾರಿ ಸೇವೆಯಲ್ಲಿ ಶೇಕಡಾ ಬ್ರಾಹ್ಮಣೇತರರು ಸಮಧಾನಗೊಳ್ಳಲಿಲ್ಲ. ಈ ಅಸಮಾಧಾನವೇ 'ಪ್ರಜಾಮಿತ್ರ ಮಂಡಲಿ' ಹುಟ್ಟಿಗೆ ಕಾರಣವಾಯಿತು.

ಪ್ರಜಾಮಿತ್ರ ಮಂಡಲಿಯು ಹಿಂದುಳಿದ ವರ್ಗಗಳ ಧ್ವನಿಯಾಗಿ, ಅವರ ಬೇಡಿಕೆಗಳನ್ನು ಮಂಡಿಸಲು ಸಮರ್ಥವಾದ ರಾಜಕೀಯ ವೇದಿಕೆಯಾಗಿತ್ತು. ತತ್ಪರಿಣಾಮವಾಗಿ ಪ್ರಪ್ರಥಮವಾಗಿ ಬ್ರಾಹ್ಮಣೇತರ ರಾಜಕೀಯ ಪಕ್ಷವಾಗಿ 'ಪ್ರಜಾಮಿತ್ರ ಮಂಡಲಿ'ಯು ೧೯೧೭ರಲ್ಲಿ ಅಸ್ತಿತ್ವಕ್ಕೆ ಬಂದಿತು. ಇದಕ್ಕೆ ಪ್ರೇರಣೆ ನೀಡಿದಂತದ್ದು ಮದರಾಸಿನಲ್ಲಿ ಇದೇ ಉದ್ದೇಶಕ್ಕಾಗಿ ಸ್ಥಾಪಿಸಿದಂತ ಜಸ್ಟೀಸಿ ಪಾರ್ಟಿ ಎಂಬ ಪಕ್ಷದ ಹಿಂದುಳಿದ ವರ್ಗಿಗಳಿಗಾಗಿ ಸ್ಥಾಪಿಸಿದಂತ ಈ ಪಕ್ಷದ ಪ್ರಮುಖ ಉದ್ದೇಶ ಸರ್ಕಾರಿ ಸೇವೆಯಲ್ಲಿ ಕೋಮುವಾರು ಮತ್ತು ಜಾತಿವಾರು ನ್ಯಾಯ ಸಂಪಾದಿಸುವುದಾಗಿತ್ತು. ಹಾಗೆಯೇ ಇದರ ಪ್ರಮುಖ ಬೇಡಿಕೆಗಳಾದ ಬ್ರಾಹ್ಮಣೇತರ ವಿದ್ಯಾರ್ಥಿಗಳಿಗೆ ಸ್ಕೂಲಿನಲ್ಲಿ ಫೀಜಿನಲ್ಲಿ ರಿಯಾಯಿತಿ, ಸಿವಿಲ್ ಸರ್ವಿಸ್‌ನಲ್ಲಿ ಸ್ಥಳ ಕಾಯ್ದಿರಿಸುವಕೆ, ಸ್ಕಾಲರ್‌ಷಿಪ್ ನೀಡಿ ಮುಂತಾದ ಬೇಡಿಕೆಗಳನ್ನು ಒಳಗೊಂಡಿತು. (ದೆ.ಜೆ.ಗೌ.ಕೆ.ಆರ್.ಕಮಲೇಶ, ೨೦೦೩ : ೨).

೭. ಮೈಸೂರು ರಾಜ್ಯದಲ್ಲಿ ಪ್ರಾರಂಭದಲ್ಲಿ ಪ್ರಜಾಪಕ್ಷವೆಂಬ ರಾಜಕೀಯ ಪಕ್ಷವಿತ್ತು ಆ ಪಕ್ಷವು ಮೈಸೂರು ಸರ್ಕಾರದ ಪರವಾಗಿದ್ದುಕೊಂಡು ಕಾಂಗ್ರೆಸ್ಸಿಗೆ ವಿರೋಧವಾಗಿತ್ತು. ಸರ್ ಮಿರ್ಜಾ ಅವರು ಮೈಸೂರು ರಾಜ್ಯದಲ್ಲಿ ರಾಷ್ಟ್ರೀಯ ಕಾಂಗ್ರೆಸ್ ತಲೆ ಎತ್ತದಂತೆ ಮಾಡಲಿಕ್ಕಾಗಿ ಎಷ್ಟೆಷ್ಟು ಪ್ರಯತ್ನಪಟ್ಟರೂ ಕೂಡ ರಾಜ್ಯದಲ್ಲಿ ಕಾಂಗ್ರೆಸ್ಸಿನ ಮೇಲೆ ಸಹಾನುಭೂತಿ ಹೆಚ್ಚಾಗುತ್ತಾ ಬಂತು. ಕಾಂಗ್ರೆಸ್ ಜನಪ್ರಿಯತೆಯನು ದಿನೇ ದಿನೇ ಗಳಿಸಿಕೊಳ್ಳುತ್ತಾ ಬಂದಿತ್ತು. ಇದನ್ನು ಗಮನಿಸಿದ ಪ್ರಜಾಪಕ್ಷದ ಬಹುಮಂದಿ ಸದಸ್ಯರು ತಮ್ಮ ಪಕ್ಷಕ್ಕೆ ಮುಂದೆ ಉತ್ತಮ ಭವಿಷ್ಯವಿಲ್ಲವೆಂಬುದನ್ನು ಮನಗಂಡು ಕಾಂಗ್ರೆಸ್ಸನ್ನು ಸೇರಬೇಕೆಂದು ನಿರ್ಧರಿಸಿದರು. ಈ ಸಂಬಂಧ ೧೯೩೭ನೇ ಅಕ್ಟೋಬರ್ ತಿಂಗಳಲ್ಲಿ ಪ್ರಜಾಪಕ್ಷದ ಬಹುಮಂದಿ ಸದಸ್ಯರು ಸೇರಿ ತಮ್ಮ ಪಕ್ಷ ಕಾಂಗ್ರೆಸ್ ಪಕ್ಷದೊಳಗೆ ವಿಲೀನವಾಗಬೇಕೆಂಬ ನಿರ್ಣಯ ಕೈಗೊಂಡರು (ಕಡಿದಾಳ್, ೧೯೯೦:೭೩-೭೫, ದೇಜಗೌ, ಕಮಲೇಶ್, ೨೦೦೩ : ೬-೭).

## ಅಧ್ಯಾಯ ೩

# ಭೂಹೋರಾಟದ ವಿವಿಧ ಮಜಲುಗಳು ಮತ್ತು ಹಿನ್ನೆಡೆ

ಪ್ರಸ್ತುತ ಅಧ್ಯಾಯದಲ್ಲಿ ಕಡಿದಾಳ್ ಮಂಜಪ್ಪ ಮತ್ತು ಭೂಹೋರಾಟದ ವಿವಿಧ ಮಜಲುಗಳನ್ನು ಕುರಿತು ಅಭ್ಯಾಸ ಮಾಡುವ ಪ್ರಯತ್ನ ಮಾಡಲಾಗಿದೆ. ಇಲ್ಲಿ ಮುಖ್ಯವಾಗಿ ಮಲೆನಾಡ ಗೇಣಿಧಾರ ಸಂಘ, ಸಾಗರ ತಾಲ್ಲೂಕು ರೈತಸಂಘ ಮತ್ತು ಕಾಗೋಡು ಚಳುವಳಿಯನ್ನ ಕುರಿತು ಅಭ್ಯಸಿಸಲಾಗುತ್ತದೆ. ಕಡಿದಾಳ್‌ರು ಕೈಗೊಂದ ಭೂಹೋರಾಟ ಹಂತಗಳು ಮೂರು ಅಂಶಗಳು ಪ್ರಧಾನವಾಗಿ ಮಲೆನಾಡ ಭಾಗವಾದ ಶಿವಮೊಗ್ಗ ಜಿಲ್ಲೆಯ ವ್ಯಾಪ್ತಿಗೆ ಸಂಬಂಧಪಟ್ಟದ್ದಾಗಿದೆ. ಈ ಅಂಶಗಳ ಮೂಲಕ ಕಡಿದಾಳ್ ಮಂಜಪ್ಪನವರು ಭೂಹೋರಾಟದಲ್ಲಿ ತೊಡಗಿದ ಭಿನ್ನ ಭಿನ್ನ ಮಾರ್ಗಗಳ ಬಗ್ಗೆ ಮತ್ತು ಅದರಿಂದ ಹಿಂದೆ ಸರಿಯಲು ಕಾರಣವಾದ ಅಂಶಗಳನ್ನು ಚರ್ಚಿಸಲಾಗಿದೆ.

ಮಲೆನಾಡ ಭಾಗದಲ್ಲಿನ ಭೂಹೋರಾಟಕ್ಕೆ ಅದರದೇ ಆದ ಒಂದು ವಿಶಿಷ್ಟತೆ ಇದೆ. ಶತಶತಮಾನಗಳಿಂದಲೂ ಭೂಮಾಲೀಕರ ದಬ್ಬಾಳಿಕೆ, ವಂಚನೆ ಮತ್ತು ಶೋಷಣೆಗೆ ತುತ್ತಾದವರು ಗೇಣಿದಾರರು. ಇವರು ತಮ್ಮ ಶ್ರಮದ ಗಳಿಕೆಯ ಫಲದಲ್ಲಿ ನ್ಯಾಯಯುತವಾದ ಪಾಲು ಪಡೆಯದವರಾಗಿದ್ದರು. ಆರ್ಥಿಕ, ಸಾಮಾಜಿಕ ಮತ್ತು ಶೈಕ್ಷಣಿಕ ಸವಲತ್ತುಗಳಲಿಲ್ಲದೆ, ಜೀತಗಾರಿಕೆಯಲ್ಲಿ ನರಳುತ್ತಿದ್ದ ಕಾಯಕಜೀವಿಗಳಾಗಿದ್ದರು. ಈ ಗೇಣಿದಾರ ವರ್ಗದ ಕುರಿತಂತೆ ಮಲೆನಾಡ ಭಾಗದಲ್ಲಿ ಮೊಟ್ಟಮೊದಲು ಚಿಂತನೆ ಮಾಡಿದವರು ಸ್ವತಃ ಗೇಣಿದಾರರ ಮಗನಾಗಿ ಜನಿಸಿದಂತಹ ಕಡಿದಾಳ್ ಮಂಜಪ್ಪನವರು. ಮಲೆನಾಡಿನ ಪ್ರದೇಶದ ಗೇಣೀದಾರರಲ್ಲಿ ಅನಕ್ಷರತೆ ಹೆಚ್ಚಾಗಿ ಕಂಡುಬರುತ್ತಿತ್ತು. ಇದರಿಂದ ಅವರಲ್ಲಿ ಸಂಘಟನಾ ಮನೋಭಾವನೆ ಬೆಳೆದಿರಲಿಲ್ಲ. ಇಂತಹ ಸನ್ನಿವೇಶದಲ್ಲಿ ಜನಪರವಾದ ಸಂಘಟನೆಯನ್ನು ಕೈಗೊಳ್ಳುವುದಾಗಲಿ, ಜನಜಾಗೃತಿಯುನ್ನು ಉಂಟು ಮಾಡುವುದಾಗಲಿ ಅಷ್ಟು ಸುಲಭದ ಕೆಲಸವಲ್ಲ. ಆದರೂ ಕಡಿದಾಳ್‌ರು ಮಲೆನಾಡ ಭಾಗದಲ್ಲಿ ಗೇಣಿದಾರರ ಸಂಘಟನೆಯನ್ನು ಹುಟ್ಟು ಹಾಕಿ, ಅವರ ಸ್ವಾತಂತ್ರ್ಯ ಮತ್ತು ಹಕ್ಕುಗಳ ಬಗ್ಗೆ ತಿಳಿಸಿ ಅವರಿಗೆ ಶೋಷಣೆಯ ವಿರುದ್ಧ ಚಳುವಳಿ ನಡೆಸುವಂತೆ ಸಜ್ಜುಗೊಳಿಸಿರುವುದು ಕಂಡುಬಂದಿದೆ.

ಮಲೆನಾಡು ಭಾಗದ ಕೆಳವರ್ಗದ ಜನರು ಶೋಷಣೆಗೆ ಒಳಗಾಗಲು ಮುಖ್ಯ ಕಾರಣವೆಂದರೆ ಕೃಷಿಗೆ ಸಂಬಂಧಪಟ್ಟ ಭೂಮಿಯೆಲ್ಲವೂ ಮೇಲ್ಜಾತಿಯ ಕೆಲವೇ ಜಮೀನ್ದಾರರಲ್ಲಿ ಹಂಚಿಹೋಗಿತ್ತು. ಅದರಲ್ಲೂ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ, ಸಾಗರ ಮತ್ತು ಹೊಸನಗರದ ಭಾಗದಲ್ಲಿ ಕೃಷಿಯ ಭೂಮಿಯು ಒಕ್ಕಲಿಗರು, ಬ್ರಾಹ್ಮಣರು ಮತ್ತು ಲಿಂಗಾಯಿತರ ಕೈಯಲ್ಲಿತ್ತು. ಉಳಿದ ವರ್ಗಗಳಾದ ದೀವರು, ಭೂಹೀನ ಒಕ್ಕಲಿಗರು, ಹರಿಜನರು ಅಂದರೆ ಶೇ.೮೦ಕ್ಕೂ ಹೆಚ್ಚು ಜನ ಭೂ ಒಡೆಯರನ್ನು

ಅವಲಂಬಿಸಿ ಬದುಕಬೇಕಾಗಿತ್ತು. ಇಂತಹ ಸಾಮಾಜಿಕ ಮತ್ತು ಆರ್ಥಿಕ ಅಸಮಾನತೆಯಲ್ಲಿ ಬದುಕುತ್ತಿದ್ದ ಗೇಣಿದಾರರ ಕುಟುಂಬಗಳಲ್ಲಿ ಅದರಲ್ಲಿಯೂ ಭೂಹೀನ ಒಕ್ಕಲಿಗ ಸಮುದಾಯದಲ್ಲಿ ಕಡಿದಾಳರ ಕುಟುಂಬವು ಒಂದಾಗಿತ್ತು. ಸ್ವತಃ ಭೂ ಒಡೆಯರ ಶೋಷಣೆಯನ್ನು ಅನುಭವಿಸಿದ ಕಡಿದಾಳ್‌ರು ಅಸಮಾನತೆಯ ವಿರುದ್ಧ ಹೋರಾಡಿರುವುದು ಕಂಡುಬಂದಿದೆ (ಕಡಿದಾಳ್, ೧೯೯೦:೧೫-೧೬), (ಕೀರ್ತಿನಾಥ, ೧೯೯೫:೨).

## ೩.೧. ಮಲೆನಾಡ ಗೇಣಿದಾರರ ಸಂಘ

ದೇಶದ ಅತಿಮುಖ್ಯ ಘಟಕವಾಗಿರುವ ರೈತನ ದುಡಿಮೆಯನ್ನು ಅಲಕ್ಷ್ಯ ಮಾಡಿ ಸಮಾಜದ ಇತರ ವ್ಯಕ್ತಿಗಳಿಗೆ ಸಿಗಬೇಕಾದಂತಹ ಸವಲತ್ತಿನಿಂದ ರೈತ ವಂಚಿತನಾದಾಗ ಅನಿವಾರ್ಯವಾಗಿ ರೈತರ ಸಂಘಟನೆಗಳನ್ನು ಮಾಡಿಕೊಳ್ಳುತ್ತಾರೆ. ಎರಡನೇ ಮಹಾಯುದ್ಧದ ಪೂರ್ವದಲ್ಲಿ ಟೆನೆನ್ಸಿ ಪದ್ಧತಿಯ ಕುರಿತ ಕಾಯ್ದೆ ಕಾನೂನುಗಳು ಭಾರತದ ಬೇರೆ ಬೇರೆ ರಾಜ್ಯಗಳಲ್ಲಿ, ಬೇರೆ ಬೇರೆ ರೀತಿಯಲ್ಲಿ ಜಾರಿಯಲ್ಲಿದ್ದವು. ಮಹಾರಾಷ್ಟ್ರ, ಕೇರಳ, ಗುಜರಾತ್ ಮುಂತಾದ ರಾಜ್ಯಗಳಲ್ಲಿ ಈ ಗೇಣಿಪದ್ಧತಿಯನ್ನು ಹೋಗಲಾಡಿಸಿ ಕೃಷಿ ಉತ್ಪನ್ನವನ್ನು ಹೆಚ್ಚಿಸಬಯಸಿದವು. ಆದರೆ ಮೈಸೂರು ರಾಜ್ಯದಲ್ಲಿ ಗೇಣಿ ಪದ್ಧತಿಯನ್ನು ಹೋಗಲಾಡಿಸುವ ಬದಲು ರೈತರ ಹಕ್ಕುಗಳನ್ನು ಕಸಿದುಕೊಳ್ಳಲಾಗುತ್ತಿತ್ತು. ಇಲ್ಲಿ ಬಹುಪಾಲು ವ್ಯವಸಾಯಗಾರರಿದ್ದರು. ಗೇಣಿದಾರರ ರಕ್ಷಣೆಗಾಗಿ ಮೈಸೂರು ಲ್ಯಾಂಡ್ ರೆವಿನ್ಯೂನಲ್ಲಿ ಕೆಲವು ನಿಬಂಧನೆಗಳು ಅಡಕವಾಗಿದ್ದರೂ ಕೂಡ ಆ ನಿಬಂಧನೆಗಳು ಪುಸ್ತಕದಲ್ಲಿದ್ದವೇ ಹೊರತು ವಾಸ್ತವಿಕವಾಗಿ ಅವುಗಳಿಂದ ಗೇಣಿದಾರರಿಗೆ ಯಾವ ರಕ್ಷಣೆಯೂ ದೊರೆತಿರಲಿಲ್ಲ (ಮಂಜಪ್ಪ, ೧೯೯೦:೧೨೩).

ಭೂಮಾಲೀಕರೆನಿಸಿಕೊಂಡಿದ್ದ ಆಗಿನ ಮೈಸೂರು ಸಂಸ್ಥಾನದ ಇನಾಮದಾರರು, ಸರದಾರರು, ಸಂಸ್ಥಾನದ ಜಹಗೀರದಾರರು, ಮುಂತಾದವರು ಗೇಣಿಗೆ ಜಮೀನನ್ನು ನೀಡಿದ್ದು, ಬಂದ ಫಸಲಿನಿಂದ ಹೆಚ್ಚಿನ ಉತ್ಪನ್ನ ಪಡೆಯುತ್ತಿದ್ದರು. ಎಕರೆಗೆ ಇಷ್ಟು ಚೀಲವೆಂದು ಅಥವಾ ಖಂಡುಗಗಳ ಲೆಕ್ಕದಲ್ಲಿ ಭತ್ತ ಕೊಡಬೇಕಾಗಿತ್ತು. ಇದೇ ಗೇಣಿ ಆಗಿತ್ತು. ಒಂದು ಚೀಲವೆಂದರೆ 'ಇಪ್ಪತ್ತು ಗಿದ್ನ', ಅರವತ್ತು ಸೇರು ಆಗಿತ್ತು (ಬೋರಲಿಂಗಯ್ಯ, ಹುಚ್ಚಪ್ಪ ಮಾಸ್ತರ, ೨೦೦೨:೩೧). ಒಂದು ವೇಳೆ ಗೇಣಿದಾರನು ಇದನ್ನು ವಿರೋಧಿಸಿ, ರೈತರು ಹೆಚ್ಚಿನ ಪಾಲನ್ನು ಕೇಳಿದರೆ ಅವರನ್ನು ಜಮೀನಿನಿಂದ ಹೊರಗೆ ಹಾಕಲಾಗುತ್ತಿತ್ತು. ತಲೆ ತಲಾಂತರಗಳಿಂದ ಅದೇ ಜಮೀನನ್ನು ಸಾಗುವಳಿ ಮಾಡುತ್ತಾ ಬಂದ ರೈತರಿಗೆ ಯಾವುದೇ ರೀತಿಯ ಸಂರಕ್ಷಣೆಯು ಇರಲಿಲ್ಲ. ಜೊತೆಗೆ ಇನ್ನೂ ಆತಂಕಕರವಾದ ಷರತ್ತುಗಳನ್ನು ಹಾಕುತ್ತಿದ್ದರು. ಸ್ಥಾನಿಕ ಸಂಪ್ರದಾಯಗಳಿಗೆ ಅನುಗುಣವಾಗಿ ಅವರ ನಾನಾ ರೀತಿಯ ಕರ-ತೆರಿಗೆಗಳನ್ನು ನೀಡಲೇಬೇಕಾಗಿತ್ತಲ್ಲದೆ, ಬಿಟ್ಟಿ ಕೆಲಸಗಳನ್ನು ಸಹ ಮಾಡಲೇಬೇಕಾಗಿತ್ತು. ಇದಲ್ಲದೆ ಗೇಣಿಯನ್ನು

ಆಗಿಂದಾಗೆ ಹೆಚ್ಚು ಮಾಡಿದರೂ ಸಹ ಹೆಚ್ಚಿನ ಗೇಣಿಯನ್ನು ನೀಡಲೇಬೇಕಿತ್ತು. ಇದರಿಂದಾಗಿ ರೈತನಿಗೆ ಭೂಮಿಯ ಉತ್ಪನ್ನವನ್ನು ವೃದ್ಧಿಸುವುದರಲ್ಲಿ ಆಸಕ್ತಿಯೂ ಉಳಿಯುತ್ತಿರಲಿಲ್ಲ. ಇದು ಆರ್ಥಿಕವಾಗಿ ಗೇಣಿದಾರರನ್ನು ಗುಲಾಮಗಿರಿಗೆ ತಳ್ಳಿದಂತಹ ಸ್ಥಿತಿಯಾಗಿತ್ತು. ಇದರಿಂದಾಗಿ ಗೇಣಿದಾರರು ತೀರ ಬಡತನವನ್ನು ಎದುರಿಸುತ್ತಿದ್ದರು.

ಗೇಣಿರೈತರು ಸಾಮಾಜಿಕವಾಗಿ ಹಿಂದುಳಿದವರಾಗಿದ್ದರು. ಅಲ್ಲಿ ಭೂಮಾಲೀಕರೇ ಉತ್ತಮರು, ಪ್ರತಿಷ್ಠಿತರು, ಅವರೇ ಸರಕಾರ, ಅವರೇ ನ್ಯಾಯಾಧೀಶರು. ಗೇಣಿದಾರರು ಸೊಂಟ ಬಗ್ಗಿಸಿ, ಸಲಾಂ ಹೊಡೆದು ಇವರ ಜೊತೆ ಬದುಕಬೇಕಿತ್ತು. ಭೂಮಾಲೀಕರು ಹೇಳಿದ ಹಾಗೆ ಕೇಳದೆ ಇದ್ದರೆ ಅವರು ಕೊಡುವ ಶಿಕ್ಷೆಯನ್ನು ಅನುಭವಿಸಬೇಕಿತ್ತು. ತಪ್ಪಿದಲ್ಲಿ ಅಂಥವರನ್ನು ಎಳೆದು ತಂದು ಮುಂದಿನ ಕಂಬಕ್ಕೆ ಕಟ್ಟಿ, ಚಾಟಿ ಏಟು ಕೊಡುತ್ತಿದ್ದರು. ಒಡೆಯರಿಗೆ ಎದುರುತ್ತರ ಕೊಟ್ಟರೆ ಅವರ ಜೀವನಕ್ಕೆ ಆಶ್ರಯವಾಗಿದ್ದ ಜಮೀನನ್ನು ಕಸಿದುಕೊಂಡು ಊರಿನಿಂದ ಓಡಿಸುತ್ತಿದ್ದರು. ಚಪ್ಪಲಿ ಹಾಕುವಂತಿರಲಿಲ್ಲ (ಚಂದ್ರಶೇಖರ್, ಕಾಗೋಡು ಒಂದು ನೆನಪು, ೨೦೦೭:೧). ಹಾಕಿದರೆ ಒಡೆಯರ ಮನೆ ಮುಂದಿನ ಸಾರ್ವಜನಿಕ ರಸ್ತೆ ದಾಟಿ ಹೋಗುವಾಗ ಚಪ್ಪಲಿಯನ್ನು ಕೈನಲ್ಲಿ ಹಿಡಿದು ದಾಟಿ ಹೋಗಬೇಕಿತ್ತಂತೆ. ಅವರ ಮನೆಯ ಜಗಲಿ ಹತ್ತುವಂತಿರಲಿಲ್ಲ, ಕೂರುವಂತಿರಲಿಲ್ಲ. ಇವರಿಗೆ ಊಟ ಹಾಕುವ ಸ್ಥಳ ಪಾದರಕ್ಷೆಗಳನ್ನು ಇಡುವ ಜಾಗದಲ್ಲಿ. ಊಟ ಮಾಡಿದ ನಂತರ ಆ ಜಾಗಕ್ಕೆ ಸಗಣಿ ಸಾರಿಸಿ, ಊಟ ಮಾಡಿದ ಎಲೆಯನ್ನು ಅವರ ಗೊಬ್ಬರದ ಗುಂಡಿಯಲ್ಲಿ ಆಳವಾಗಿ ಹುಗಿದು ಬರಬೇಕಿತ್ತಂತೆ. ಒಡೆಯರ ಮನೆಯಲ್ಲಿ ಹುಟ್ಟಿದ ಮಗುವಿಗೆ ಗೌರವ ಕೊಟ್ಟು, ಮಾತಾಡಿಸಬೇಕಿತ್ತು. ಏನು ಹಿಂಸೆ ಕೊಟ್ಟರೂ ಪ್ರಾಣಿಗಳಂತೆ ಸಹಿಸಿಕೊಳ್ಳಬೇಕಿತ್ತು. ಗೇಣಿ ರೈತರನ್ನು ಅತ್ಯಂತ ಹೀನಾಯವಾಗಿ ಕಾಣುತ್ತಿದ್ದರು (ಸಂದರ್ಶನ : ಕಾಗೋಡು ಗಣಪತಿಯಪ್ಪ, ೨೦-೦೫-೦೮).

ಕಡಿದಾಳ್ ಮಂಜಪ್ಪನವರು ಕೂಡ ಇಂತಹ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯಲ್ಲೇ ಬದುಕಿದ್ದವರು. ಹಾಗೆಯೇ ಮಲೆನಾಡಿನ ಜನರು ಮೌಢ್ಯತೆ ಮತ್ತು ಅನಕ್ಷರತೆಯಿಂದಾಗಿ, ಭೂಮಾಲೀಕರಿಂದ ಮೋಸ ಹೋಗುತ್ತಿದ್ದಂತಹ ಸ್ಥಿತಿಯನ್ನು ಸಹ ನೋಡಿದ್ದರು. ಇವರ ಇಂಥ ಸ್ವಭಾವವನ್ನೆ ಭೂ ಒಡೆಯರು ಚೆನ್ನಾಗಿ ಬಳಸಿಕೊಳ್ಳುತ್ತಿದ್ದರು. ಗೇಣಿಯನ್ನು ವಸೂಲಿ ಮಾಡುವಾಗ ಗೇಣಿದಾರರ ಕಷ್ಟ ಕಾರ್ಪಣ್ಯಗಳನ್ನು ಗಣನೆಗೆ ತೆಗೆದುಕೊಳ್ಳುತ್ತಿರಲಿಲ್ಲ. ಅವರಿಗೆ ಅನುಕೂಲವಾಗುವ ರೀತಿಯಲ್ಲಿ ಅಳೆಯುತ್ತಿದ್ದರು. ವಸೂಲಿಯ ನೆಪದಲ್ಲಿ ಗೇಣಿದಾರರನ್ನು ದೋಚುತ್ತಿದ್ದರು. ಹಿಂದಿನ ಅಧ್ಯಯನದಲ್ಲಿ ಹೇಳಿದ ಹಾಗೆಯೇ ವಸೂಲಿ ಮಾಡುವುದಕ್ಕಾಗಿ ಕೇರಳದಿಂದ ವಸೂಲಿ ಸಾಹೇಬರುಗಳನ್ನು ಕರೆಸುತ್ತಿದ್ದರು. ವಲಸೆ ಬಂದಿದ್ದ ಇವರನ್ನು ಕಂಡರೆ ಜನ ಭಯಪಡುತ್ತಿದ್ದರು. ಗೇಣಿ ಅಥವಾ ಸಾಲ ಬಾಕಿ ಇರುವವರು ಅವರನ್ನು ಕಂಡರೆ ಹೆದರುತ್ತಿದ್ದರು. "ಅಂದು ಮಲೆನಾಡಿನಲ್ಲಿ ಹಳ್ಳಿಯ ಜನರು ಒಂದು ವಿಧವಾದ

ಭಯೋತ್ಪಾದಕ ವಾತಾವರಣದಲ್ಲಿ ಬದುಕುತ್ತಿದ್ದರು" ಎಂಬುದಾಗಿ ಕಡಿದಾಳ್‌ರು ಮಲೆನಾಡಿನ ಸಾಮಾಜಿಕ ಸ್ಥಿತಿಯನ್ನು ತಿಳಿಸಿದ್ದಾರೆ (ಮಂಜಪ್ಪ, ೧೯೯೦:೧೬). ಇದಕ್ಕೆ ಪೂರಕವಾಗಿ ಗಣಪತಿಯಪ್ಪನವರ ಸಂದರ್ಶನ ಮಾಡಿದಾಗ ಮಾಹಿತಿ ದೊರೆತಿದೆ. ಈ ಎಲ್ಲ ಅಂಶಗಳನ್ನು ಗಮನಿಸಿದಾಗ ಕಡಿದಾಳ್‌ರು ಕೂಡ ಇಂತಹ ವಾತಾವರಣದಲ್ಲೇ ಬದುಕಿದ್ದು, ತನ್ನ ಜನರ ಬದುಕಿನ ನೋವನ್ನು ಅರಿತವರು. ಗೇಣಿದಾರರ ಸಾಮಾಜಿಕ ಆರ್ಥಿಕ ಹೀನಸ್ಥಿತಿಗೆ ಮೂಲ ಕಾರಣ ಭೂಒಡೆತನದ ಪದ್ಧತಿ ಸಮಾಜದಲ್ಲಿ ಇರುವುದು. ಶೋಷಣೆ ಒಂದು ಸಾಮಾಜಿಕ ಪದ್ಧತಿ. ಇದರ ದೋಷಗಳನ್ನು ಹುಡುಕಿ ಪರಿಹಾರ ಕಂಡುಹಿಡಿಯುವುದು, ಪರಿವರ್ತನೆಗೊಳಿಸುವುದು ಇದಕ್ಕೆ ಇರುವ ದಾರಿ. ಉತ್ಪಾದನೆ ಭೂಒಡೆಯರ ಕೈಯಲ್ಲಿದೆ. ದುಡಿಯುವವರ ಕೈಗಳಲಿಲ್ಲ. ರೈತರಲ್ಲಿ ಭೂಮಿ ನನ್ನದು ಎಂಬ ಭಾವನೆ ಬಂದರೆ ಮಾತ್ರ ಸರಿಯಾಗಿ ಮನಸ್ಸು ಕೊಟ್ಟು ದುಡಿಯುತ್ತಾರೆ ಎಂಬುದು ಕಡಿದಾಳ್‌ರ ಚಿಂತನೆಯಾಗಿತ್ತು. ಸಮಾಜದಲ್ಲಿ ಪರಿವರ್ತನೆಯನ್ನು ತರುವ ದಿಕ್ಕಿನಲ್ಲಿ ಅವರು ಇಟ್ಟ ಮೊದಲ ಹೆಜ್ಜೆ ಗೇಣಿದಾರರ ಸಂಘಟನೆ ಮಾಡುವುದು ಅಂದು ಅವರು ತಾಳಿದಂತಹ ಧೋರಣೆಯಾಗಿತ್ತು. ಗಾಂಧಿವಾದಿಗಳಾಗಿದ್ದ ಕಡಿದಾಳ್‌ರು ಗೇಣಿದಾರ ಮತ್ತು ಭೂಮಾಲೀಕರ ಮಧ್ಯ ಸಮಾನತೆಯನ್ನು ತರುವುದು ಅವರ ಮುಖ್ಯ ಉದ್ದೇಶವಾಗಿತ್ತು.

ವೃತ್ತಿ ಜೀವನದಿಂದ ಪ್ರಸಿದ್ಧಿಯನ್ನು ಪಡೆದ ಕಡಿದಾಳ್‌ರು ಮೈಸೂರು ರಾಜ್ಯದ ಕಾಂಗ್ರೆಸ್ ಸರ್ಕಾದಲ್ಲೂ ಕೂಡ ಗುರುತಿಸಿಕೊಂಡಿದ್ದರು. ಈ ಹಿನ್ನೆಲೆಯಲ್ಲಿ ಜನಪರ ನಾಯಕನಾಗಿ ಗೇಣಿದಾರರ ಸಂಕಷ್ಟದಲ್ಲಿ ಭಾಗವಹಿಸಲು ಸಹಕಾರಿಯಾಯಿತು. ಭೂಮಾಲೀಕರು ಗೇಣಿದಾರರಿಗೆ ಕೊಡುತ್ತಿದ್ದ ಹಿಂಸೆ ದಿನದಿನಕ್ಕೆ ಹೆಚ್ಚುತಿತ್ತು. ಗೇಣಿ ರೈತರನ್ನು ಒಕ್ಕಲೆಬ್ಬಿಸುವುದು ಅತಿಯಾಗಿತ್ತು. ಇದನ್ನು ನೋಡಿ ರೋಸಿ ಹೋದ ಕಡಿದಾಳ್‌ರು ೧೯೪೫ರಲ್ಲಿ 'ಮಲೆನಾಡು ಗೇಣಿದಾರರ ಸಂಘ'ವೆಂಬ ಹೆಸರಿನಲ್ಲಿ ಒಂದು ಸಂಘವನ್ನು ಹುಟ್ಟುಹಾಕಿದರು. ಕಡಿದಾಳ್‌ರೇ ಈ ಸಂಘದ ಅಧ್ಯಕ್ಷರು ಆಗಿದ್ದರು. ಇದಕ್ಕೆ ಪದಾಧಿಕಾರಿಗಳಾಗಿ ಬಸವಾನಿ ರಾಮಶರ್ಮರು[೧] ಕೂಡ ಇದ್ದರು. ಕಡಿದಾಳ್‌ರು ಭೂಒಡೆಯರಿಂದ ಗೇಣಿದಾರರ ಮೇಲೆ ಉಂಟಾಗುತ್ತಿದ್ದ ಶೋಷಣೆಯನ್ನು ತಡೆಯಲು ನಿರ್ಧರಿಸಿದ ಮೊದಲ ಹಂತವಾಗಿತ್ತು.

ಈ ಒಂದು ಸಂಘದ ವ್ಯಾಪ್ತಿಯನ್ನು ಪ್ರಾರಂಭದಲ್ಲಿ ತೀರ್ಥಹಳ್ಳಿ, ಹೊಸನಗರ, ಸಾಗರ ತಾಲ್ಲೂಕುಗಳಿಗೆ ಮಾತ್ರ ಸೀಮಿತಗೊಳಿಸಲಾಗಿತ್ತು. ಜಿ.ರಾಜಶೇಖರ್ ಅವರು ಪ್ರಕಾರ ನಂತರದ ದಿನಗಳಲ್ಲಿ ಈ ಸಂಘ ಪ್ರಸಿದ್ಧತೆಯನ್ನು ಪಡೆಯುವದರ ಜೊತೆಗೆ ಇದರ ವ್ಯಾಪ್ತಿ ವಿಸ್ತರಿಸಿ ಎಂಬುದಾಗಿ ತಿಳಿಸಿದ್ದಾರೆ. ಕಡಿದಾಳ್ ಮಂಜಪ್ಪನವರ ಪ್ರಭಾವದಿಂದ ಆಗಲೇ ಸುಮಾರು ೩,೦೦೦ ಜನ ಗೇಣಿದಾರ ಅಭಿಮಾನಿಗಳನ್ನು ಹೊಂದಿದಾಗಿ ಕಂಡುಬಂದಿದೆ ಎಂಬ ಅಂಶವನ್ನು ತಿಳಿಸಿದ್ದಾರೆ (ರಾಜಶೇಖರ, ೧೯೮೦:೩೪).

ಈ ಸಂಘಟನೆಯ ಮುಖ್ಯ ಉದ್ದೇಶ ಮಲೆನಾಡು ಪ್ರದೇಶದಲ್ಲಿ ವ್ಯಾಪಕವಾಗಿದ್ದ ಗೇಣಿದಾರರ ಸಮಸ್ಯೆಯನ್ನು ಚರ್ಚಿಸಿ ಅವುಗಳಿಗೆ ಪರಿಹಾರ ಬಯಸುವುದಾಗಿತ್ತು. ಇದಕ್ಕೆ ನಿದರ್ಶನವೆಂಬಂತೆ ಕಡಿದಾಳ್‌ರು ಭೂಮಾಲೀಕರಿಗೆ ಈ ರೀತಿಯ ಬೇಡಿಕೆಗಳನ್ನು ಇಡುತ್ತಾರೆ. ಅವುಗಳೆಂದರೆ

೧. ಕಾಲದಿಂದ ಕಾಲಕ್ಕೆ ಜಮೀನ್ದಾರರು ಗೇಣಿದಾರರಿಂದ ಪಡೆಯುವ ಗೇಣಿಯ ಪ್ರಮಾಣವನ್ನು ವ್ಯತ್ಯಾಸ ಮಾಡುತ್ತಿದ್ದರು. ಆದ್ದರಿಂದ ಗೇಣಿಯನ್ನು ಈ ಹಿಂದೆ ಬಿದನೂರಿನ ಶಿವಪ್ಪನಾಯಕನ ಕಾಲದಲ್ಲಿ ಜಾರಿಯಲ್ಲಿದ್ದಂತೆ ಜಮೀನಿನ ಒಟ್ಟು ಹುಟ್ಟುವಳಿಯಲ್ಲಿ 'ಮೂರನೇ ಒಂದು ಭಾಗಕ್ಕಿಂತ' ಹೆಚ್ಚಾಗಿರಕೂಡದೆಂದು ನಿಗಧಿಗೊಳಿಸಲಾಗಿತ್ತು.

೨. ಗೇಣಿ ಒಕ್ಕಲು ಮತ್ತು ಭೂಮಾಲೀಕರ ನಡುವೆ ಗೇಣಿ ನೆಲದ ಕರಾರುಪತ್ರವಿರಬೇಕು. ಭೂಮಾಲೀಕರು ಗೇಣಿ ಪಾವತಿ ಮಾಡಿದ್ದಕ್ಕೆ ರಶೀದಿಗಳನ್ನು ಕೊಡಬೇಕೆಂದು ನಿರ್ಧರಿಸಿದರು.

೩. ಮಠ, ದೇವಸ್ಥಾನಗಳ ಬ್ರಹ್ಮಸ್ವ, ಇನಾಂ ಜಮೀನುಗಳು, ಖಾಸಗೀ ಜಮೀನುಗಳ ಗೇಣಿ ಹರಾಜು ಪದ್ಧತಿಯನ್ನು ನಿಲ್ಲಿಸಬೇಕು.

೪. ಭೂಒಡೆಯರು ಒಕ್ಕಲುಗಳಿಂದ ವಿನಾಕಾರಣ ಭೂಮಿ ಬಿಡಿಸಿಕೊಳ್ಳುವುದು ನಿಲ್ಲಬೇಕು.

೫. ಗೇಣಿಯನ್ನು ಅಳೆಯುವಾಗ ಅಳತೆ ಮತ್ತು ತೂಕಗಳ ಪ್ರಮಾಣದಲ್ಲಿ ಒಂದು ನಿಯಮವಿರಬೇಕೆಂದೂ ತಿಳಿಸಿದರು (ಕಡಿದಾಳ್, ೧೯೯೦:೧೨೪), (ರಾಜಶೇಖರ್, ೧೯೮೦:೩೬).

ಈ ಎಲ್ಲ ಬೇಡಿಕೆಗಳು ಗೇಣಿದಾರರಿಗೆ ಸ್ವಲ್ಪಮಟ್ಟಿನ ಭದ್ರತೆಯನ್ನು ಒದಗಿಸಲು ನೆರವಾದವು. ಸಂಘದ ಸದಸ್ಯರ ಸಂಖ್ಯೆ ದಿನ ದಿನಕ್ಕೆ ಹೆಚ್ಚುತ್ತಿತ್ತು. ಈ ಸಂಘದಲ್ಲಿ ಕಡಿದಾಳ್‌ರೊಂದಿಗೆ ಬಸವಾನಿ ರಾಮಶರ್ಮ ಪ್ರಧಾನ ಕಾರ್ಯದರ್ಶಿಯಾಗಿದ್ದರು. ಇನ್ನೊಬ್ಬ ಕಾಂಗ್ರೆಸಿಗರಾದ ಎಂ.ರಾಮಕೃಷ್ಣಸ್ವಾಮಿಯವರು ಸಹಕಾರ್ಯದರ್ಶಿಗಳಾಗಿದ್ದರು. ಗೇಣಿದಾರ ಸಂಘದ ಸಭೆಗಳನ್ನು ಹಳ್ಳಿಗಳಲ್ಲಿ ಮತ್ತು ತಾಲ್ಲೂಕುಗಳಲ್ಲಿ ನಡೆಸುವುದರ ಜೊತೆಗೆ ಕರಪತ್ರಗಳನ್ನು ಹೊರಡಿಸುತ್ತಿದ್ದರು. ಕಡಿದಾಳ್‌ರು ವಕೀಲರಾಗಿದ್ದರಿಂದ ಸ್ವತಃ ಗೇಣಿದಾರರಿಗೆ ಉಂಟಾಗಿದ್ದ ಸಮಸ್ಯೆಯನ್ನು ಬಗೆಹರಿಸಲು ಅವರ ಕೈಯಲ್ಲೇ ಕೇಸುಗಳನ್ನು ಹಾಕಿಸುತ್ತಿದ್ದರು. ಆ ಕೇಸುಗಳನ್ನು ನಡೆಸಿ ನ್ಯಾಯ ದೊರಕಿಸಿಕೊಡುತ್ತಿದ್ದರು. ಭೂಮಾಲೀಕರು ಕೆಲವೊಮ್ಮೆ ಕಡಿದಾಳ್‌ರ ಕಾರ್ಯ ಚಟುವಟಿಕೆಗೆ ಅಡ್ಡಿಪಡಿಸುತ್ತಿದ್ದರೂ ಕೂಡ ಬಿಡದೇ ಗೇಣಿದಾರರಲ್ಲಿ ಜಾಗೃತಿಯನ್ನು ಉಂಟುಮಾಡಿ ಸಂಘಟಿಸುತ್ತಿದ್ದರು.

ಗೇಣಿದಾರರ ಸಂಘಟನೆ ಬಲಗೊಂಡಂತೆ ಪ್ರಮುಖ ವ್ಯಕ್ತಿಗಳನ್ನು ಕರೆಸಿ ಸಭೆಗಳನ್ನು ನಡೆಸಲಾಗುತ್ತಿತ್ತು. ಈ ಸಂಘದ ಮೊದಲ ಸಭೆಯನ್ನು ಸಂಘ ಸ್ಥಾಪನೆಯಾದ 'ತೀರ್ಥಹಳ್ಳಿ'ಯಲ್ಲಿ ೧೯೪೭ರಲ್ಲಿ ನಡೆಯಿತು. ಸಮಾಜವಾದಿ ತತ್ವದಲ್ಲಿ ನಂಬಿಕೆಯಿಟ್ಟಂತಹ ಕಡಿದಾಳ್‌ರು ಸಮಾಜವಾದಿ ಮುಖಂಡರನ್ನು ಸಭೆಗೆ ಕರೆಸಿದರು. 'ಕಮಲಾದೇವಿ ಚಟ್ಟೋಪಾಧ್ಯಾಯ'ರು ಸಭೆಯನ್ನು ಉದ್ಘಾಟನೆ ಮಾಡಿದರು. ಇನ್ನೊಬ್ಬ ಪ್ರಮುಖ ಸಮಾಜವಾದಿ ದುರೀಣರಾದ 'ರಮಾನಂದ ಮಿಶ್ರ'ರು ಭಾಗವಹಿಸಿದ್ದರು (ರಾಜಶೇಖರ, ೧೯೮೦:೩೪). ಈ ಸಭೆಯಲ್ಲಿ ಕಡಿದಾಳ್‌ರ ಹಾಗೆ ಗೇಣಿದಾರರ ಬಗ್ಗೆ ಸಹಾನುಭೂತಿಯ ಧೋರಣೆಯನ್ನು ಹೊಂದಿದ 'ಶಾಂತವೇರಿ ಗೋಪಾಲಗೌಡರು' ಭಾಗವಹಿಸಿದ್ದರು. ಕಡಿದಾಳ್‌ರು ಈ ರೀತಿಯಾಗಿ ಸಂಘದ ಸಭೆಯನ್ನು ನಡೆಸುತ್ತಿದ್ದರಿಂದ ಗೇಣಿದಾರರಲ್ಲಿ ಆತ್ಮಸ್ಥೈರ್ಯ ಉಂಟಾಗಿ ಭೂಮಾಲೀಕರನ್ನು ಅವಲಂಬಿಸಿ ಬದುಕುವಂತ ಸ್ಥಿತಿಯನ್ನು ಕಡಿಮೆ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದರು.

ಕಡಿದಾಳ್‌ರು ಕಟ್ಟಿದಂತಹ ಈ ಸಂಘಟನೆಯ ಇನ್ನೊಂದು ಮುಖ್ಯ ವೈಶಿಷ್ಟ್ಯವೆಂದರೆ ಭೂಮಾಲೀಕರು ಕೂಡ ಈ ಸಂಘಟನೆಯ ಸದಸ್ಯರಾಗಿದ್ದರು. ಗೇಣಿದಾರ ಸಭೆಗಳಲ್ಲಿ ಅಧ್ಯಕ್ಷರಾಗಿದ್ದವರು ಮತ್ತು ಅತಿಥಿಗಳಾಗಿ ಬಂದು ಭಾಷಣ ಮಾಡುತ್ತಿದ್ದವರು ಬಹುತೇಕ ಕಾಂಗ್ರೆಸ್ ಮುಖಂಡರು. ಅವರೆಲ್ಲ ಭಾರೀ ಭೂಮಾಲೀಕರೂ ಆಗಿದ್ದರು. ಆದರೆ ಮಂಜಪ್ಪನವರು ಸಾಮಾನ್ಯ ಗೇಣೀದಾರನ ಮಗನಾಗಿದ್ದು, ಭೂಮಾಲೀಕ ಮತ್ತು ಗೇಣಿದಾರ ಇಬ್ಬರಿಗೂ ಅನ್ಯಾಯವಾಗದಂತೆ ಭೂ ಸಮಸ್ಯೆ ರಾಜಿ ಮಾರ್ಗದಲ್ಲಿ ಇತ್ಯಾರ್ಥಪಡಿಸಲು ಪ್ರಯತ್ನಿಸಿದ್ದು ಕಂಡುಬಂದಿದೆ. ಗೇಣಿದಾರ ಸಂಘದಲ್ಲಿದಂಥ ಪ್ರಮುಖ ಭೂಮಾಲೀಕರೆಂದರೆ ಕಾಸರವಳ್ಳಿ ಮನೆತನದವರು. ಕಾಗೋಡು ಗೌಡರು, ಬರದವಳ್ಳಿ ಗೌಡರು, ಬದರೀನಾರಾಯಣ, ಕಾಂಗ್ರೆಸ್ ಮಂತ್ರಿಗಳು, ಜಿಲ್ಲಾ ತಾಲ್ಲೂಕು ಮಟ್ಟದ ಕಾಂಗ್ರೆಸ್ ಧುರೀಣರು ಈ ಸಭೆಗಳಲ್ಲಿ ಭಾಗವಹಿಸುತ್ತಿದ್ದರು. ಮಲೆನಾಡ ಗೇಣಿದಾರ ಸಂಘವು ೧೯೪೭ರಲ್ಲಿ ಮೈಸೂರು ಸೊಸೈಟಿಗಳ ರಿಜಿಸ್ಟ್ರೇಷನ್ ಆ್ಯಕ್ಟ್(೧೯೬೪) ಪ್ರಕಾರ ರಿಜಿಸ್ಟರ್ ಕೂಡ ಆಗಿತ್ತು (ವೆಂಕಪ್ಪಗೌಡ, ೨೦೦೧ : ೬೪,೬೫).

ಕಡಿದಾಳ್‌ರ ಶ್ರಮದಿಂದ ಸಂಘಟನೆಯು ಎಲ್ಲ ಕಡೆಯಲ್ಲೂ ಪ್ರಚಾರವಾಗಿತ್ತು. ತೀರ್ಥಹಳ್ಳಿಯ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಸಭೆ ನಡೆಸುತ್ತಿದ್ದರು. 'ತೂದೂರಿನಲ್ಲಿ' ಭೂ ಸಮಸ್ಯೆ ಕುರಿತಂತೆ ಒಂದು ಬಹಿರಂಗ ಸಭೆಯನ್ನು ಕರೆದಿದ್ದರು. ಈ ಸಭೆಯಲ್ಲಿ ಕಡಿದಾಳ್‌ರೊಂದಿಗೆ ಶಾಮ ಐತಾಳರು, ಸದಾಶಿವ ರಾಯರು ಇದ್ದರು. ಈ ಬಹಿರಂಗ ಸಭೆಯನ್ನು ಕರೆದಿದ್ದರ ಮುಖ್ಯ ಉದ್ದೇಶವೆನೆಂದರೆ, ಮಠಾಧೀಶರು ಮತ್ತು ಜಮೀನ್ದಾರರು ಆ ಭಾಗದ ಜಮೀನುಗಳೆಲ್ಲವನ್ನು ತಮ್ಮ ವಶದಲ್ಲಿ ಇಟ್ಟುಕೊಂಡು ಭಾರೀ ಜಮೀನುಗಳ ಖಾತೆದಾರರಾಗಿದ್ದರು. ಒಬ್ಬೊಬ್ಬ ಜಮೀನ್ದಾರನು ನಾನೂರು, ಐನೂರು ಎಕರೆ ತಲಾ ಜಮೀನನ್ನು, ಕೆಲವು ಅಡಿಕೆ ತೋಟಗಳನ್ನು ಹೊಂದಿದ್ದು ಗೇಣಿಗೆ ಕೊಡುತ್ತಿದ್ದರು. ಅಲ್ಲದೆ ಅಲ್ಪಸ್ವಲ್ಪ ಜಮೀನನ್ನು ಹೊಂದಿದ್ದ ಸಣ್ಣ ಹಿಡುವಳಿದಾರರಿಗೆ ಭೂ ಒಡೆಯರು ಸಾಲವನ್ನು ಕೊಟ್ಟು ಅವರಿಗೆ

ಕೊಡಲಿಕ್ಕೆ ಆಗದೆ ಇದ್ದಾಗ ರೈತರಲ್ಲಿ ಇದ್ದಂತಹ ಒಂದು, ಎರಡು ಎಕರೆ ಜಮೀನನ್ನು ತಮ್ಮ ವಶಕ್ಕೆ ತೆಗೆದುಕೊಳ್ಳುತ್ತಿದ್ದರು. ಸಣ್ಣ ಹಿಡುವಳಿದಾರರು ಮೋಸ ಹೋಗದಂತೆ ಎಚ್ಚೆತ್ತುಕೊಳ್ಳುವುದಕ್ಕಾಗಿ ಇಂತಹ ಸಭೆಯನ್ನು ಕರೆಯುತ್ತಿದ್ದರು (ಪುಟ್ಟಣ್ಣ, ೧೯೯೪:೨೫೪-೨೬೫). ಹೀಗೆ ಅನೇಕ ಕಡೆಗಳಲ್ಲಿ ಸಭೆಯನ್ನು ಕರೆದು ಗೇಣಿದಾರರ ಪರ ಸಭೆಗಳಲ್ಲಿ ಮಾತನಾಡುತ್ತಿದ್ದರು. ಗೇಣಿದಾರರನ್ನು ಭೂಮಾಲೀಕರು ಭೂಮಿಯಿಂದ ಉಚ್ಚಾಟನೆ ಮಾಡುವುದನ್ನು ಪ್ರತಿಭಟಿಸುತ್ತಿದ್ದರು. ಹೀಗೆ ಈ ಸಭೆ ದಿನದಿಂದ ದಿನಕ್ಕೆ ಪ್ರಸಿದ್ಧತೆಯನ್ನು ಪಡೆದಿತ್ತು.

ಗೇಣಿದಾರ ಸಂಘ ಕುರಿತಂತೆ ಜಿ.ರಾಜಶೇಖರ ಅವರು ಮಲೆನಾಡ ಭಾಗದಲ್ಲಿ ಭೂಸಮಸ್ಯೆಯನ್ನು ಇತ್ಯರ್ಥಪಡಿಸಲು ಆ ಸಮಯದಲ್ಲಿ ಇದ್ದ ಸಂಘಟನೆಯೆಂದರೆ ಕಡಿದಾಳ್‌ರು ಸ್ಥಾಪಿಸಿದ ''ಮಲೆನಾಡಿನ ಗೇಣಿದಾರರ ಸಂಘ'' ಒಂದೇಯಾಗಿತ್ತು ಎಂಬ ಅಂಶ ವ್ಯಕ್ತಪಡಿಸಿದ್ದಾರೆ. ಮುಂದೆ ಸಾಗರದಲ್ಲಿ ಪ್ರಾರಂಭಿಸಿದ ರೈತ ಸಂಘಕ್ಕೂ ಇದರ ಪ್ರೇರಣೆಯಾಯಿತು. ಮಲೆನಾಡಿನ ಸಂಘ ಮೊಟ್ಟ ಮೊದಲು ಸ್ಥಾಪನೆಯಾದದ್ದು ಎನ್ನುವ ವಿಚಾರ ಗಮನಾರ್ಹವಾದುದು. ಈ ಸಂಘಟನೆ ಕುರಿತಂತೆ ಶಿವಮೊಗ್ಗ ಜಿಲ್ಲೆಯಲ್ಲಿ ಗೇಣಿದಾರರ ಸಂಘಟನೆ ಬೆಳೆಯುವುದಕ್ಕೆ ಮತ್ತು ಅದಕ್ಕೆ ಒಂದು ಶಕ್ತಿ ಬರುವ ಹಾಗೆ ಆಗುವುದಕ್ಕೆ ಕಡಿದಾಳ್‌ರೇ ಕಾರಣವಾಗಿದ್ದರು (ರಾಜಶೇಖರ್, ೧೯೮೦:೩೬-೩೭). ಹಾಗೂ ಕಡಿದಾಳ್‌ರು ಮಲೆನಾಡ ಗೇಣಿದಾರರ ಸಂಘದೊಂದಿಗೆ ಸಾಗರದ ರೈತ ಸಂಘವನ್ನು ಸೇರಿಸಿ, ಮಲೆನಾಡ ರೈತಸಂಘವೆಂದು ಪರಿವರ್ತಿಸುತ್ತಾರೆ. ಈ ಸಂಘಟನೆಯು ಕೊನೆಯವರೆಗೆ ರೈತರಪರ ಹೋರಾಡಿದ್ದು ಕಂಡುಬಂದಿದೆ (ಮಲೆನಾಡ ರೈತ ಸಂಘಕ್ಕೆ ಸಂಬಂಧಿಸಿದಂತೆ ಮುಂದಿನ ಭಾಗದಲ್ಲಿ ತಿಳಿಯಬಹುದು).

## ೩.೨. ಸಾಗರ ತಾಲ್ಲೂಕು ರೈತ ಸಂಘ

ಸಾಗರ ತಾಲ್ಲೂಕು ರೈತ ಸಂಘ ಮೊದಲು ಯಾವುದೇ ರಾಜಕೀಯ ಪ್ರಭಾವ ಇಲ್ಲದೆ, ಬರೀ ಮಲೆನಾಡಿನ ದೀವರ ಜಾತಿಯನ್ನು ಪ್ರತಿನಿಧಿಸುವ ಸಂಘಟನೆ ಆಗಿತ್ತು. ಇದು ಸಾಗರ ತಾಲ್ಲೂಕಿಗೆ ಮಾತ್ರ ಸೀಮಿತವಾಗಿತ್ತು. ಈ ಸಂಘಕ್ಕೆ ಮೊದಲು 'ದೀವರ ಸಂಘ'ವೆಂದು ಕರೆಯುತ್ತಿದ್ದರು. ಸಂಘ ದೀವರ ಜಾತಿಯವರಿಗೆ ಸಂಬಂಧಪಟ್ಟದ್ದಾದರೂ ವಾಸ್ತವವಾಗಿ ಅದು ಆ ಪ್ರದೇಶದ ಗೇಣಿದಾರರ ಸಂಘವೇ ಆಗಿತ್ತು. ಕಾರಣ ಈ ಪ್ರದೇಶದ ಗೇಣಿದಾರರಲ್ಲಿ ಮತ್ತು ಗೇಣಿ ಜಮೀನನ್ನೇ ನಂಬಿಕೊಂಡು ಬದುಕುವವರಲ್ಲಿ ಬಹುಪಾಲು ಹೆಚ್ಚು ಜನ ದೀವರ ಜಾತಿಯವರಾಗಿದ್ದರು ಎಂದು ಜಿ.ರಾಜಶೇಖರ್ ಅವರು ಅಭಿಪ್ರಾಯಪಟ್ಟಿದ್ದಾರೆ (ರಾಜಶೇಖರ್, ೧೯೮೦:೫೪-೫೫), (ಸಂದರ್ಶನ : ಗಣಪತಿಯಪ್ಪ ೨೦.೦೫.೨೦೦೮).

ಈ ಸಂಘ ಸ್ಥಾಪನೆಯಾಗಲು ಕಾರಣವಾದ ಪ್ರಮುಖ ವ್ಯಕ್ತಿ ಗಣಪತಿಯಪ್ಪ.[೨] ಆರಂಭದಲ್ಲಿ ಜಾತೀಯ ಮಮತೆ ಹೊತ್ತು, ತನ್ನ ಸ್ವಂತ ಬದುಕಿನ ನೋವಿನ ಹಿನ್ನೆಲೆಯಲ್ಲಿ ಸಂಘವನ್ನು ಕಟ್ಟಿದ್ದರು.

ಸಾಗರದಲ್ಲಿ ಆಗಿನ ಸ್ಥಿತಿಯಲ್ಲಿ ಮೇಲ್ಜಾತಿಯವರೆನಿಸಿದ ಬ್ರಾಹ್ಮಣರು ಮತ್ತು ಲಿಂಗಾಯತರು ಭೂಮಾಲೀಕರಾಗಿದ್ದರು. ಇವರಿಗೆ ದೀವರು ಜೀತದಾಳಾಗಿದ್ದರು. ದೀವರಿಗೆ ಸಮಾಜದಲ್ಲಿ ಯಾವುದೇ ಸ್ಥಾನಮಾನಗಳಿರಲಿಲ್ಲ. ಇವರನ್ನು ಪ್ರಾಣಿಗಳಿಗಿಂತ ಕೀಳಾಗಿ ನಡೆಸಿಕೊಳ್ಳುತ್ತಿದ್ದರು. ಗಣಪತಿಯಪ್ಪನವರು ದೀವರ ಜಾತಿಗೆ ಸೇರಿದವರಾಗಿದ್ದು, ಜಮೀನ್ದಾರರಿಂದ ಶೋಷಣೆಯ ನೋವನ್ನು ಅನುಭವಿಸಿದ್ದರು. ಈ ಹಿನ್ನೆಲೆಯಲ್ಲಿ ಗಣಪತಿಯಪ್ಪನವರು ಸಂಘ ಸ್ಥಾಪಿಸಿದರು ಎಂದು ತಿಳಿದುಬರುತ್ತದೆ (ವೆಂಕಪ್ಪಗೌಡ, ೨೦೦೧:೩೬).

ಈ ಹಿಂದೆ ಹೇಳಿದ ಹಾಗೆ ದೀವರ ಸಂಘ ಸ್ಥಾಪನೆಯಾಗುವುದಕ್ಕಿಂತಲೂ ಮೊದಲು ಕಡಿದಾಳ್‌ರು ತೀರ್ಥಹಳ್ಳಿಯ ಮಲೆನಾಡ ಗೇಣಿದಾರ ಸಂಘವನ್ನು ಸ್ಥಾಪನೆ ಮಾಡಿದ್ದರು. ಮಲೆನಾಡ ಗೇಣಿದಾರ ಸಂಘದಲ್ಲಿ ಗಣಪತಿಯಪ್ಪನವರು ಕೂಡ ಆ ಸಂಸ್ಥೆಯ ಸದಸ್ಯರಾಗಿದ್ದರು. ಸಾಗರದಲ್ಲಿ ಜಮೀನ್ದಾರರಿಂದ ಶೋಷಣೆಗೆ ಒಳಗಾದ ಗೇಣಿದಾರರಿಗೆ ಕಡಿದಾಳ್‌ರು ಒಂದು ಬಲವಾದ ಸಂಘಟನೆಯನ್ನು ಪ್ರಾರಂಭಿಸಬೇಕೆಂದು ಯೋಚಿಸಿದ್ದರು. ಈ ಹಿನ್ನೆಲೆಯಲ್ಲಿ ಗಣಪತಿಯಪ್ಪ ಅವರೊಂದಿಗೆ ಸಮಾಲೋಚಿಸಿ, ಈಗಾಗಲೇ ಸ್ಥಾಪನೆಯಾದಂತ ದೀವರ ಸಂಘವನ್ನು ೧೯೪೭ರಲ್ಲಿ "ಸಾಗರದ ರೈತ ಸಂಘ"ವೆಂಬ ಹೆಸರಿನಲ್ಲಿ ಗೇಣಿದಾರ ಸಂಘ ಹುಟ್ಟು ಹಾಕಿದರು. ಇದು ಮಲೆನಾಡ ಗೇಣಿದಾರ ಸಂಘದ ಅಧೀನದಲ್ಲೇ ಇತ್ತು. ಅಲ್ಲಿಯವರೆಗೆ ಬರೀ ಜಾತಿಗೆ ಮಾತ್ರ ಸೀಮಿತವಾದಂತ ಮಲೆನಾಡಿನ ಗೇಣಿ ಸಂಘವು ನಂತರ ರಾಜಕೀಯ ವ್ಯಕ್ತಿಗಳೊಂದಿಗೆ ಸಂಪರ್ಕ ಪಡೆಯಿತು. ಕಾಂಗ್ರೆಸ್‌ನ ನಾಯಕರು, ಬಹು ದೊಡ್ಡ ಭೂಮಾಲೀಕರು ಇದರ ಸದಸ್ಯತ್ವ ಪಡೆದರು. ಸಾಗರದ ಸುತ್ತಮುತ್ತ ಇರುವಂತಹ ಭೂಮಾಲೀಕರಾದ ಕೆ.ಜಿ.ಒಡೆಯರ, ಆನಂದಪುರದ ಬದ್ರಿನಾರಾಯಣ್, ಅಯ್ಯಂಗಾರ್, ಬರದಹಳ್ಳಿ ಚೆನ್ನಬಸಪ್ಪಗೌಡರು, ಮರೂರು ರುದ್ರಪ್ಪಗೌಡರು, ಶಿರವಂತೆ ವೀರಭದ್ರಪ್ಪ ಗೌಡರು ಸೇರಿದಂತೆ ಮುಂತಾದವರು ಈ ಸಂಘಟನೆಯಲ್ಲಿ ಸಕ್ರಿಯರಾಗಿದ್ದರು. ಕಾಂಗ್ರೆಸ್ ನಾಯಕರಾದ ದೇವಪ್ಪನವರು ಕಾಂಗ್ರೆಸ್ ಸೀತಾರಾಮ ಅವರು ಇದ್ದರು. ಕಡಿದಾಳ್‌ರೊಂದಿಗೆ ಅಧ್ಯಕ್ಷರಾದ ಡಿ.ಮೂಕಪ್ಪ[೩] ಮತ್ತು ಕಾರ್ಯದರ್ಶಿಯಾದ ಗಣಪತಿಯಪ್ಪನವರ ಶ್ರಮದಿಂದಾಗಿ ದಿನದಿನಕ್ಕೆ ಈ ಸಂಘಕ್ಕೆ ಸದಸ್ಯರು ಹೆಚ್ಚಿದರು (ವೆಂಕಪ್ಪಗೌಡ, ೨೦೦೧:೩೭).

### ಸಂಘಟನೆಯ ವಿಚಾರಗಳು

ರೈತ ಸಂಘದ ಮೊದಲ ಸಭೆಯನ್ನು ೧೯೪೮ರಲ್ಲಿ 'ಮರತ್ತೂರಿ'ನಲ್ಲಿ ನಡೆಸಿದರು. ಸಾಗರದ ವಕೀಲರಾದ ಮೃತ್ಯುಂಜಯ ಬಾಪಟೆ ಅಧ್ಯಕ್ಷತೆಯನ್ನು ವಹಿಸಿದ್ದರು. ಈ ಸಭೆಗೆ ಸುಮಾರು ೫೦೦ ಜನ ಸೇರಿದ್ದರು. ಜಿ.ರಾಜಶೇಖರ ಅವರ ಅಭಿಪ್ರಾಯದಲ್ಲಿ "ಈ ಸಂಘ ಯಾವುದೇ ಧಾರ್ಮಿಕ ಆಚರಣೆಗೆ ಸಂಬಂಧಪಡದ ಒಂದು ಸಭೆಗೆ ಈ ತಾಲ್ಲೂಕಿನ ದೀವರು ಇಷ್ಟು ದೊಡ್ಡ ಸಂಖ್ಯೆಯಲ್ಲಿ ಸೇರಿದ್ದೇ ಬಹುಶಃ ಮೊದಲ ಬಾರಿಗೆ" ಎಂದಿದ್ದಾರೆ (ರಾಜಶೇಖರ್, ೧೯೮೦:೫೯). ಸಾಗರದ ರೈತಸಂಘದ

ಬೇಡಿಕೆಗಳೂ ಮಲೆನಾಡು ಗೇಣಿದಾರ ಸಂಘದ ಬೇಡಿಕೆಯ ಮಾದರಿಯಲ್ಲೇ ಇದ್ದವು (ತೀರ್ಥಹಳ್ಳಿ ಗೇಣಿದಾರ ಸಂಘದಲ್ಲಿ ಈ ಅಂಶ ಒಳಗೊಂಡಿದೆ). ಆದರೆ ಇವರ ಇನ್ನೊಂದು ಪ್ರಮುಖ ಬೇಡಿಕೆಯೆಂದರೆ ಗೇಣಿದಾರರಿಗೆ ವನ್ಯ ಮೃಗಗಳಿಂದ ತಮ್ಮ ಪೈರು ರಕ್ಷಿಸಿಕೊಳ್ಳಲು ಬಂದೂಕು ಲೈಸೆನ್ಸ್ ಕೊಡಬೇಕೆಂದು ಸರಕಾರವನ್ನು ಕೋರಿದ್ದೆವು ಎಂಬುದಾಗಿ ಗಣಪತಿಯಪ್ಪನವರು ತಿಳಿಸಿದ್ದಾರೆ. ಸಂಘವು ದಿನದಿಂದ ದಿನಕ್ಕೆ ಬೆಳೆಯುತ್ತಿದ್ದಂತೆ ಸಂಘದ ಪ್ರಮುಖರಾದ ಗಣಪತಿಯಪ್ಪ ರೈತ ಸಂಘಟನೆಗಾಗಿ ರಾಜ್ಯ, ಜಿಲ್ಲೆ, ತಾಲ್ಲೂಕು ಮಟ್ಟದ ರೈತ ಹಿತೈಷಿ ನಾಯಕರನ್ನು ಕಂಡು, ಅವರನ್ನು ಕರೆಸಿ ರೈತ ಸಭೆಗಳ ಮೂಲಕ ಭಾಷಣ ಮಾಡಿಸಿ, ರೈತ ಸಮೂಹವನ್ನು ಹುರಿದುಂಬಿಸಿ, ಜಾಗೃತಗೊಳಿಸಿ ವಿಚಾರವಂತನ್ನಾಗಿಸಿ, ರೈತರನ್ನು ಅಭೂತಪೂರ್ವವಾಗಿ ಸಂಘಟಿಸಿದರು. ಅಂದು ಬಡರೈತರು, ಗೇಣಿದಾರರು ತಮ್ಮ ಅಸ್ತಿತ್ವಕ್ಕಾಗಿ ಸಂಘಟನೆಗೊಂಡು ಹೋರಾಡಲೇಬೇಕಾದಂತಹ ಕಾಲವಾಗಿತ್ತು ಎಂಬುದಾಗಿ ಕಡಿದಾಳ್‌ರು ತಮ್ಮ ಆತ್ಮಕಥೆಯಲ್ಲಿ ಹೇಳಿಕೊಂಡಿದ್ದಾರೆ. ರೈತ ಸಂಘದ ಸಭೆಗಳಿಗೆ ಮಹಾನಾಯಕರುಗಳನ್ನೆಲ್ಲಾ ಕರೆಸಿ ಅವರಿಂದ ಭಾಷಣ ಮಾಡಿಸಿ ರೈತರಲ್ಲಿ ಸಂಘಟನೆ, ಐಕ್ಯತೆ, ಹೋರಾಟದ ವೈಚಾರಿಕತೆಯನ್ನು ಪ್ರಚೋದಿಸಿ ಪ್ರಭಾವಗೊಳಿಸುತ್ತಿದ್ದರು. ಈ ಸಭೆ ಸಮಾರಂಭಗಳಿಂದ ಮಲೆನಾಡಿನ ಗೇಣಿ ರೈತರಲ್ಲಿ ಸಂಘಟನೆ ಬಲಪಟ್ಟಿತು. ರಾಜ್ಯದ ಜನತೆ, ಗಮನ ಸೆಳೆದು. ಜನರಲ್ಲಿ ಹೊಸ ಬದಲಾವಣೆ ತರಲು ಪ್ರಯತ್ನಿಸುತ್ತಿದ್ದರು.

ರೈತಸಂಘಕ್ಕೆ ಪ್ರೇರಣೆ ನೀಡಿದವರ ಕುರಿತು ಗಣಪತಿಯಪ್ಪನವರು ಹೀಗೆ ಹೇಳಿದ್ದಾರೆ. ಗಣಪತಿಯಪ್ಪನವರು ರೈತಸಭೆಗೆ ಜಿಲ್ಲೆಯ ಕಾಂಗ್ರೆಸ್ ನಾಯಕರು, ತಮ್ಮ ಗುರುಗಳು, ಮಾರ್ಗದರ್ಶಕರೂ ರೈತರ ಬಗ್ಗೆ ಅಪಾರ ಕಾಳಜಿ ಹೊಂದಿದ್ದ ಗೇಣಿದಾರರ ಮಗನಾಗಿದ್ದ 'ಕಡಿದಾಳ್ ಮಂಜಪ್ಪನವರು ನನ್ನ ಹೋರಾಟಕ್ಕೆ ಸದಾ ಪ್ರೇರಣಾಶಕ್ತಿಯಾಗಿದ್ದರು'. ಸಮಾಜವಾದಿ ನಾಯಕರಾಗಿ ಬೆಳೆಯುತ್ತಿದ್ದ ಪ್ರಭಾವಶಾಲಿ ಪ್ರಸಿದ್ಧ ತರುಣ ಮುಖಂಡ ಶಾಂತವೇರಿ ಗೋಪಾಲಗೌಡ,[೪] ಕವಿ ಮತ್ತು ಚುಟುಕು ಸಾಹಿತಿ ಎಂದು ಪ್ರಖ್ಯಾತರಾಗಿದ್ದ ಹಾಗೂ ಅಂಕೋಲದ ರೈತನಾಯಕರಾಗಿದ್ದ ದಿನಕರ ದೇಸಾಯಿ, ಕೋಲಾರದ ನಿಷ್ಠ ನಾಯಕ ವೆಂಕಟಗಿರಿಯಪ್ಪ, ಪತ್ರಕರ್ತರಾದ ಖಾದ್ರಿ ಶಾಮಣ್ಣ, ಶಿವಮೊಗ್ಗದ ಹಿಂದೂ ಮಹಾಸಭಾದ ನಾಯಕ ಭೂಪಾಳಂ ಚಂದ್ರಶೇಖರಯ್ಯ, ಬಸವಾನಿ ರಾಮಶರ್ಮರು ಹೆದ್ದೂರು ಹೆಚ್.ಹೆಚ್.ಮಂಜಪ್ಪಗೌಡರು, ಮುಂತಾದವರು ಸ್ಫೂರ್ತಿಯಾಗಿದ್ದರು ಎಂಬ ಅಂಶ ವ್ಯಕ್ತಪಡಿಸಿದ್ದರು.''ಎಂಬ ಅಂಶವನ್ನು ಸಂದರ್ಶನದಲ್ಲಿ ಮಾಹಿತಿ ನೀಡಿದ್ದಾರೆ (ಸಂದರ್ಶನ : ಗಣಪತಿಯಪ್ಪ, ೨೦.೦೫.೨೦೦೮).

ಕಡಿದಾಳ್‌ರ ಸಲಹೆಯ ಮೇರೆಗೆ ಗೇಣಿದಾರರನ್ನು ಒಗ್ಗೂಡಿಸಲು ಒಂದು ಸಭೆಯನ್ನು ನಡೆಸಲಾಯಿತು. ಸಭೆಯ ಬಗ್ಗೆ ಆಗಿನ ಸಂದರ್ಭದಲ್ಲಿ ರೈತರಿಗೆ ತಿಳುವಳಿಕೆ ಕೊಡಲು ಕರಪತ್ರ ಮಾಡಿಸಿ ಹಂಚಲಾಗುತ್ತಿತ್ತು. ಆದಕ್ಕೊಂದು ನಿದರ್ಶನವಾಗಿ ಗಣಪತಿಯಪ್ಪನವರಿಂದ ಒಂದು ಕರಪತ್ರ ಕೂಡ ದೊರೆತಿದೆ.

''ಜೈಹಿಂದ್''

ರೈತ ಸಂಘ, ಸಾಗರ

ತಾ. ೮-೧೨-೧೯೫೦ನೇ ಶುಕ್ರವಾರ ಮಧ್ಯಾಹ್ನ ೨ ಗಂಟೆಗೆ ಸರಿಯಾಗಿ ಶಿರವಂತೆ ಗ್ರಾಮದಲ್ಲಿ ರೈತರ ಸಭೆಯನ್ನು ಏರ್ಪಡಿಸಲಾಗಿದೆ. ಮಲೆನಾಡು ಗೇಣಿದಾರ ಸಂಘದ ಅಧ್ಯಕ್ಷರಾದ ಶ್ರೀಮಾನ್ ಹೆಚ್. ಹೆಚ್.ಮಂಜಪ್ಪನವರೂ ಮತ್ತು ಪ್ರಧಾನ ಕಾರ್ಯದರ್ಶಿಗಳಾದ ಶ್ರೀಮಾನ್ ಬಸವಾನಿ ರಾಮಶರ್ಮರವರೂ ಈ ಸಭೆಯ ಕಾರ್ಯಕಲಾಪಗಳಲ್ಲಿ ಭಾಗವಹಿಸಲು ದಯಮಾಡಿ ಒಪ್ಪಿರುತ್ತಾರೆ. ರೈತರೆಲ್ಲರೂ ಈ ಸಭೆಯಲ್ಲಿ ತಪ್ಪದೇ ಭಾಗವಹಿಸಬೇಕಾಗಿಯೂ ಮತ್ತು ರೈತ ಹಿತೈಷಿಗಳಾದ ಮಹನೀಯರು ಸಭೆಗೆ ದಯಮಾಡಿಸಿ, ತಮ್ಮ ಸಹಕಾರ, ಸಲಹೆಗಳನ್ನು ನೀಡಬೇಕಾಗಿಯೂ ಪ್ರಾರ್ಥನೆ.

**ವಿಷಯಗಳು**

೧. ಒಂದೇ ಉದ್ದೇಶಕ್ಕಾಗಿ ಶ್ರಮಿಸುತ್ತಿರುವ ಸಾಗರ ತಾಲ್ಲೂಕು ರೈತ ಸಂಘ ಮತ್ತು ಮಲೆನಾಡು ಗೇಣಿದಾರ ಸಂಘ ಈ ಎರಡೂ ಸಂಸ್ಥೆಗಳನ್ನು ಒಂದೇ ಹೆಸರು ಮತ್ತು ಒಂದೇ ಆಡಳಿತಕ್ಕೆ ಒಳಪಡಿಸುವ ವಿಷಯ.

೨. ಈ ಎರಡೂ ಸಂಘದ ಪ್ರತಿನಿಧಿಗಳು ಸೂಚಿಸಿರುವ ಟೆನೆನ್ಸಿ ಡ್ರಾಫ್ಟ್ ಬಿಲ್ಲನ್ನು ಪರಿಶೀಲಿಸಿ ಸರಕಾರ ದವರ ಮಂಜೂರಾತಿ ಬಗ್ಗೆ ಕಳಿಸಲು ಒಪ್ಪುವುದು.

೩. ಗೇಣಿ ಕೊಡತಕ್ಕ ವ್ಯವಹಾರದಲ್ಲಿರುವ ನ್ಯೂನತೆ ಮತ್ತು ಅದರಿಂದ ಗೇಣಿದಾರರಿಗಾಗುವ ತೊಂದರೆಗಳನ್ನು ನಿವಾರಿಸುವ ಸಲುವಾಗಿ ಸೂಕ್ತಕ್ರಮಗಳನ್ನು ನಿರ್ಧರಿಸುವುದು.

೪. ಅಧ್ಯಕ್ಷರ ಅಪ್ಪಣೆಯ ಮೇರೆಗೆ ಇತರ ವಿಷಯಗಳು

(ವಿಶೇಷ ಸೂಚನೆ ಸಭೆಯಲ್ಲಿ ಚರ್ಚಿಸಲು ವಿಷಯಗಳನ್ನು ಸೂಚಿಸುವವರು ಸಭೆ ಪ್ರಾರಂಭವಾಗುವುದರೊಳಗಾಗಿ ಕಾರ್ಯದರ್ಶಿಗಳ ಕಡೆಗೆ ಲಿಖಿತ ಮೂಲಕ ತಿಳಿಸಬೇಕು.)

ಡಿ.ಮೂಕಪ್ಪ, ಮರ್ತೂರು, ಸಂಘದ ಅಧ್ಯಕ್ಷರು ಹೆಚ್.ಗಣಪತಿಯಪ್ಪ ಸಂಘದ ಕಾರ್ಯದರ್ಶಿ ಗಜಾನನ ಪ್ರೆಸ್, ಸಾಗರ (ಆಧಾರ : ಗಣಪತಿಯಪ್ಪನವರಿಂದ ದೊರೆತಂತಹ ಕರಪತ್ರವಾಗಿದೆ).

೧೯೫೧ರ ಫೆಬ್ರವರಿಯಲ್ಲಿ ಮಲೆನಾಡು ಗೇಣಿದಾರ ಸಂಘ ಮತ್ತು ಸಾಗರ ತಾಲ್ಲೂಕು ರೈತ ಸಂಘಗಳು ''ಒಂದೇ ಉದ್ದೇಶಕ್ಕಾಗಿ ಶ್ರಮಿಸುತ್ತಿರುವ ಎರಡು ಸಂಸ್ಥೆ''ಗಳಾಗಿದ್ದುದರಿಂದ ಅವುಗಳು

"ಮಲೆನಾಡು ರೈತ ಸಂಘ" ಎಂಬ ಒಂದೇ ಹೆಸರಿನಲ್ಲಿ ಒಟ್ಟಾದವು. ಇದು ಕಡಿದಾಳ್‌ರ ಪ್ರಯತ್ನದಿಂದಲೇ ಒಟ್ಟಾಗಿದ್ದು ಎನ್ನುವುದು ಗಮನಾರ್ಹವಾಗಿದೆ. ಈ ಹೊಸ ಸಂಘದ ಕೇಂದ್ರ ಕಛೇರಿ ತೀರ್ಥಹಳ್ಳಿಯಲ್ಲಿರಲೆಂದು ತೀರ್ಮಾನಿಸಿದ್ದವು ಎಂಬ ಮಾಹಿತಿಯು ಸಾಗರ ತಾಲ್ಲೂಕು ರೈತ ಸಂಘ ಹೊರಡಿಸಿದ ಕರಪತ್ರದಿಂದ ಪಡೆಯಲಾಗಿದೆ. ಹೀಗೆ ಎರಡು ಸಂಘಟನೆಯನ್ನು ಒಟ್ಟುಗೂಡಿಸುವುದರಿಂದ ರೈತ ಸಂಘ ಬಲಗೊಂಡಿತು.

"ಸಂಘದ ಕೇಂದ್ರ ಕಛೇರಿ ತೀರ್ಥಹಳ್ಳಿಯಲ್ಲಿ ಇರತಕ್ಕದ್ದೆಂದೂ, ರೈತರು ಮತ್ತು ಮಲೆನಾಡಿನ ಸಮಸ್ಯೆಗಳ ಬಗ್ಗೆ ಆಳವಾದ ಅನುಭವವುಳ್ಳವರೂ, ಜನಪ್ರಿಯ ನಾಯಕರೂ, ಸುಪ್ರಸಿದ್ಧ ವಕೀಲರೂ ಮೈಸೂರು ಶಾಸನ ಸಭಾ ಸದಸ್ಯರೂ ಆದ ಶಿವಮೊಗ್ಗದ ಶ್ರೀ ಕಡಿದಾಳ್ ಮಂಜಪ್ಪನವರು ಸಂಘದ ಅಧ್ಯಕ್ಷರಾಗಿರಬೇಕೆಂದು ಸಂಘದಲ್ಲಿ ನಿರ್ಧರಿಸಲಾಯಿತು. ಈ ಎರಡೂ ಸಂಘಟನೆಗಳ ಸ್ವರೂಪ ಮತ್ತು ಗುರಿಗಳ ಸಮಾನ ಧರ್ಮದ ಹಿನ್ನೆಲೆಯಲ್ಲಿ ಇವು ಒಂದಾಗುವುದೂ ಕೂಡಾ ಸಹಜವೇ ಆಗಿತ್ತು ಎಂಬ ಅಂಶವನ್ನು ರಾಜಶೇಖರ್ ಅವರು ತಿಳಿಸಿದ್ದಾರೆ (ರಾಜಶೇಖರ್, ೧೯೮೦:೬೩). ಕಡಿದಾಳ್‌ರು ಈ ಎರಡು ಸಂಘಟನೆಗಳನ್ನು ಒಂದಾಗಿಸಿದ ನಂತರ ಸಾಗರದ ಗಾಂಧಿ ಮೈದಾನದಲ್ಲಿ ನಗರದ ವಕೀಲರಾದ ಸಿ.ಕೃಷ್ಣಮೂರ್ತಿರಾಜ ಅವರ ಅಧ್ಯಕ್ಷತೆಯಲ್ಲಿ ಒಂದು ಸಭೆಯನ್ನು ಕರೆದರು. ಈ ಸಭೆಯಲ್ಲಿ ಇನ್ನು ಸರ್ಕಾರದ ಮುಂದೆ ಬೇಡಿಕೆಗಳನ್ನು ಇಡಲು ಅವರು ಪ್ರಾರಂಭಿಸಿದರು. ಸರ್ಕಾರದ ಮುಂದೆ ಇಟ್ಟಂತೆ ಬೇಡಿಕೆಳಲ್ಲಿ ಪ್ರಮುಖವಾದುದೆಂದರೆ:

೧. ಗೇಣಿದಾರರ ಭೂಮಿಯನ್ನು ಭೂಒಡೆಯರು ಕೈತಪ್ಪಿಸಿದಂತೆ ತಕ್ಷಣ ಕಾನೂನು ಹೊರಡಿಸಬೇಕು. ಅಲ್ಲದೇ ಗೇಣಿದಾರರ ರಕ್ಷಣೆಗೆ ನೀಡುವ ಟೆನನ್ಸಿ ಕಾನೂನು ಜಾರಿಗೆ ತರಬೇಕು.

೨. ಸರ್ಕಾರವು ರೈತರಿಗೆ ರಿಯಾಯ್ತಿಗಳನ್ನು ಘೋಷಿಸಿದಾಗ ಕೇವಲ ಕಂದಾಯ ಕೊಡುವವರನ್ನು ರೈತರೆಂದು ಪರಿಗಣಿಸುತ್ತದೆ. ಇನ್ನು ಮುಂದೆ ಗೇಣಿದಾರರೂ ಕೂಡ ರೈತರೆಂದು ಪರಿಗಣಿಸಿ ಅವರಿಗೆ ಸರ್ಕಾರ ರಿಯಾಯ್ತಿ ಸೌಲಭ್ಯಗಳನ್ನು ಒದಗಿಸಬೇಕು. ಈ ತೀರ್ಮಾನಗಳನ್ನು ೪-೧-೧೯೪೮ರ ಬೇಡಿಕೆಗಳೆಂದು ತೀರ್ಮಾನಿಸಲಾಗಿತ್ತು ಎಂಬ ಅಂಶವನ್ನು ಕುರಿತಂತೆ ಗಣಪತಿಯಪ್ಪನವರು ಮಾಹಿತಿ ನೀಡಿದ್ದಾರೆ (ಬೋರಲಿಂಗಯ್ಯ, ಹುಚ್ಚಪ್ಪ ಮಾಸ್ತರ, ೨೦೦೨:೪೬).

ಕಡಿದಾಳ್‌ರು ಮೊದಲೆಲ್ಲಾ ಭೂಮಾಲೀಕರೊಂದಿಗೆ ಸಂಧಾನಕ್ಕೆ ಬರಲು ಪ್ರಯತ್ನಿಸಿ ಅದು ಸಾಧ್ಯವಾಗದೇ ಇದ್ದಾಗ, ಸರ್ಕಾರದ ಪ್ರತಿನಿಧಿಯಾಗಿ ಸರ್ಕಾರದಿಂದ ಪ್ರಯತ್ನಿಸಿದರು. ಅದು ಸಾಧ್ಯವಾಗದೆ

ಇದ್ದಾಗ ಕಡಿದಾಳ್‌ರ ನೇತೃತ್ವದಲ್ಲಿ ಹುಟ್ಟಿಕೊಂಡಂತಹ ಮಲೆನಾಡು ರೈತಸಂಘದ ಗೇಣಿರೈತರು ಮತ್ತು ಹಿಂದುಳಿದ ರೈತರಲ್ಲಿ ಜಾಗೃತಿಯನ್ನು ಉಂಟುಮಾಡಿ ಕಾಗೋಡು ಸತ್ಯಾಗ್ರಹದಿಂದ ಹೋರಾಟಕ್ಕೆ ಪೀಠಿಕೆಯನ್ನು ಹಾಕಿದರು.

ಈ ಎರಡು ಸಂಘಟನೆಯನ್ನು ಕುರಿತಂತೆ ಅಧ್ಯಯನ ಮಾಡಿದಾಗ, ಮಲೆನಾಡಿನ ಭಾಗದಲ್ಲಿ ಕಡಿದಾಳ್‌ರಿಂದಲೇ ರೈತರು ಸಂಘಟನೆಯಾಗುವ ಮನೋಭಾವವನ್ನು ಬೆಳೆಸಿಕೊಂಡರು. ಸ್ವತಃ ರೈತ ಕುಟುಂಬದಿಂದ ಬಂದ ಇವರು ರೈತರ ಒಳಿತಿನ ಬಗ್ಗೆ ಸದಾ ಆಲೋಚಿಸುವವರಾಗಿದ್ದರು. ರೈತ ಸಂಘದ ರೂವಾರಿಯಾಗುವುದರೊಂದಿಗೆ ಅದರ ಅಸ್ತಿತ್ವಕ್ಕೆ ಭದ್ರಬುನಾದಿ ಹಾಕಿದ್ದರು.

ಮಲೆನಾಡ ರೈತ ಸಂಘದಲ್ಲಿ ಬೃಹತ್ ಸದಸ್ಯರ ಸಂಖ್ಯೆಯನ್ನು ಹೊಂದಿತು. ಇದು ರೈತರಲ್ಲಿ ಒಗ್ಗಟ್ಟನ್ನು ಮೂಡಿಸಿತು. ಇದರಿಂದ ಗೇಣಿದಾರರ ಮೊದಲಿನ ಅಸಹಾಯಕ ಸ್ಥಿತಿಯಿಂದ ಪರಿವರ್ತನೆ ಹೊಂದಿ, ಜಮೀನ್ದಾರರ ಶೋಷಣೆಯಿಂದ ಮುಕ್ತವಾಗಲು ಬಯಸುತ್ತಿದ್ದರು. ಈ ಹಿನ್ನೆಲೆಯಲ್ಲಿ ನೋಡಿದಾಗ ಕೃಷಿ ಭೂಮಿಗಾಗಿ ಮತ್ತು ಗೇಣಿಯ ಪ್ರಮಾಣದ ಕುರಿತಂತೆ ನಡೆದ ಕಾಗೋಡು ಚಳುವಳಿ ಒಂದು ಐತಿಹಾಸಿಕ ಘಟನೆಯಾಗಿದೆ. ಈ ಚಳುವಳಿ ನಡೆಯಲು ಕಡಿದಾಳ್‌ರ ಮತ್ತು ಗಣಪತಿಯಪ್ಪನವರ ಗೇಣಿಧಾರರ ಸಂಘಟನೆಗಳು ತಳಪಾಯ ಹಾಕಿದ್ದಾಗಿ ಕಂಡುಬರುತ್ತದೆ.

ಕಡಿದಾಳ್‌ರ ರೈತ ಸಂಘಟನೆಯನ್ನು ಕುರಿತು ವಿಮರ್ಶೆಗೆ ಒಳಪಡಿಸಿದ್ದಾರೆ. ಅಂತಹ ವಿಮರ್ಶಕರಲ್ಲಿ ಪ್ರಮುಖವಾಗಿ ಜಿ.ರಾಜಶೇಖರ್, ಕೋಣಂದೂರು ವೆಂಕಪ್ಪಗೌಡ ಮುಂತಾದವರು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

> "ಕಡಿದಾಳ್ ಮಂಜಪ್ಪ ಬಡರೈತ ಕುಟುಂಬದಿಂದ ಬಂದವರಾಗಿದ್ದರೂ ರೈತರ ಬಗ್ಗೆ ಇವರಿಗೆ ಸಹಾನುಭೂತಿಯ ಧೋರಣೆ ಇತ್ತೇ ವಿನಾಃ ಮೂಲಭೂತವಾಗಿ ಅವರು ತಮ್ಮ ಸಮಾಜದ ಸಮಸ್ಯೆಗಳ ಬಗ್ಗೆ ಉಳಿದ ಕಾಂಗ್ರೆಸ್ ನಾಯಕರಿಗಿಂತ ಭಿನ್ನವಾಗಿ ಯೋಚಿಸುತ್ತಿರಲಿಲ್ಲ. ಬಡ ರೈತರು ಮತ್ತು ಭೂಮಾಲೀಕರು ಸಂಧಾನದಲ್ಲಿ ರಾಜಿ ಮಾಡಿಕೊಂಡು ಶಾಂತಿಯುತವಾಗಿ, ಗಾಂಧಿಮಾರ್ಗದಲ್ಲಿ ತಮ್ಮ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಬಹುದು, ಭೂಮಾಲೀಕರ ಹಿತಕ್ಕೆ ಧಕ್ಕೆ ತರದೇನೆ ಭೂಸುಧಾರಣಾ ಶಾಸನ ಮಾಡಬಹುದು; ನಮ್ಮ ಭೂಮಿಯ ಸಮಸ್ಯೆ ಎಂದರೆ ಕೇವಲ ಗೇಣಿದಾರ ರೈತ ಮತ್ತು ಭೂಮಾಲೀಕರ ಸಮಸ್ಯೆ ಇತ್ಯಾದಿ ಕಲ್ಪನೆಗಳು ಮಂಜಪ್ಪನವರಲ್ಲಿಯೂ ಇದ್ದವು. ಮಲೆನಾಡಿನ ಗೇಣಿದಾರ ಸಂಘದಲ್ಲಿದ್ದ ಇತರರೂ ಮಲೆನಾಡಿನ ಕೃಷಿಯ ಸಮಸ್ಯೆಗಳ ಬಗ್ಗೆ ಇವರಿಗಿಂತ ಹೆಚ್ಚು ಆಳವಾಗಿ, ನಿಖರವಾಗಿ ಯೋಚಿಸದಂತಿಲ್ಲ" (ರಾಜಶೇಖರ್, ೧೯೮೦:೩೫), (ವೆಂಕಪ್ಪಗೌಡ, ೨೦೦೧:೬೫).

ಈ ಮೇಲಿನ ಅಭಿಪ್ರಾಯವನ್ನು ನೋಡಿದಾಗ, ಕಡಿದಾಳ್‌ರು ರೈತ ಸಂಘಟನೆಯನ್ನು ಅಷ್ಟಕ್ಕೆ ಸೀಮಿತಗೊಳಿಸಲು ಕಾರಣವೇನೆಂಬುದನ್ನು ಅವರ ಭೂಹೋರಾಟದ ಚಿಂತನೆಯ ಹಿನ್ನೆಲೆಯಲ್ಲಿ ನೋಡಬಹುದು.ಕಡಿದಾಳ್‌ರು ಒಬ್ಬ ಗಾಂಧಿವಾದಿಯಾಗಿ, ಒಬ್ಬ ಶ್ರೇಷ್ಠ ನಾಯಕರಾಗಿ ಒಂದು ತತ್ವಕ್ಕೆ ಕಟ್ಟುಬಿದ್ದವರು. ಗಾಂಧೀಜಿಯ ಸಾಮಾಜಿಕ ಸಮಾನತೆಯ ತತ್ವದ ಹಿನ್ನೆಲೆಯಲ್ಲಿಯೇ ಹೋರಾಟ ನಡೆಸಿದರು. ಭೂಸಮಸ್ಯೆಯ ವಿಷಯಕ್ಕೆ ಬಂದರೂ ಕೂಡ ಹಾಗೆ ಯೋಚಿಸುತ್ತಿದ್ದರು. ಕಡಿದಾಳ್‌ರ ಕಾಲಘಟ್ಟವನ್ನು ಅಧ್ಯಯನ ಮಾಡಿದಾಗ ಅವರು ಭೂಸಮಸ್ಯೆ ಒಂದನ್ನೇ ಕುರಿತು ಯೋಚಿಸಲು ಮತ್ತು ಸಮಾಜದ ಉಳಿದ ಸಮಸ್ಯೆಗಳ ಕುರಿತು ಯೋಚಿಸದೇ ಇರಲು ಮುಖ್ಯ ಕಾರಣವಿದೆ. ಸಮಾಜದ ಉಳಿದೆಲ್ಲ ಸಮಸ್ಯೆಗೂ ಕೂಡ ಕೃಷಿ ಭೂಮಿಯೇ ಕಾರಣವಾಗಿತ್ತು. ಆಗಿನ ಮಲೆನಾಡಿನ ಸಮಾಜವನ್ನು ಅವಲೋಕಿಸಿದಾಗ ಭೂಹಂಚಿಕೆಯಲ್ಲಿನ ಅಸಮಾನತೆ ಮತ್ತು ಭೂಹೀನತೆಯಿಂದಾಗಿ ವರ್ಗಗಳು ಹುಟ್ಟಿಕೊಂಡಿದ್ದವು. ಈ ಭೂಮಿಯ ಅಸಮಾನ ಹಂಚಿಕೆಯಿಂದಾಗಿ ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಅನೇಕ ಸಮಸ್ಯೆಗಳು ಕಂಡುಬರುತ್ತಿದ್ದವು. ಕಡಿದಾಳ್‌ರ ಭೂಹೋರಾಟದ ಚಿಂತನೆಯ ಪ್ರಕಾರ ನೋಡಿದರೆ. ರೈತನೆನಿಸಿಕೊಂಡವನಿಗೆ ಸ್ವತಃ ಭೂಮಿಯನ್ನು ಹೊಂದಿದಾಗ ಮಾತ್ರ ಅವನು ಮನಸ್ಸು ಕೊಟ್ಟು ದುಡಿಯುತ್ತಾನೆ ಹಾಗೂ ಭೂಮಿ ತನ್ನದು ಎಂಬ ಭಾವನೆ ಬರುತ್ತದೆ. ಆಗ ಮಾತ್ರ ರೈತನ ಜೀವನ ಸುಧಾರಿಸುತ್ತದೆ ಎಂಬ ನಿಲುವನ್ನು ಹೊಂದಿದ್ದರು. ಹೀಗಾಗಿ ಕಡಿದಾಳ್‌ರಿಗೆ ಗೇಣಿದಾರ ಸಂಘವನ್ನು ಸ್ಥಾಪಿಸಿದಂತಹ ಸಂದರ್ಭದಲ್ಲಿ ಸಮಾಜದ ಉಳಿದೆಲ್ಲ ಸಮಸ್ಯೆಗಳಿಗಿಂತಲೂ ಗೇಣಿದಾರ ಮತ್ತು ಭೂಮಾಲೀಕರ ಸಮಸ್ಯೆಯೇ ಮುಖ್ಯವಾಗಿತ್ತು ಎಂದು ಜಗಳೂರ್ ರವಿಕಮಾರ್ ಅವರು ಅಭಿಪ್ರಾಪಟ್ಟಿದ್ದಾರೆ (ಸಂದರ್ಶನ : ರವಿಕುಮಾರ್, ಜಗಳೂರು, ೨೪.೪.೨೦೦೮) (ಪುಟ್ಟಣ್ಣ, ೧೯೯೧:೨೮೬).

ಕಡಿದಾಳ್‌ರು ಭೂಹೋರಾಟ ಮಾಡಿದ ಸಮಯದಲ್ಲಿ, ಬೇರೆ ಬೇರೆ ಕಡೆಯಲ್ಲೂ ಭೂ ಹೋರಾಟ ನಡೆದಿತ್ತು. ಅಲ್ಲಿ ಕೂಡ ಭೂ ಸಮಸ್ಯೆಗೆ ಮಾತ್ರ ಹೋರಾಡುತ್ತಿದ್ದರು. ಇದಕ್ಕೆ ಸಂಬಂಧಿಸಿದಂತೆ ೧೯೪೦ರ ದಶಕದಲ್ಲಿ "ದಿನಕರ ದೇಸಾಯಿಯವರ ನಾಯಕತ್ವದಲ್ಲಿ ಅಂಕೋಲದಲ್ಲಿ ನಡೆಸಿದಂತಹ ರೈತ ಹೋರಾಟ" "೧೯೪೧ ದಶಕದಲ್ಲಿ ಆಂಧ್ರದ ತೆಲಂಗಾಣ ಹೋರಾಟ" ಇರಬಹುದು. ಇವೆಲ್ಲವು ಭೂಮಿ ಹಂಚಿಕೆಗಾಗಿ ಸಂಬಂಧಿಸಿದ್ದು ಜಮೀನ್ದಾರಿ ಪದ್ಧತಿಯನ್ನು ಎದುರಿಸುವುದಾಗಿತ್ತು. ರೈತರ ಉಳಿದೆಲ್ಲ ಸಮಸ್ಯೆಗಳನ್ನು ಪರಿಹರಿಸುವುದಕ್ಕಿಂತ ಭೂಮಿ ಸಮಸ್ಯೆಯನ್ನು ಪರಿಹರಿಸಲು ಪ್ರಯತ್ನಪಟ್ಟಿರುವುದು ಸೂಕ್ತವಾಗಿದೆ. ಕಡಿದಾಳ್‌ರ ಈ ಚಿಂತನೆಗೆ ಪೂರಕವಾಗಿ ಅವರು ಅಧಿಕಾರಾವಧಿಯಲ್ಲಿ ಕೈಗೊಂಡ ಭೂಸುಧಾರಣೆಗಳು ನಮಗೆ ನಿದರ್ಶನವಾಗುತ್ತವೆ. ಭೂಸುಧಾರಣೆಗೆ ಸಂಬಂಧಿಸಿದ ಮಾಹಿತಿಯನ್ನು ನಾಲ್ಕನೇ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಗೇಣಿದಾರ ಮತ್ತು ಭೂಮಾಲೀಕ ಸಮಸ್ಯೆಯನ್ನು ಹೋರಾಟ ಮಾಡದೆಯೇ ಸಂಧಾನದ ಮೂಲಕ ನಡೆಸುತ್ತಿದ್ದ ಮತ್ತು ಭೂಮಾಲೀಕರ ಹಿತಕ್ಕೆ ಧಕ್ಕೆ ಬರದೆ ಭೂಸುಧಾರಣೆ ಮಾಡಬಹುದು ಎಂಬ ನಂಬಿಕೆ ಇಟ್ಟವರು ಕಡಿದಾಳರು. ಮೈಸೂರು ಸರ್ಕಾರದ ಪ್ರತಿನಿಧಿಯಾಗಿದ್ದುಕೊಂಡೆ ಗೇಣಿದಾರ ಮತ್ತು ಭೂಮಾಲೀಕರ ಸಮಸ್ಯೆಯನ್ನು ಇತ್ಯಾರ್ಥಪಡಿಸಲು ಸಂಧಾನದ ಮಾರ್ಗ ಅನುಸರಿಸುವುದು ಕಂಡುಬಂದಿದೆ. ಗಾಂಧೀವಾದಿಗಳಾಗಿ ಈ ಕ್ರಮ ಕೈಗೊಂಡಿರುವುದು ಸಮಂಜಸವೆನಿಸುತ್ತದೆ. ಭೂಮಾಲೀಕರ ವಿರೋಧ ಕಟ್ಟಿಕೊಂಡರೆ ಸರ್ಕಾರದ ಮೂಲಕ ಈ ಸಮಸ್ಯೆಗೆ ಯಾವುದೇ ಪರಿಹಾರ ದೊರೆಯುವುದಿಲ್ಲವೆಂದೂ ಆಗ ಕಾಂಗ್ರೆಸ್ ಪಕ್ಷದಲ್ಲಿದ್ದವರೆಲ್ಲ ಭೂಮಾಲೀಕರೇ ಆಗಿದ್ದರು. ಅದರಲ್ಲೂ ಕಡಿದಾಳ್‌ರ ಸುಧಾರಣೆಗಳೆಲ್ಲವು ಕಾಯ್ದೆಯ ಮೂಲಕ ತರಲು ಪ್ರಯತ್ನ ಪಡುತ್ತಿದ್ದರು. ಈ ಕಾರಣದಿಂದ ಅವರು ಸರ್ಕಾರವನ್ನಾಗಲಿ, ಭೂಮಾಲೀಕರನಾಗಲಿ ನೇರವಾಗಿ ಎದುರು ಹಾಕಿಕೊಳ್ಳದೆ ಸರ್ಕಾರದ ಮೂಲಕವೇ ಪರಿಹಾರ ಬಯಸುತ್ತಿದ್ದರು ಎಂಬುದಾಗಿ ಗಣಪತಿಯಪ್ಪ ಮತ್ತು ಹಿ.ಚಿ.ಬೋರಲಿಂಗಯ್ಯನವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ (ಸಂದರ್ಶನ: ಗಣಪತಿಯಪ್ಪ, ೨೦.೦೫.೨೦೦೮), (ಬೋರಲಿಂಗಯ್ಯ, ೮.೦೭.೨೦೦೮).

## ೩.೩. ಕಾಗೋಡು ಚಳುವಳಿ

ಕಾಗೋಡು ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕಿನ ತಾಳಗುಪ್ಪ ಹೋಬಳಿಯಲ್ಲಿರುವ ಒಂದು ಸಣ್ಣ ಹಳ್ಳಿ. ಸಾಗರದಿಂದ ಉತ್ತರಕ್ಕೆ ಸುಮಾರು ಹದಿನೈದು ಕಿ.ಮೀ.ದೂರದಲ್ಲಿರುವ ಕಾಗೋಡು ಮಲೆನಾಡಿನ ಬೇರೆಲ್ಲ ಹಳ್ಳಿಗಳ ಹಾಗೆಯೇ ಒಂದು ಸಾಮಾನ್ಯ ಹಳ್ಳಿ. ಕಾಗೋಡು ಚಳುವಳಿ ನಡೆದ ಸಮಯದಲ್ಲಿ "ಒಂದು ರೆವಿನ್ಯೂ ಗ್ರಾಮ ಕೂಡ ಆಗಿರಲಿಲ್ಲ"(ರಾಜಶೇಖರ್, ೧೯೮೦:೧). ಈ ಸಣ್ಣ ಹಳ್ಳಿಯು ಸ್ವಾತಂತ್ರ್ಯ ನಂತರ ನಡೆದ ಪ್ರಥಮ ರೈತ ಹೋರಾಟದಿಂದಾಗಿ ಪ್ರಖ್ಯಾತವಾಯಿತು. ಸಹ್ಯಾದ್ರಿ ಬೆಟ್ಟಗಳ ತಪ್ಪಲುಗಳ ಅರಣ್ಯ ಪ್ರದೇಶಗಳಲ್ಲಿ ಹೆಚ್ಚಾಗಿ ಕಂಡುಬರುವ ದೀವರು ಹೆಚ್ಚಾಗಿ ಇಲ್ಲಿ ವಾಸವಾಗಿದ್ದಾರು. ಇವರನ್ನು 'ಹಳೆಪೈಕಿ ದೀವರು, ನಾಮಧಾರಿಗಳು ವಿಷ್ಣುಭಕ್ತರು, ಹಾಲಕ್ಷತ್ರಿಯ, ಕುಮಾರಕ್ಷತ್ರಿಯ" ಮುಂತಾದ ಹೆಸರುಗಳಿಂದ ಕರೆಯುತ್ತಾರೆ." ದೀವರೊಂದಿಗೆ ಮಡಿವಾಳರು, ಆದಿ ಕರ್ನಾಟಕದವರು ಕಂಡುಬರುತ್ತಾರೆ. ಸಮಾಜದಲ್ಲಿ ಉನ್ನತ ವರ್ಗದವರೆನಿಸಿಕೊಂಡ ಲಿಂಗಾಯಿತರು ಕಾರ್ಗೋಡಿನಲ್ಲಿ ಪ್ರಬಲರಾಗಿದ್ದರು(ಬೋರಲಿಂಗಯ್ಯ, ಹುಚ್ಚಪ್ಪಮಾಸ್ತರ, ೨೦೦೨:೯).

ಆದರೆ ಉಳಿದವರ್ಗದವರೆಲ್ಲ ತೀವ್ರ ಬಡತನ ಎದುರಿಸುತ್ತಿದ್ದರು. ಅದರಲ್ಲಿಯು ಮುಖ್ಯವಾಗಿ ದೀವರು ಅತ್ಯಂತ ಕೆಳಮಟ್ಟದ ಜೀವನ ನಡೆಸುತ್ತಿದ್ದರು. ಹೀಗೆ ಇವರು ತೀವ್ರ ಬಡತನ ಎದುರಿಸಲು ಮುಖ್ಯ ಕಾರಣರಾದವರು ಕಾಗೋಡು ಉನ್ನತ ವರ್ಗದವರು ಎನಿಸಿಕೊಂಡಿದ್ದ ಅಲ್ಲಿಯ ಜಮೀನ್ದಾರರೇ

ಆಗಿದ್ದರು. ಜಮೀನ್ದಾರರಾದ ಕಾಗೋಡಿನ ಗೌಡರು ಬಹುತೇಕ ಬಾಗಾಯಿತು (ಅಡಿಕೆ ತೋಟ ಮುಖ್ಯವಾಗಿ) ಮತ್ತು ತರಿ ಜಮೀನನ್ನು ತಮ್ಮ ಖಾತೆಯಲ್ಲಿಟ್ಟುಕೊಂಡಿದ್ದರು. ಇವರ ಒಟ್ಟು ತರಿ ಜಮೀನು ಸುಮಾರು ಒಂದು ಸಾವಿರ ಎಕರೆಗಳಿಷ್ಟಿತ್ತು. ಗೌಡರ ಮನೆತನವನ್ನು "ಏಳು ಹಳ್ಳಿ ಗೌಡರು" ಎಂದು ಜನರು ಸಾಮಾನ್ಯವಾಗಿ ಕರೆಯುತ್ತಿದ್ದರು (ರಾಜಶೇಖರ್, ೧೯೮೦:೨೦), (ಬೋರಲಿಂಗಯ್ಯ, ಹುಚ್ಚಪ್ಪ ಮಾಸ್ತರ ೨೦೦೨:೯-೧೦-೧೧-೧೬-೧೭). ಕಾಗೋಡಿನಲ್ಲಿ ೨೪ ಎಕರೆಯಷ್ಟು ಜಮೀನನ್ನು ಆಳುಗಳ ಮೂಲಕ ತಾವೇ ಸಾಗುವಳಿ ಮಾಡುತ್ತಿದ್ದರು. ಉಳಿದ ಎಲ್ಲ ಜಮೀನನ್ನು ದೀವರಿಗೆ ಗೇಣಿಗೆ ಕೊಟ್ಟಿದ್ದರು. ೫ರಿಂದ ೬ ಎಕರೆ ಒಬ್ಬರಿಗೆ ಗೇಣಿಗೆ ಕೊಡುತ್ತಿದ್ದರು. ಗೇಣಿ ಸಾಮಾನ್ಯವಾಗಿ ಫಸಲಿನ ಮೂರನೆ ಒಂದು ಭಾಗ ಇರುತ್ತಿತ್ತು. ಗೇಣಿಗೆ ಕೊಟ್ಟಾಗ ಯಾವುದೇ ಕರಾರು ಪತ್ರಗಳನ್ನು ಕೊಡುತ್ತಿರಲಿಲ್ಲ. ಬೆಳೆದದ್ದನೆಲ್ಲ ಒಡೆಯರಿಗೆ ಕೊಟ್ಟು ಉಳಿದದ್ದರಲ್ಲಿಯೇ ಕಡು ಬಡತನದಿಂದ ಬದುಕುತ್ತಿದ್ದರು.

ದೀವರ ಸ್ಥಿತಿಯನ್ನು ಕುರಿತಂತೆ ಹೋರಾಟಗಾರ ಗಣಪತಿಯಪ್ಪ ಅವರು ಹೇಳುವಂತೆ ಭೂಮಾಲೀಕರೆನಿಸಿಕೊಂಡಿದ್ದ ಒಡೆಯರು ಅಲ್ಲಿಯ ಗೇಣಿದಾರರಾದ ದೀವರಿಗೆ ಯಾವುದೇ ಸ್ವಾತಂತ್ರವನ್ನು ನೀಡಲಿಲ್ಲ. ಒಡೆಯರ ಆಜ್ಞೆ ಪಾಲಿಸಬೇಕಿತ್ತು. ಆಜ್ಞೆಗೆ ತಪ್ಪಿದವರನ್ನು ಎಳೆದು ತಂದು ಕಂಬಕ್ಕೆ ಕಟ್ಟಿ ಹೊಡೆಯುತ್ತಿದ್ದರು. ಕೆಲವು ಸಾರಿ ಇಂಥ ಶಿಕ್ಷೆಗಳಿಂದ ಸಾವುಗಳಾಗಿವೆ. ಆದರೂ ಅವರ ವಿರುದ್ಧ ಯಾರೂ ಮಾತಾಡುವ ಹಾಗಿರಲಿಲ್ಲ. ಭೂಮಾಲೀಕರು ಕರೆದಾಗಲೆಲ್ಲ ತನ್ನ ಕೆಲಸವನ್ನು ಮರೆತು, ಸಂಬಳವಿಲ್ಲದೆ ಬಿಟ್ಟಿ ದುಡಿಮೆಗೆ ಹೋಗಿ ಅವರು ಹೇಳಿದ ಕೆಲಸವನ್ನು ಮಾಡಲೇಬೇಕಿತ್ತು. ಅಂದರೆ ಈ ದೀವರನ್ನು ಭೂಮಾಲೀಕರಾಗಿದ್ದ ಮೇಲು ವರ್ಗದ ಜನರು ತಮ್ಮ ಸೇವೆಗಾಗಿ ಸಾಕಿಕೊಂಡು ಪಶುಸಮಾನ ಜೀತೆ-ಗುಲಾಮರಂತೆ ದುಡಿಸಿಕೊಂಡಿದ್ದರು (ಸಂದರ್ಶನ : ಗಣಪತಿಯಪ್ಪ, ೨೦.೦೫.೨೦೦೮), (ಚಂದ್ರಶೇಖರ್, ೨೦೦೭:೧).

ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕವಾಗಿ ಶೋಷಣೆಗೊಳಪಟ್ಟ ದೀವರು ತಮ್ಮ ಗೌರವವನ್ನು ಕಳೆದುಕೊಂಡು ಪ್ರಾಣಿಗಳಂತೆ ಬದುಕುತ್ತಿದ್ದರು. "ದೀವರ ಒಕ್ಕಲುಗಳು ತುಂಡು ಪಂಚೆ ಉಟ್ಟು, ಅರೆ ಹೊಟ್ಟೆ ಉಂಡು ಉತ್ತು-ಬಿತ್ತಿ ಬೆಳೆದು, ಸುಮ್ಮನೆ ಕೂತು ತಿಂದು ದರ್ಬಾರು ಮಾಡುವ ದಣಿಗಳಿಗೆ ಗೇಣಿ ಕೊಡಬೇಕಿತ್ತು. ಇಂಥ ದುಸ್ಥಿತಿಯಲ್ಲಿ ಸಿಕ್ಕಿಕೊಂಡಿರುವುದಕ್ಕೆ ಕಾರಣ ಜೀವನ ನಿರ್ವಹಣೆಗೆ ಆಧಾರವಾಗಿದ್ದ ಭೂಮಿಯ ಒಡೆತನ ಗೇಣಿದಾರರಿಗೆ ಇಲ್ಲದೆ ಇರುವುದೇ ಆಗಿದೆ. ಇಂತಹ ಸಂದರ್ಭದಲ್ಲಿ ಮಲೆನಾಡಿನ ಬೇರೆ ಬೇರೆ ಭಾಗಗಳಲ್ಲಿ ಗೇಣಿದಾರರ ಸಂಘಟನೆಗಳು ಹುಟ್ಟಿಕೊಳ್ಳುತ್ತಿದ್ದವು. ಉತ್ತರ ಕರ್ನಾಟಕದ ಭಾಗದಲ್ಲಿ ದಿನಕರ ದೇಸಾಯಿ ಅವರ ನೇತೃತ್ವದಲ್ಲಿ ರೈತ ಸಂಘಟನೆ ಹುಟ್ಟಿಕೊಂಡಿತು. ಮಲೆನಾಡಿನಲ್ಲಿ ಕಡಿದಾಳ್‌ರ ನೇತೃತ್ವದಲ್ಲಿ ಮಲೆನಾಡ ಗೇಣಿದಾರ ಸಂಘ ಆರಂಭವಾಯಿತು. ಇದರಲ್ಲಿ ಕಾಂಗ್ರೆಸ್ ಕಾರ್ಯಕರ್ತರೊಂದಿಗೆ ಸಮಾಜವಾದಿ ಪಕ್ಷದ ನಾಯಕರು ಭಾಗವಹಿಸುತ್ತಿದ್ದರು. ಅಂತಹವರಲ್ಲಿ

ಶಾಂತವೇರಿ ಗೋಪಾಲಗೌಡರು ಪ್ರಮುಖರಾಗಿದ್ದು, ರೈತ ಸಂಘಟನೆಗೆ ಶಕ್ತಿ ತುಂಬಿದ್ದರು'' (ವೆಂಕಪ್ಪಗೌಡ(ಸಂ), ೧೯೮೧:೧೨೦-೧೨೧).

ಈ ಮೇಲಿನ ಸಂಘಟನೆಗಳಿಂದ ಪ್ರೇರಣೆಗೊಂಡು ಸಾಗರ ತಾಲ್ಲೂಕಿನ ಕಾಗೋಡಿನಲ್ಲೂ ಕಡಿದಾಳ್ ಅವರಿಂದ ಪ್ರೇರಣೆಗೊಂಡು ಗಣಪತಿಯಪ್ಪನವರು ಕೂಡ ಗೇಣಿದಾರರನ್ನು ಸಂಘಟಿಸಲು ತೊಡಗಿದರು. ಇವರು ಮೂಲತಃ ಉತ್ತರ ಕರ್ನಾಟಕದ ಸಿದ್ದಾಪುರದಿಂದ ಕಾಗೋಡಿಗೆ ಬಂದು ನೆಲೆಸಿದ್ದರು. ಸ್ವತಂತ್ರ ಚಳುವಳಿಯಲ್ಲಿ ಭಾಗವಹಿಸಿ ಸೆರೆಮನೆವಾಸವನ್ನು ಅನುಭವಿಸಿದ್ದರು. ಅಂದಿನ ಪರಿಸ್ಥಿತಿಯಲ್ಲಿ ದೀವರಲ್ಲಿಯೇ ಹೆಚ್ಚಿನ ವಿದ್ಯಾಭ್ಯಾಸ ಪಡೆದವರು ಗಣಪತಿಯಪ್ಪನವರಾಗಿದ್ದರು. ಆ ಕಾಲದಲ್ಲಿ ಅವರು ೭ನೇ ತರಗತಿಯನ್ನು ಪಾಸು ಮಾಡಿದ್ದು ಮಹತ್ವದ ವಿಚಾರವಾಗಿತ್ತು. ಆಗಿನ್ನೂ ಮೇಲು ಜಾತಿಯವರು ಕೂಡ ಇಷ್ಟು ಶಿಕ್ಷಣ ಪಡೆದಿರಲಿಲ್ಲ. ತನ್ನ ಸಮುದಾಯದವರಿಗೆ ಜಮೀನ್ದಾರರು ಕೊಡುತ್ತಿದ್ದ ನೋವನ್ನು ಇವರು ಅನುಭವಿಸಿದವರು. ಜಮೀನ್ದಾರರ ಶೋಷಣೆಯಿಂದ ಮುಕ್ತವಾಗಲು ಇವರು ಪ್ರಯತ್ನಿಸಿದ್ದರು. ಈ ಕಾರಣದಿಂದಾಗಿ ದೀವರು ಗಣಪತಿಯಪ್ಪನವರಿಗೆ ವಿಶೇಷವಾದ ಗೌರವ ಕೊಡುತ್ತಿದ್ದರು. ಜಮೀನ್ದಾರರ ಶೋಷಣೆಯ ಹಿನ್ನೆಲೆಯಲ್ಲಿ ದೀವರ ಸಂಘವನ್ನು ಕಟ್ಟಿದರು. ಈ ಹಿಂದಿನ ಭಾಗದಲ್ಲಿ ಹೇಳಿದ ಹಾಗೆ ಕಡಿದಾಳ್ ಮಂಜಪ್ಪನವರು ತಾವು ಪ್ರಾರಂಭಿಸಿದಂಥ ಗೇಣಿದಾರ ಸಂಘಟನೆಯನ್ನ ಭೂಮಾಲೀಕರ ವಿರುದ್ಧ ಕಾರ್ಯಚಟುವಟಿಕೆಯಲ್ಲಿ ತೊಡಗಿಸಿಕೊಂಡರು. ಈ ಸಂಘಟನೆ ಬಲಗೊಂಡಂತೆ ಜಮೀನ್ದಾರರು ಸಂಘದ ಸದಸ್ಯರ ಮೇಲೆ ಅಪಪ್ರಚಾರ ಮಾಡತೊಡಗಿದರು. ಇದರ ಪ್ರೇರಣೆಯೊಂದಿಗೆ ಕಡಿದಾಳ್‌ರು ''ದೀವರ ಸಂಘವನ್ನು ಗಣಪತಿಯಪ್ಪನವರ ಇಚ್ಛೆಯಂತೆ ಸಾಗರದ ರೈತಸಂಘವನ್ನಾಗಿ ಪರಿವರ್ತಿಸಿದರು''. ಡಿ.ಮೂಕಪ್ಪ ಅವರು ಆ ಸಂಘದ ಅಧ್ಯಕ್ಷರಾದರು. ಗಣಪತಿಯಪ್ಪನವರು ಕಾರ್ಯದರ್ಶಿಯಾಗಿದ್ದರು (ಕಡಿದಾಳ್, ೧೯೯೦:೨೪).

ಕಡಿದಾಳ್‌ರ ಶ್ರಮದಿಂದ ಗೇಣಿದಾರರ ಸಂಘಟನೆ ಸಾಗರದಲ್ಲಿ ಬೆಳೆಯುತ್ತಾ ಹೋದ ಹಾಗೆ ಅಲ್ಲಲ್ಲಿ ಗೇಣಿದಾರರಿಗೂ, ಭೂ ಮಾಲೀಕರಿಗೂ ವಿವಾದಗಳು ಉದ್ಭವಿಸತೊಡಗಿದವು. ಮಲೆನಾಡ ಗೇಣಿದಾರರ ಸಂಘದ ವ್ಯಾಪ್ತಿ ವಿಸ್ತರಿಸಿದಂತೆ ಸಾಗರ ರೈತ ಸಂಘವು ತನ್ನ ಪ್ರಭಾವ ಗೇಣಿದಾರರ ಮೇಲೆ ಉಂಟಾಗುವಂತೆ ಮಾಡಿದವು. ಈ ಎರಡು ಸಂಘಗಳಿಗೂ ಸಮಾನ ಆಸಕ್ತಿ, ಧೋರಣೆಗಳಿದ್ದರಿಂದ ಮತ್ತು ಒಂದೇ ಉದ್ದೇಶಕ್ಕಾಗಿ ಶ್ರಮಿಸುತ್ತಿರುವ ಎರಡು ಸಂಸ್ಥೆಯಾದ್ದರಿಂದ (ಸಾಗರ ತಾಲ್ಲೂಕು ರೈತ ಸಂಘ ಈ ಬಗ್ಗೆ ಹೊರಡಿಸಿದ ಕರಪತ್ರದ ಒಕ್ಕಣೆ) ೧೯೫೧ರ ಫೆಬ್ರವರಿಯಲ್ಲಿ ''ಮಲೆನಾಡು ರೈತ ಸಂಘ'' ಎಂಬ ಒಂದೇ ಹೆಸರಿನಿಂದ ಇದನ್ನು ಕರೆಯಲಾಯಿತು. ಮಲೆನಾಡು ರೈತ ಸಂಘದ ಮೊದಲ ಅಧ್ಯಕ್ಷರು ಶ್ರೀ ಕಡಿದಾಳ್ ಮಂಜಪ್ಪನವರೇ ಆಗಿದ್ದರೆಂದು ಜಿ.ರಾಜಶೇಖರ ಉಲ್ಲೇಖಿಸಿದ್ದಾರೆ (ರಾಜಶೇಖರ, ೧೯೮೦:೬೩).

ಸಾಗರ ತಾಲ್ಲೂಕು ರೈತ ಸಂಘ ಸ್ಥಾಪನೆಯಾದ ನಂತರ ಕಡಿದಾಳ್‌ರು ಮತ್ತು ಗಣಪತಿಯಪ್ಪ ಅವರು ಸತತವಾಗಿ ನಾಲ್ಕು ವರ್ಷಗಳ ಕಾಲ ಎಡಬಿಡದೆ ಸಭೆ ನಡೆಸಿದ್ದರು. ಹೀಗೆ ಸಭೆ ನಡೆಸುವುದರಿಂದಾಗಿ ರೈತರಲ್ಲಿ ವಿಶ್ವಾಸ ಮೂಡಿತು. ಗೇಣಿದಾರರು ಒಗ್ಗೂಡಿದರು. ಇದರಿಂದಾಗಿ ಕಡಿದಾಳ್‌ರ ಮೂಲಕ ಭೂಮಾಲೀಕರಲ್ಲಿ ಸಂಘದ ಮೂಲಕ ಬೇಡಿಕೆ ಇಡಲು ಪ್ರಾರಂಭಿಸಿದರು. ಅವರ ಮುಖ್ಯ ಬೇಡಿಕೆಗಳು ಹೀಗಿದ್ದವು :

೧. ಹೆಚ್ಚಿನ ಅಳತೆ ತೂಕಗಳಿಂದ ಬಲಾತ್ಕಾರವಾದ ಹೆಚ್ಚು ಗೇಣಿ ತೆಗೆದುಕೊಳ್ಳಬಾರದು.

೨. ಗೇಣಿ ಕೊಟ್ಟಿದ್ದಕ್ಕೆ ರಸೀದಿ ನೀಡಬೇಕು.

೩. ಸರ್ಕಾರದ ದಾಖಲೆಯಲ್ಲಿ ಗೇಣೀದಾರರ ಹೆಸರು ಮತ್ತು ಪಹಣಿಗಳ ಹೆಸರು ನಮೂದಿಸಬೇಕು.

೪. ಹೆಚ್ಚು ಬೆಳೆದರೆ ಗೇಣಿಯನ್ನು ಹೆಚ್ಚಿಸಬಾರದು.

೫. ಪದೇ ಪದೇ ಜಮೀನು ಕೈ ಬದಲಾಯಿಸಬಾರದು.

೬. ಗೇಣಿಯ ಪ್ರಮಾಣ ೧/೩ಕ್ಕಿಂತ ಹೆಚ್ಚಾಗಬಾರದೆಂದು ನಿರ್ಧರಿಸಲಾಯಿತು (ಕಾಳೇಗೌಡ ಮತ್ತು ಆನಂದಮೂರ್ತಿ, ೧೯೯೭:೧೪೨), (ಬೋರಲಿಂಗಯ್ಯ ಮತ್ತು ಹುಚ್ಚಪ್ಪ ಮಾಸ್ತರ್, ೨೦೦೨:೪೦).

೧೯೫೧ರಲ್ಲಿ ಬೇಡಿಕೆ ಈಡೇರುವವರೆಗೂ ಗೇಣಿ ಕೊಡಬಾರದೆಂದು ಸಂಘದಿಂದ ಕರೆ ನೀಡಿದರು. ಈ ತರಹದ ಬೇಡಿಕೆಗಳನ್ನು ಜಮೀನ್ದಾರರು ಒಪ್ಪುತ್ತಿರಲಿಲ್ಲ. ಹೀಗೆ ವಾಗ್ವಾದ ನಡೆಯುತ್ತಿದ್ದಂತೆ ಸತ್ಯಾಗ್ರಹ ಪ್ರಾರಂಭವಾಯಿತು. ಮೊದಲಿಗೆ ಗೇಣಿ ಭತ್ತ ಅಳೆಯುತ್ತಿದ್ದ ಕೊಳಗದ ಗಾತ್ರಕ್ಕೆ ಸಂಬಂಧಿಸಿದಂತೆ ಗೇಣಿದಾರರಿಗೂ ಮತ್ತು ಜಮೀನ್ದಾರರಿಗೆ ವಾಗ್ವಾದ ಉಂಟಾಯಿತು. ರೈತರು ಗೇಣಿ ಕೊಡುವ ಸಂದರ್ಭದಲ್ಲಿ ಹೆಚ್ಚಿನ ಅಳತೆಯ ಕೊಳಗದಲ್ಲಿ ಗೇಣಿ ಭತ್ತ ಕೊಡುವುದಿಲ್ಲವೆಂದು, ಗೇಣಿ ಪಡೆದುದಕ್ಕೆ ರಸೀದಿ ಕೊಡಬೇಕೆಂದು ಒತ್ತಾಯ ಮಾಡಿದರು. ಈ ಸಂದರ್ಭದಲ್ಲಿ ಕಡಿದಾಳ್‌ರು ಭಾಗವಹಿಸಿದ್ದು ಕಂಡುಬಂದಿದೆ (ಕಾಳೇಗೌಡ ಮತ್ತು ಆನಂದಮೂರ್ತಿ, ೧೯೯೭:೧೪೩). ಸಾಮಾನ್ಯವಾಗಿ ಗೇಣಿದಾರರಿಗೆ ಕೊಡುತ್ತಿದ್ದ ಒಂದು ಕೊಳಗವೆಂದರೆ ಮೂರು ಸೇರಾಗಿತ್ತು. ಈ ಕೊಳಗಕ್ಕೆ ಸರ್ಕಾರ ಕೂಡ ಮಾನ್ಯತೆ ಕೊಟ್ಟಿತು. ಆದರೆ ಜಮೀನ್ದಾರರು ಗೇಣಿ ಅಳೆಸಿಕೊಳ್ಳುವಾಗ ಮೂರು ಕಾಲು, ಮೂರೂವರೆ, ಮೂರು ಮುಕ್ಕಾಲು ಹಾಗೆ ನಿರ್ದಿಷ್ಟ ಗಾತ್ರಕ್ಕಿಂತ ಹೆಚ್ಚಿನ ಕೊಳಗವನ್ನು ಬಳಸುತ್ತಿದ್ದರು. ಹೀಗೆ ಅಳೆಸಿಕೊಳ್ಳುವಲ್ಲಿ ಕಾಗೋಡು ಗೌಡರೂ ಒಬ್ಬರಾಗಿದ್ದರು.

ಸಂಘ ತನ್ನ ಬೇಡಿಕೆಯನ್ನು ತಾಲ್ಲೂಕಿನ ಜಮೀನ್ದಾರರ ಮುಂದಿಟ್ಟಿತು. ಹಲವು ಜಮೀನ್ದಾರರು ಸಂಘದ ಬೇಡಿಕೆಯನ್ನು ಮನ್ನಿಸಿದರು. ಆದರೆ ಕಾಗೋಡು ಗೌಡರು ಮಾತ್ರ ಇದನ್ನು ಒಪ್ಪಲಿಲ್ಲ.

ಗೇಣಿದಾರರು ತಮ್ಮ ಬೇಡಿಕೆಯನ್ನು ಹಿಂತೆಗೆದುಕೊಳ್ಳಲಿಲ್ಲ. ಹೀಗೆ ಸಣ್ಣ ಕಾರಣಕ್ಕಾಗಿ ಪ್ರಾರಂಭವಾದ ಈ ವಿವಾದ ಜಮೀನ್ದಾರರು ಗೇಣಿಗೆ ಗದ್ದೆಯನ್ನು ಕೊಡುವುದಿಲ್ಲವೆಂದು ಪಟ್ಟು ಹಿಡಿದರು. ಇದರಿಂದಾಗಿ ಪ್ರಾರಂಭವಾದ ಸತ್ಯಾಗ್ರಹ ಕಾಂಗ್ರೆಸ್ಸಿಗರು, ಸಮಾಜವಾದಿಗಳಿಂದ, ಪತ್ರಿಕೆಗಳಿಂದ ದಿನದಿಂದ ದಿನಕ್ಕೆ ಹೊಸ ತಿರುವು ಪಡೆಯಿತು.

## ಹೋರಾಟ ಮಾಡಿದ ಸಂಘರ್ಷಗಳು ಮತ್ತು ಹಿನ್ನೆಡೆ

ಕಾಗೋಡು ಸತ್ಯಾಗ್ರಹ ಕೊಳಗದ ತಕರಾರುಗಳಿಂದ ಪ್ರಾರಂಭವಾಗಿದ್ದು, ಅದು ಅಲ್ಲಿಗೆ ನಿಲ್ಲಲೇ ಇಲ್ಲ. ಜಮೀನ್ದಾರರು ರೈತ ಸಂಘದ ಯಾವ ಬೇಡಿಕೆಗಳಿಗೂ ಒಪ್ಪಲಿಲ್ಲ. ಅಲ್ಲದೆ ಗೇಣಿದಾರರಿಗೆ ತಮ್ಮ ಜಮೀನನ್ನು ಬಿಟ್ಟುಕೊಡುವಂತೆ ಒತ್ತಾಯ ಮಾಡುತ್ತಿದ್ದರು. ಇದನ್ನು ನೋಡಿದ ಕಡಿದಾಳ್‌ರು ಒಡೆಯರ ನಡುವೆ ಸಂಧಾನಕ್ಕೆ ಪ್ರಯತ್ನಪಟ್ಟರು. ಭೂಮಾಲೀಕರಾದ ಕಾಗೋಡು ಗೌಡರು[5] ಮತ್ತು ಅವರ ಸಹೋದರ ಗುರುವೆಗೌಡರು ಕಾಂಗ್ರೆಸ್ ಪಕ್ಷದಲ್ಲೇ ಇದ್ದರು. ಕಡಿದಾಳ್‌ರು ಕಾಂಗ್ರೆಸ್ ಪಕ್ಷದಿಂದ ಮೈಸೂರು ಸರ್ಕಾರದ ಪ್ರತಿನಿಧಿಯಾಗಿದ್ದರು. ಒಡೆಯರು ತಮ್ಮ ಪಕ್ಷದಲ್ಲಿದ್ದರಿಂದಲೇ ಅವರು ರಾಜಿ ಒಪ್ಪಂದ ಮಾಡಬೇಕೆಂದರು. ಆದರೆ ಒಡೆಯರು ಮತ್ತು ಅವರ ಸಹೋದರರು ಇಬ್ಬರೂ ಸಂಧಾನಕ್ಕೆ ಒಪ್ಪುವ ಮನಸ್ಸಿತ್ತು. ಆದರೆ ಅನೇಕ ಭೂಮಾಲೀಕರು ಗೇಣಿರೈತರು ಸಂಧಾನಕ್ಕೆ ಬರದಂತೆ ಒತ್ತಡ ಹೇರಿದರು.

ಕಾಗೋಡಿನ ಒಡೆಯರು ಸಂಧಾನಕ್ಕೆ ಬಾರದೇ ಇರುವ ಮುಖ್ಯ ಉದ್ದೇಶವೇನೆಂದರೆ ಗೇಣಿದಾರರ ಬೇಡಿಕೆಗೆ ಮನ್ನಣೆ ನೀಡಿದರೆ, ಮುಂದೆ ಇಂತಹ ಸಂದರ್ಭಗಳು ಬಂದ ಸಮಯದಲ್ಲಿ ಗೇಣಿದಾರರ ಕೈ ಮೇಲಾಗುತ್ತದೆಂದು ನಿರ್ಧರಿಸಿದ್ದು. ಯಾವ ಸಂದರ್ಭ ಬಂದರೂ ರಾಜಿಗೆ ಒಪ್ಪಬಾರದೆಂದು ಒಡೆಯರಿಗೆ ಒತ್ತಡ ಹೇರಿದರು. ತಾಲ್ಲೂಕಿನ ಎಲ್ಲ ಭೂಮಾಲೀಕರೂ ಇದಕ್ಕೆ ತಮ್ಮ ಸಂಪೂರ್ಣ ಬೆಂಬಲ ನೀಡುವುದಾಗಿ ಹೇಳಿದರು. ಇದರಿಂದಾಗಿ ಕಾಗೋಡಿನ ಒಡೆಯರು ರಾಜಿ ಒಪ್ಪಂದಕ್ಕೆ ಬರಲಿಲ್ಲ. ಇದೇ ಸಂದರ್ಭದಲ್ಲಿ ಮಲೆನಾಡ ರೈತಸಂಘದ ಕಾರ್ಯದರ್ಶಿಗಳಾದ ಡಿ.ಮೂಕಪ್ಪ ಮತ್ತು ಗಣಪತಿಯಪ್ಪನವರು ಸಂಧಾನಕ್ಕೆ ಒಡೆಯರು ಬರಲಿಲ್ಲವಾದ ಕಾರಣ ಸತ್ಯಾಗ್ರಹವನ್ನು ಅನಿವಾರ್ಯವಾಗಿ ಮಾಡಲೇಬೇಕಾಗುತ್ತದೆ ಎಂದು ತಿಳಿಸಿದರು (ಕಡಿದಾಳ್, ೧೯೯೦:೧೨೫).

ಕಡಿದಾಳ್‌ರು ಇಂತಹ ಸಂದಿಗ್ಧ ಪರಿಸ್ಥಿತಿಯನ್ನು ಸರ್ಕಾರದ ಮುಂದಿಡಲು ಪ್ರಯತ್ನಿಸಿದರು. ಕಡಿದಾಳ್‌ರು ಸ್ವತಹ ಕಾಂಗ್ರೆಸ್ ಪಕ್ಷದ ಶಾಸಕರಾಗಿದ್ದರಿಂದ ಎಲ್ಲವನ್ನು ಕಾನೂನಿನ ಮೂಲಕವೇ ಬಗೆಹರಿಸಲು ಪ್ರಯತ್ನಿಸುತ್ತಿದ್ದರು. ಈ ನಿಟ್ಟಿನಲ್ಲಿ ೧೯೫೦ರ ಡಿಸೆಂಬರ್‌ನಲ್ಲಿ ಮಲೆನಾಡು ರೈತ ಸಂಘದ ಒಂದು ನಿಯೋಗ ಬೆಂಗಳೂರಿಗೆ ಹೋಗಿ ಸರ್ಕಾರದ ಮಟ್ಟದಲ್ಲಿ ಕಾಗೋಡು ವಿವಾದವನ್ನು

ಬಗೆಹರಿಸಬೇಕೆಂದು ತೀರ್ಮಾನ ಮಾಡಿದರು. ಈ ನಿಯೋಗದಲ್ಲಿ ರೈತ ಸಂಘದ ಅಧ್ಯಕ್ಷರಾದ ಕಡಿದಾಳ್ ಮಂಜಪ್ಪ ಕಾರ್ಯದರ್ಶಿಯಾದಂಥ ಬಸವಾನಿ ರಾಮಶರ್ಮ, ಗಣಪತಿಯಪ್ಪ ಮತ್ತು ಡಿ.ಮೂಕಪ್ಪ ಬರಿಸಿನ ದ್ಯಾವಪ್ಪ ಇದ್ದರು. ಕೊಳಗದ ತಕರಾರಿಗೆ ಸಂಬಂಧಿಸಿದಂತೆ ರೆವಿನ್ಯೂ ಸಚಿವ ಸಿದ್ಧಯ್ಯ ಮತ್ತು ಗೃಹ ಸಚಿವ ಮರಿಯಪ್ಪನವರಿಗೆ ತಿಳಿಸಿದರು. ಹಾಗೆಯೇ ಗೇಣಿದಾರರ ಅನೇಕ ಸಮಸ್ಯೆಗಳ ಬಗ್ಗೆ ಮಂತ್ರಿಗಳೊಂದಿಗೆ ಕಡಿದಾಳ್‌ರು ಚರ್ಚಿಸಿದರು. ಕಡಿದಾಳ್‌ರು ಕೇಳಿದ ಯಾವುದೇ ಪ್ರಶ್ನೆಗೂ ಕಂದಾಯ ಮಂತ್ರಿಯಾದ ಸಿದ್ಧಯ್ಯನವರು ಸಮರ್ಪಕವಾದ ಉತ್ತರ ನೀಡದೆ "ಆಗಲಿ ನೋಡೋಣ ರಿಪೋರ್ಟು ತರಿಸಿಕೊಳ್ಳುತ್ತೇವೆ, ಕಮಿಟಿ ಮಾಡುತ್ತೇವೆ" ಎಂಬ ಉತ್ತರಗಳನ್ನು ಕೊಟ್ಟರು. ಇಂತಹ ಸಮಸ್ಯೆಯನ್ನು ಕಾಗೋಡು ಮಾತ್ರ ಎದುರಿಸುತ್ತಿರಲಿಲ್ಲ. ಕೆಲವು ಹಳ್ಳಿಗಳಲ್ಲೂ ಎದುರಿಸುತ್ತಿದ್ದರು. ಆದರೆ ಸರಕಾರ ಮಾತ್ರ ಈ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸಲಿಲ್ಲ. ಕಡಿದಾಳ್‌ರು ಮಂತ್ರಿಗಳು ಸಮರ್ಪಕವಾದ ಉತ್ತರ ನೀಡಬಹುದೆಂದು ಯೋಚಿಸಿದ್ದರು ಹಾಗೂ ಗೇಣಿದಾರರ ರಕ್ಷಣೆಗಾಗಿ ಒಂದು ಶಾಸನ ಹೊರಡಿಸುವಂತೆ ಕೇಳಿಕೊಂಡರು. ಆದರೆ ಆಗಿನ ಸಚಿವ ಮಂಡಲಿಯಲ್ಲಿದ್ದವರಲ್ಲಿ ಗೇಣಿದಾರರ ಬೇಡಿಕೆ ವಿಚಾರದಲ್ಲಿ ಸಹಾನುಭೂತಿ ಹೊಂದಿರಲಿಲ್ಲ. ಆದ ಕಾರಣ ಮನವಿಗೆ ಪುರಸ್ಕಾರ ದೊರೆಯಲಿಲ್ಲವೆಂದು ಹೇಳಿದ್ದರು (ಕಡಿದಾಳ್, ೧೯೯೦:೧೨೫).

ಕಡಿದಾಳ್ ಮಂಜಪ್ಪನವರ ಮನವಿಯನ್ನು ಸರ್ಕಾರ ಮನ್ನಿಸಲಿಲ್ಲ ಎಂದಾಕ್ಷಣ ಸತ್ಯಾಗ್ರಹಿಗಳು ತನ್ನ ನಿಲುವನ್ನು ಘಟ್ಟಿಗೊಳಿಸಿಕೊಂಡರು. ಈ ನಡುವೆ ಕಡಿದಾಳ್‌ರು ಮತ್ತೆ ಗುರುವಯ್ಯಗೌಡರಿಗೆ ರೈತ ಸಂಘದ ಮೂಲಕ ಒಂದು ಅಧಿಕೃತ ಮನವಿಯನ್ನು ಕಳಿಸಿದರು. ಏನೇ ಪ್ರಯತ್ನಪಟ್ಟರೂ ಗೌಡರು ಜಗ್ಗಲಿಲ್ಲ. "ಈ ಗೇಣೀ ಅಳತೆ ಅನಾದಿ ಕಾಲದಿಂದ ಬಂದದ್ದು. ಈಗ ಇದ್ದಕ್ಕಿದಂತೆ ಬದಲಾಯಿಸಲು ಬರುವುದಿಲ್ಲ ಎಂದರು. ನಮ್ಮ ಹಾಗೆ ಬೇರೆ ಕಡೆಯಲ್ಲೂ ಇದೇ ಗೇಣಿ ಅಳತೆ ಇದೆ. ತಡಗಳಲೆ, ಸೈದೂರು, ಸೊಳೂರು, ಕಾನ್ಲೆ, ಮಂಡಗಳಲಿ, ಬರದವಳ್ಳಿ, ಸಿರಿವಂತೆ ಹೀಗೆ ತಾಲ್ಲೂಕಿನ ಅನೇಕ ಕಡೆಗಳಲ್ಲಿ ಈಗಲೂ ಇದೇ ಗೇಣಿಯಿದೆಯೆಂದು ವಾದಿಸಿದರು. ಹಾಗೆಯೇ ತಮ್ಮ ಜಮೀನು ಬಿಟ್ಟು ಬಿಡಿ ಎಂದು ಅವರು ವಾದಿಸಿದರು. ಕೊಳಗದ ವಿಷಯ ನ್ಯಾಯಾಲಯದಲ್ಲಿ ಇತ್ಯರ್ಥ ಮಾಡಿಕೊಳ್ಳೋಣ ಎಂದು ಅವರು ವಾದಿಸಿದರು (ರಾಜಶೇಖರ್, ೧೯೮೦:೬೭).

ಈ ನಡುವೆ ೧೯೫೧ ಜನವರಿ ತಿಂಗಳಿನಲ್ಲಿ ಕಡಿದಾಳ್‌ರು ಶಿವಮೊಗ್ಗ ಜಿಲ್ಲಾ ಕಲೆಕ್ಟರ್ ಸಮ್ಮುಖದಲ್ಲಿ ಇತ್ಯರ್ಥ ಮಾಡಬೇಕೆಂದು ತೀರ್ಮಾನಿಸಿದರು. ಭೂಒಡೆಯರಾದ ಗುರುವಯ್ಯಗೌಡರು, ಗಣಪತಿಯಪ್ಪ, ಕಲೆಕ್ಟರ್ ಹಾಗೂ ಕಡಿದಾಳ್‌ರು ಮಾತುಕತೆ ನಡೆಸಿದರು. ಅದು ಕೂಡಾ ಫಲಕಾರಿಯಾಗಲಿಲ್ಲ. ಇಷ್ಟೊಂದು ಒತ್ತಡ ತಂದರೂ ಒಡೆಯರು ಯಾವುದೇ ಒಂದು ತೀರ್ಮಾನಕ್ಕೆ ಬರಲಿಲ್ಲ. ಇಡೀ ಸಾಗರ ತಾಲ್ಲೂಕಿನ ಜಮೀನ್ದಾರರೆಲ್ಲರೂ ಸೇರಿ ನಿರ್ಧಾರ ಮಾಡಿದ್ದರಿಂದ ಈ ವಿಷಯ ಕುರಿತಂತೆ ಸೋಷಲಿಸ್ಟ್

ಪಕ್ಷದ ಅಧ್ಯಕ್ಷರಾಗಿದ್ದ ಸಿ.ಜಿ.ಕೆ.ರೆಡ್ಡಿಯವರು 'The genesis of kagodu' ಎಂಬ ಮುದ್ರಿತ ಕಿರು ಹೊತ್ತಿಗೆಯಲ್ಲಿ ಕಾಗೋಡು ಒಡೆಯರ ನಿಲುವನ್ನು ತಿಳಿಸಿದ್ದಾರೆ.

ಒಡೆಯರು ಕೂಡ ಕಾಂಗ್ರೆಸ್ ಪ್ರತಿನಿಧಿಯಾಗಿದ್ದರು. ಒಡೆಯರ ಪ್ರಭಾವದಿಂದ ಸರ್ಕಾರ ಅವರ ಪರವಾದ ಧೋರಣೆಯನ್ನು ತೋರಿತು. ಸಂಧಾನ ಮುರಿದು ಬಿದ್ದ ನಂತರ ಜಿಲ್ಲಾ ಕಲೆಕ್ಟರ್ ಕಾಗೋಡಿಗೆ ಬಂದು ಇಲ್ಲಿಯ ಒಕ್ಕಲುಗಳಿಗೆ "ನೀವೆಲ್ಲ ಗೌಡರ ಜಮೀನು ಬಿಟ್ಟು ಬಿಡಿ" ಇಲ್ಲವಾದರೆ ಅವರು ಹೇಳಿದ ಹಾಗೆ ಕೇಳಿಕೊಂಡು ಇರಿ" ಎಂದು ಹೆದರಿಸಿದರಂತೆ. ಈ ಮೂಲಕ ಗೇಣಿದಾರ ಪರ ಸರ್ಕಾರ ಎಷ್ಟರ ಮಟ್ಟಿಗೆ ಇದೆ ಎಂಬುದು ತಿಳಿಯುತ್ತದೆ. ಸರ್ಕಾರ ಮುಂದೆಯೂ ಯಾವುದೇ ಗಂಭೀರವಾದ ಕ್ರಮ ಕೈಗೊಳ್ಳಲಿಲ್ಲ. ಕಾಗೋಡು ಚಳುವಳಿ ತೀವ್ರಗೊಂಡಂತೇ ಆಸಕ್ತಿ ತೋರಿಸಿದರು. ಭೂಮಾಲೀಕರ ಪರವಾಗಿಯೇ ಸರ್ಕಾರ ತನ್ನ ನಿಲುವನ್ನು ಹೊಂದಿತ್ತು. ಇಂಥ ಸಮಯದಲ್ಲಿ ಕಡಿದಾಳ್‌ರ ಗೇಣೀದಾರರ ಸಂಘಟನೆಯೇ ಮುಖ್ಯವಾಗಿದ್ದು, ಗೇಣೀದಾರರೆಲ್ಲರೂ ಗೌಡರ ಮಾತುಗಳನ್ನು ಮೀರಿ ಅವರ ಜಮೀನಿನಲ್ಲಿ ಉಳುಮೆ ಮಾಡಲು ಮುಂದಾದರು. ಈ ಸಂದರ್ಭದಲ್ಲಿ ಗೌಡರ ಆಳುಗಳು, ಗೇಣಿದಾರರ ಉಳುಮೆಯ ವಸ್ತುಗಳನ್ನೆಲ್ಲಾ ಕಸಿದು, ಅವರನ್ನು ಅಟ್ಟಿಸಿಕೊಂಡು ಹೋಗಿ ಹೊಡೆದರು. ಒಡೆಯರು ಅಮಾನವೀಯವಾಗಿ ನಡೆಸಿಕೊಂಡರು. ಅಲ್ಲದೆ ಕ್ರಿಮಿನಲ್ ಆಪಾದನೆಯ ಮೇಲೆ ಕೇಸುಗಳನ್ನು ಹಾಕಿದರು. ಇಂತಹ ಸಮಯದಲ್ಲಿ ಗೌಡರ ಅಮಾನವೀಯ ಕೃತ್ಯವನ್ನು ತಡೆಯಲು ೧೯೫೧ರ ಏಪ್ರಿಲ್ ೧೪ರಂದು ರೈತ ಸಂಘದ ಸಭೆಯನ್ನು ರೈತ ಸಂಘದ ಅಧ್ಯಕ್ಷರು ಕರೆದರು. ಈ ಸಭೆಗೆ ಕಾಗೋಡಿನ ಪಕ್ಕದ ಹಳ್ಳಿಯವರು ಬಂದಿದ್ದರು. ಸಭೆಯನ್ನು ಉದ್ದೇಶಿಸಿ ಕಡಿದಾಳ್‌ರು ಮಾತಾನಾಡಿ ಭೂಮಾಲೀಕರ ಹೇಯ ಕೃತ್ಯವನ್ನು ಖಂಡಿಸಿದರು. ಅತಿರೇಕದ ವರ್ತನೆಯನ್ನು ನಿಲ್ಲಿಸುವಂತೆ ಕೇಳಿಕೊಂಡಿದ್ದರು. ಕಡಿದಾಳ್‌ರು ಸರ್ಕಾರದಲ್ಲಿ ಇದ್ದುಕೊಂಡು ಇಷ್ಟೊಂದು ಹೋರಾಟ ನಡೆಸುತ್ತಿದ್ದರು. ಆದರೆ ಉಳಿದ ಅಧಿಕಾರ ಸ್ಥಾನದಲ್ಲಿರುವವರು ಯಾರು ಗೇಣಿ ರೈತರ ಪರವಿರಲಿಲ್ಲ. ಇದು ಕಡಿದಾಳ್‌ರ ಗೇಣಿದಾರರ ಪರವಿರುವಂತಹ ಕಾಳಜಿಯನ್ನು ತೋರಿಸುತ್ತದೆ (ಸಂದರ್ಶನ : ಗಣಪತಿಯಪ್ಪ, ೨೦.೦೫.೨೦೦೮).

ಚಳುವಳಿ ತೀವ್ರಗೊಂಡಂತೆ ೧೭-೪-೫೧ರಂದು ಸಾಗರ ತಾಲ್ಲೂಕು ಗ್ರಾಮಗಳ ಪರಿಸ್ಥಿತಿಯನ್ನು ಅಧ್ಯಯನ ಮಾಡಲು ಗೃಹಸಚಿವರಾದ ಮರಿಯಪ್ಪನವರು ಬರುತ್ತಾರೆಂದು ಕರಪತ್ರಗಳ ಪ್ರಚಾರ ನಡೆದಿತ್ತು. ಗೇಣಿದಾರರು ಹೆಚ್ಚಿನ ಸಂಖ್ಯೆಯಲ್ಲಿ ಸೇರಿದ್ದರು. ಮರಿಯಪ್ಪನವರು ಬರದೇ ಇದ್ದದ್ದು ಗೇಣೀದಾರರು ಸರ್ಕಾರದ ಮೇಲಿನ ನಂಬಿಕೆಯನ್ನು ಕಳೆದುಕೊಳ್ಳಲು ಅವಕಾಶ ಮಾಡಿತು. ಸರ್ಕಾರದ ಈ ರೀತಿ ನೀತಿಯಿಂದಾಗಿ ಗೇಣಿದಾರರ ಸ್ಥಿತಿಯನ್ನು ಸುಧಾರಿಸುವ ಗುರಿಯನ್ನು ಹೊಂದಿದ್ದ ಕಡಿದಾಳ್‌ರ ಮೇಲಿನ ನಂಬಿಕೆಯನ್ನೂ ಕಳೆದುಕೊಳ್ಳಲು ಒಂದು ಕಾರಣವಾಗಿತ್ತು. ಹಾಗೆಯೇ ಸರ್ಕಾರ ಗೇಣಿದಾರರಿಗೆ ಬೆಂಬಲ ನೀಡುವುದಿಲ್ಲವೆಂದು ತಿಳಿದ ನಂತರ ರೈತಸಂಘದ ಸದಸ್ಯರೊಂದಿಗೆ ಮಾತಾಡಿ ಸತ್ಯಾಗ್ರಹದ

ಭೂಮಿಕೆಯನ್ನು ಕಡಿದಾಳ್‌ರು ಸಿದ್ಧಪಡಿಸಿದ್ದರು. ಗೇಣಿದಾರರ ಪರ ಹೋರಾಡುತ್ತಿದ್ದ ಕಡಿದಾಳ್‌ರು ಸರ್ಕಾರದ ವಿರುದ್ಧ ಸಾಂಕೇತಿಕ ಉಪವಾಸ ಸತ್ಯಾಗ್ರಹವನ್ನು ಆಚರಿಸಿದರು (ರಾಜಶೇಖರ್ ೧೯೮೦:೭೩) (ಮನುಜಮತ, ಮಾಸಪತ್ರಿಕೆ, ೨೦೦೦:೫).

ರೈತ ಚಳುವಳಿ ಮಾತ್ರ ದಿನದಿನಕ್ಕೆ ಗಂಭೀರ ಸ್ವರೂಪವನ್ನು ಪಡೆಯುತ್ತಿತ್ತು. ಈ ನಡುವೆ ಚಳುವಳಿಗಾರರು ಹೋರಾಟ ಮಾಡಲು ಕಡಿದಾಳ್‌ರ ಒಪ್ಪಿಗೆಯನ್ನು ಪಡೆಯಲು ಕಾಯುತ್ತಿದ್ದರು. ಆದರೆ ಗಾಂಧೀವಾದಿಯಾದ ಕಡಿದಾಳ್‌ರು ಹಿಂಸಾತ್ಮಕ ಕೃತ್ಯವನ್ನು ತಡೆಯಲು ಪ್ರಯತ್ನಿಸಿದರು. ಕೊನೆಯದಾಗಿ ಒಂದು ಪ್ರಯತ್ನ ಮಾಡಬೇಕು ಎಂಬ ಉದ್ದೇಶದಿಂದ ಕಡಿದಾಳ್‌ರು ಮತ್ತೆ ಬೆಂಗಳೂರಿಗೆ ಹೊರಟು ಅಲ್ಲಿ ಶಿವಮೊಗ್ಗ ಜಿಲ್ಲೆಯವರಾದ ರೆವಿನ್ಯೂ ಮಂತ್ರಿ ಹೆಚ್.ಸಿದ್ದಯ್ಯನವರನ್ನು ಭೇಟಿ ಮಾಡಿದರು. ಸರ್ಕಾರ ಈ ಸಮಸ್ಯೆಯನ್ನು ಇತ್ಯಾರ್ಥಪಡಿಸಬೇಕೆಂದು ಕೇಳಿಕೊಂಡರು. ಕಂದಾಯ ಮಂತ್ರಿಯವರು ಇದಕ್ಕೆ ತಾತ್ಕಾಲಿಕ ಪರಿಹಾರವೆಂಬಂತೆ "ರಾಜಿ ಒಪ್ಪಂದದಿಂದ" ಬಗೆಹರಿಸುತ್ತೇವೆ ಎಂದು ಹೇಳಿದರು. ಹಾಗೆಯೇ ಶಿವಮೊಗ್ಗ ಜಿಲ್ಲಾಧಿಕಾರಿಯವರಿಗೆ ಘಟನೆಯನ್ನು ಪರಿಶೀಲಿಸುವಂತೆ ಹೇಳಿದರು. ಜಿಲ್ಲಾಧಿಕಾರಿಗಳು ಈ ಸಮಸ್ಯೆಯನ್ನು ಪರಿಹರಿಸಲು ಪ್ರಯತ್ನಪಟ್ಟರೂ ಆಗಲಿಲ್ಲ. ಸರ್ಕಾರ ಗೇಣಿದಾರರ ವಿಚಾರದಲ್ಲಿ ಸಹಾನುಭೂತಿಯಿಲ್ಲದೆ ಪರಿಸ್ಥಿತಿ ಡೋಲಾಯಮಾನ ನೀತಿಯನ್ನು ಅನುಸರಿಸಿತು. ಸರ್ಕಾರದ ಬಗ್ಗೆ ತಿರಸ್ಕಾರ ಬರಬಾರದೆಂಬುದೇ ಇವರ ಉದ್ದೇಶವಾಗಿತ್ತು.

ಸರ್ಕಾರದ ಈ ರೀತಿಯ ನಿಲುವನ್ನು ನೋಡಿ ರೈತ ಸಂಘ ೧೯೫೧ರ ಮೇ ತಿಂಗಳಿನ ೮ರಂದು ಸಾಗರದಲ್ಲಿ ರೈತ ಸಭೆಯನ್ನು ಕರೆಯಲಾಯಿತು. ಈ ಸಭೆಯಲ್ಲಿ ಕಡಿದಾಳ್‌ರು ಒಂದು ನಿರ್ಧಾರವನ್ನು ಹೇಳಿದರು. "೨೬ನೇ ತಾರೀಕಿನ ಒಳಗೆ ಸರಕಾರ ಕಾಗೋಡು ಚಳುವಳಿಯಲ್ಲಿ ಮಧ್ಯ ಪ್ರವೇಶಿಸದೆ ಇದ್ದರೆ ಮಹಾಸತ್ಯಾಗ್ರಹ ಕೈಗೊಳ್ಳಬೇಕಾಗುತ್ತದೆ" ಎಂದು ಘೋಷಿಸಿದರು. ರೈತ ಸಂಘವು ಇದಕ್ಕೆ ಸಂಪೂರ್ಣ ಬೆಂಬಲವನ್ನು ನೀಡಿತು ಎಂಬುದಾಗಿ ಪ್ರಜಾವಾಣಿಯಲ್ಲಿ ವರದಿಯಾಗಿದೆ (ಪ್ರಜಾವಾಣಿ, ೧೯.೦೫.೧೯೮೧). ಆದರೆ ಸರ್ಕಾರ ಯಾವುದೇ ನಿಲುವನ್ನು ಸೂಚಿಸಲಿಲ್ಲ. ಕಡಿದಾಳ್‌ರು ಮೈಸೂರು ಪ್ರಾಂತ್ಯದ ಪ್ರಮುಖ ಕಾಂಗ್ರೆಸ್ ನಾಯಕರಾಗಿದ್ದರೂ ಕೂಡ ಸರ್ಕಾರ ಇದಕ್ಕೆ ಪ್ರೋತ್ಸಾಹ ನೀಡಲಿಲ್ಲ. ಸತ್ಯಾಗ್ರಹಿಗಳ ಮೇಲೆ ಲಾಠಿ ಚಾರ್ಜ್ ಮತ್ತು ಬಂಧನಗಳು ಮುಂದುವರೆದವು. ಸರ್ಕಾರದ ಮೇಲೆ ನಿರಂತರ ಒತ್ತಡ ತಂದಿದ್ದರಿಂದಾಗಿ ಒಂದು ಸಂಧಾನದ ಸಭೆಯನ್ನು ಕರೆಯಲಾಯಿತು ಎಂದು ಕಡಿದಾಳರು ತಮ್ಮ ಆತ್ಮಕಥೆಯಲ್ಲಿ ಹೇಳಿಕೊಂಡಿದ್ದಾರೆ. ೧೮.೦೫.೧೯೫೧ರಲ್ಲಿ ಸರಕಾರ ಶಿವಮೊಗ್ಗದ ಸರ್ಕ್ಯೂಟ್ ಹೌಸಿನಲ್ಲಿ ಈ ಸಭೆಯನ್ನು ನಡೆಸಿತು. ಇದರಲ್ಲಿ ರಾಜ್ಯದ ರೆವಿನ್ಯೂ ಕಮೀಷನರ್ ಒಳಾಡಳಿತ ಇಲಾಖೆಯ ಉಪನಿರ್ದೇಶಕರು ಹಾಗೂ ಶಿವಮೊಗ್ಗ ಜಿಲ್ಲೆಯ ಕಲೆಕ್ಟರ್ ಭಾಗವಹಿಸಿದರು. ರೈತಸಂಘದ ಪದಾಧಿಕಾರಿಗಳಾದ ಗುರುವಯ್ಯಗೌಡರು, ಕಡಿದಾಳ ಮಂಜಪ್ಪ, ಗಣಪತಿಯಪ್ಪ ಮತ್ತು ಮೂಕರಪ್ಪನವರು

ಭಾಗವಹಿಸಿದ್ದರು. ಭೂಮಾಲೀಕರ ಪರ ಭಾಗವಹಿಸಿದ್ದ ಗುರುವಯ್ಯಗೌಡರು ಕೊಳಗದ ಅಳತೆಯಲ್ಲಿ ಯಾವ ತೀರ್ಮಾನಕ್ಕೂ ಬರುವುದಿಲ್ಲವೆಂದು ತಿಳಿಸಿದರು. ಆಗ ಸರ್ಕಾರ ಸಮಸ್ಯೆಯನ್ನು ಇತ್ಯಾರ್ಥಪಡಿಸಲು ಬೇರೆಯದೆ ಆದ ಪರಿಹಾರ ಸೂಚಿಸಿತು. ಇದಕ್ಕೆ ಬದಲಾಗಿ ಗೌಡರು ಗೇಣಿ ಒಕ್ಕಲುಗಳು ವ್ಯವಸಾಯ ಮಾಡುತ್ತಿದ್ದ ಭೂಮಿಯನ್ನು ಬಿಟ್ಟುಕೊಡಲು ಒಪ್ಪಿಕೊಂಡರು. ಆದರೆ ಗೇಣಿ ಮಾಡುತ್ತಿದ್ದ ಎಲ್ಲ ಜಮೀನನ್ನು ಒಕ್ಕಲುಗಳಿಗೆ ಹಿಂದಿರುಗಿಸದೇ ೨೦ ಎಕರೆಯಷ್ಟು ಸ್ವತಃ ಸಾಗುವಳಿಗೆ ಇಟ್ಟುಕೊಳ್ಳುವುದಾಗಿ ತಿಳಿಸಿದರಂತೆ. ಇದಕ್ಕೆ ಸರ್ಕಾರ ಸಮ್ಮತಿ ಸೂಚಿಸದೇ ಇದ್ದಾಗ ಒಡೆಯರು ಕಾಗೋಡಿನ ಜಮೀನಿಗೆ ಬಂದಲಾಗಿಕೆಂಜಿಗಾಪುರದ ಜಮೀನನ್ನು ಬಿಡುವುದಾಗಿ ಒಪ್ಪಿಕೊಂಡಿದ್ದರಂತೆ. ಈ ಸಂಧಾನ ಕುರಿತಂತೆ ಸ್ಪಷ್ಟವಾದ ಮಾಹಿತಿಯನ್ನು ಗಣಪತಿಯಪ್ಪನವರು ಸಂದರ್ಶನದ ಸಮಯದಲ್ಲಿ ನೀಡಲಿಲ್ಲ. ಕಡಿದಾಳರು ಸಂಧಾನ ಕುರಿತಂತೆ ೩೧.೦೫.೧೯೫೧ರ ಪ್ರಜಾವಾಣಿ ಪತ್ರಿಕೆಯಲ್ಲಿ ಹೀಗೆ ಹೇಳಿಕೆ ಕೊಟ್ಟಿದ್ದಾರೆ. ''ಕಾಗೋಡಿನ ರೈತರೆಲ್ಲರೂ ಕಾಗೋಡು ಭೂಮಿಯನ್ನು ಬಿಡುವುದಕ್ಕೆ ರೈತರ ಪರವಾಗಿ ತಾವು ಒಪ್ಪಿಕೊಳ್ಳುತ್ತೇವೆ ಎಂದು ಗಣಪತಿಯಪ್ಪ ಮತ್ತು ಮೂಕಪ್ಪ ಸಭೆಯಲ್ಲಿ ತಿಳಿಸಿದರು''. ಮಂಜಪ್ಪನವರ ಹೇಳಿಕೆ ಪ್ರಕಾರ ಕೆಂಜಿಗಾಪುರದ ಜಮೀನಿಗೆ ತೆರಳುವ ಸೂಚನೆಯನ್ನು ಮುಂದಿಟ್ಟವರು ಗಣಪತಿಯಪ್ಪ ಎಂದು ತಿಳಿಯುತ್ತದೆ. ಆದರೆ ಈ ಸಂಧಾನದ ಸಭೆ ನಡೆದ ಒಂದೆರಡು ದಿನದಲ್ಲೇ ರೈತ ಸಂಘದ ಕಾರ್ಯದರ್ಶಿಗಳು ಮಂಜಪ್ಪನವರಿಗೆ ತಿಳಿಯದಂತೆ ಸಮಾಜವಾದಿ ಮುಖಂಡರಾದ ಶಾಂತವೇರಿ ಗೋಪಾಲಗೌಡರನ್ನು ಅವರ ಪಕ್ಷದ ಕೆಲವು ಕಾರ್ಯಕರ್ತರನ್ನು ಭೇಟಿ ಮಾಡಿ ಮಂಜಪ್ಪನವರು ಸಿದ್ಧಗೊಳಿಸಿದ ಕಾಗೋಡು ಸತ್ಯಾಗ್ರಹದ ಭೂಮಿಕೆಯನ್ನು ಅವರ ಕೈಗೆ ಕೊಟ್ಟರು. ಇದರಿಂದ ಅಸಮಾಧಾನಗೊಂಡ ಮಂಜಪ್ಪನವರು ''ತಾವು ಹಾಕಿದ ಅಡಿಪಾಯದ ಮೇಲೆ ಸಮಾಜವಾದಿಗಳು ಸೌಧ ನಿರ್ಮಿಸಿದ್ದರೆಂದು'' ಪತ್ರಿಕೆಗೆ ಹೇಳಿಕೆ ಕೊಟ್ಟು ಚಳುವಳಿಯಿಂದ ಹಿಂದೆ ಸರಿದರು (ಕಡಿದಾಳ್ ೧೯೯೦:೧೨೭), (ರಾಮದಾಸ್, ೨೦೦೭:೫).

ಸೀಮಿತ ಅವಧಿಯಲ್ಲಿ, ಸೀಮಿತ ಪ್ರದೇಶದಲ್ಲಿ ಸ್ವಾತಂತ್ರ್ಯ ನಂತರ ನಡೆದ ಭೂ ಹೋರಾಟಗಳಲ್ಲಿ ಕಾಗೋಡು ಚಳುವಳಿಯು ಮಹತ್ವದ್ದಾಗಿದೆ. ಹೀಗೆ ಐತಿಹಾಸಿಕ ಮಹತ್ವ ಪಡೆದ ಈ ಚಳುವಳಿ ನಡೆಯಲು ಸಂಘಟನೆ ಒದಗಿಸಿಕೊಟ್ಟವರು ಕಡಿದಾಳ್ ಮಂಜಪ್ಪನವರು. ಚಳುವಳಿ ನಡೆಯಲು ಪೂರಕವಾದಂತಹ ಅಂಶಗಳನ್ನು ಒದಗಿಸಿಕೊಟ್ಟು ಚಳುವಳಿ ಒಂದು ಹಂತ ತಲುಪಿದಾಗ ಕಡಿದಾಳರು ಹಿಂದೆ ಸರಿಯುತ್ತಾರೆ. ನಂತರ ಸಮಾಜವಾದಿಗಳು ಈ ಚಳುವಳಿಯನ್ನು ಮುಂದುವರಿಸಿದ್ದರು. ಕಾಗೋಡು ಚಳುವಳಿಯಲ್ಲಿ ಕಡಿದಾಳ್‌ರ ಪಾತ್ರ ಮತ್ತು ಅವರು ಸತ್ಯಾಗ್ರಹದಿಂದ ವಿಮುಖಗೊಳ್ಳಲು ಕಾರಣ ಕುರಿತಂತೆ ಹಲವಾರು ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಇದಕ್ಕೆ ಸಂಬಂಧಿಸಿದ ಮಾಹಿತಿಯನ್ನು ಚಳುವಳಿ ಸಂದರ್ಭದಲ್ಲಿದ್ದಂತಹ ಹೋರಾಟಗಾರರನ್ನು ಸಂದರ್ಶನ ಮಾಡಿದ್ದರಿಂದ, ಮೂಲ ದಾಖಲೆಗಳಿಂದ, ಪತ್ರಿಕೆಯಿಂದ ಹಾಗೂ

ಕಾಗೋಡು ಚಳುವಳಿಗೆ ಸಂಬಂಧಪಟ್ಟ ಕೃತಿಗಳಿಂದ ಸಾಕಷ್ಟು ಲಭ್ಯವಾಗಿದೆ. ಸಕ್ರಿಯ ರೈತಪರವಿದ್ದ ಕಡಿದಾಳ್‌ರ ಹೋರಾಟವು ಹಿನ್ನೆಲೆಯಾಗುವುದಕ್ಕೆ ಎರಡು ಮುಖ್ಯ ಅಂಶಗಳನ್ನು ಗುರುತಿಸಬಹುದು. ಅದರಲ್ಲಿ ಒಂದನೆಯದು ಸರ್ಕಾರದ ಪ್ರತಿಕ್ರಿಯೆ ಹಾಗೂ ಎರಡನೆಯದು ಸಮಾಜವಾದಿ ಪಕ್ಷದ ಪ್ರವೇಶ. ಈ ಎರಡು ಅಂಶಗಳ ವಿವರಗಳು ಹೀಗಿವೆ :

ವೆಂಕಪ್ಪಗೌಡ ಅವರ ಅಭಿಪ್ರಾಯದಂತೆ ಕಡಿದಾಳ್‌ರು ರಾಜಕೀಯದಲ್ಲೂ ಇದ್ದುದು ಕಂಡುಬರುತ್ತದೆ. ಕಾಂಗ್ರೆಸ್ ಪಕ್ಷದ ಉನ್ನತ ನಾಯಕರು ಹಾಗೂ ಮೈಸೂರು ಸರ್ಕಾರದ ಸದಸ್ಯರು ಆಗಿದ್ದರು. ಕಡಿದಾಳ್‌ರು ಚಳುವಳಿಯ ನಾಯಕರಾಗಿದ್ದು ಗೇಣಿದಾರರ ಪರವಾಗಿ ಸರಕಾರ ಮತ್ತು ಭೂಮಾಲೀಕರ ಮಧ್ಯೆ ಸೇತುವೆಯಾಗಿ ಸಂಧಾನದ ಮೂಲಕ ಈ ಸಮಸ್ಯೆಯನ್ನು ಬಗೆಹರಿಸುವಲ್ಲಿ ಸತತ ಪ್ರಯತ್ನದಲ್ಲಿ ತೊಡಗಿದರು. ಆದರೆ ಕಡಿದಾಳ್‌ರ ಪ್ರಯತ್ನಕ್ಕೆ ಸರ್ಕಾರ ಮಾನ್ಯತೆ ನೀಡಲಿಲ್ಲ. ಸರ್ಕಾರ ಮತ್ತು ಕಾಂಗ್ರೆಸ್ ಪಕ್ಷದಲ್ಲಿದ್ದವರೆಲ್ಲ ಭೂಮಾಲೀಕರೇ ಆಗಿರುವುದು ಇದಕ್ಕೆ ಮುಖ್ಯ ಕಾರಣವಾಯಿತು. ಕಾಗೋಡು ಚಳುವಳಿಗೆ ಕಾರಣವಾದಂತಹ ಒಡೆಯರು ಕಾಂಗ್ರೆಸ್ ಪಕ್ಷದಲ್ಲೇ ಇದ್ದವರು. ಕಡಿದಾಳ್‌ರು ಮಾತ್ರ ಸಾಮಾನ್ಯ ಗೇಣಿದಾರರ ಮಗನಾಗಿದ್ದರು. ಕಡಿದಾಳ್‌ರು ಅಧಿಕಾರಾವಧಿಯಲ್ಲಿ ಭೂಸುಧಾರಣೆ ತರಬೇಕೆಂದರು ಕೂಡ ಇವರಿಗೆ ಈ ಸಮಸ್ಯೆಯೇ ಎದುರಾಗುತ್ತಿದ್ದವು (೪ನೇ ಅಧ್ಯಾಯದಲ್ಲಿ ವಿವರಿಸಲಾಗಿದೆ). ಇದರೊಂದಿಗೆ ಪ್ರಸ್ತುತ ಕಾನೂನುಗಳು ಭೂಒಡೆಯರ ಪರವಾಗಿದ್ದವು. “ರೈತರ ಪಹಣಿ ಮುಂತಾದವು ಭೂಮಾಲೀಕರ ಹೆಸರಿನಲ್ಲಿಯೇ ಇದ್ದವು. ರೈತರು ಕೊಟ್ಟ ಗೇಣಿಗೆ ರಶೀದಿ ಇರಲಿಲ್ಲ. ಅವರು ಗೇಣಿ ಭೂಮಿ ಎಂಬುದಕ್ಕೆ ಹಕ್ಕು ಸ್ಥಾಪಿಸಲು ಕಾನೂನು ಬದ್ದ ಆಧಾರಗಳು ಇರಲಿಲ್ಲ. ಆದ್ದರಿಂದ “ಗೇಣಿದಾರರು ಒಡೆಯರು ಭೂಮಿ ಬಿಟ್ಟು ಬಿಡಲಿ. ಅದಕ್ಕೆ ಪ್ರತಿಯಾಗಿ ಸರ್ಕಾರಿ ಭೂಮಿ ನೀಡಿ, ಗೇಣಿ ರೈತರಿಗೆ ಪುನರ್ ಕಲ್ಪಿಸುತ್ತದೆಂದು ಸರಕಾರವೇ ಹೇಳತೊಡಗಿತು (ವೆಂಕಪ್ಪಗೌಡ, ೨೦೦೧:೬೯). ಆದರೆ ಭೂ ಹೋರಾಟಕ್ಕೆ ಸಂಬಂಧಿಸಿದಂತೆ ಕಡಿದಾಳ್‌ರ ಯೋಚನೆಯೇ ಬೇರೆಯಾಗಿತ್ತು. ಇದುವರೆಗೂ ಗೇಣಿದಾರರು ದುಡಿದು, ಜಮೀನು ಬಿಟ್ಟು ಕೊಡುವುದು ರೈತರ ಸಮಸ್ಯೆಗೆ ಪರಿಹಾರವಲ್ಲ. ಇದು ಲಕ್ಷಾಂತರ ಗೇಣಿದಾರರ ಸಮಸ್ಯೆ. ಗೇಣಿ ಸಮಸ್ಯೆಗೆ ಶಾಶ್ವತವಾಗಿ ಪರಿಹಾರ ದೊರಕಿಸಬೇಕೆವಿನಃ ಕೆಲವು ಗೇಣಿದಾರರಿಗೆ ಸರಕಾರದಿಂದ ಜಮೀನು ಕೊಡಿಸುವ ವಿಷಯವಲ್ಲ ಎಂಬುದು ಕಡಿದಾಳ್‌ರ ನಿಲುವಾಗಿತ್ತು (ಶ್ರೀನಿವಾಸಯ್ಯ, ೧೯೯೬:೩೦-೩೧).

ಕಾಗೋಡು ಚಳುವಳಿ ತೀವ್ರವಾದಂತೆ ಭೂಮಾಲೀಕರು ಮತ್ತು ಸರ್ಕಾರದ ಪ್ರತಿನಿಧಿಗಳು ಚಳುವಳಿಗೆ ದಿನಕ್ಕೊಂದು ಬಣ್ಣಕೊಡಲು ಪ್ರಾರಂಭಿಸಿದರು. ಜಿ.ರಾಜಶೇಖರ್ ಅವರು ಹೇಳುವಂತೆ ಇದನ್ನು ಆರ್ಥಿಕ ಹೋರಾಟವೆಂದು ಪರಿಗಣಿಸದೆ ಜಾತೀಯ ಘರ್ಷಣೆಯೆಂದು ಕರೆದಿರುವ ಬಗ್ಗೆ ಮಾಹಿತಿ ನೀಡುತ್ತಾರೆ. ಹೀಗೆ ಕರೆದವರಲ್ಲಿ ಕಾಂಗ್ರೆಸ್ ನಾಯಕರಾದ ಕೆಂಗಲ್ ಹನುಮಂತಯ್ಯ ಮತ್ತು

ಹೆಚ್.ಎಂ.ಚನ್ನಬಸಪ್ಪನವರು ಪ್ರಮುಖರಾಗಿದ್ದಾರೆ (ಪ್ರಜಾವಾಣಿ, ೨.೦೬.೧೯೫೧). ಇವರು ಒಡೆಯರ ಪರವಾಗಿದ್ದು, ಕಾಗೋಡಿನಲ್ಲಿ ದೀವರೆ ಹೆಚ್ಚಿನ ಸಂಖ್ಯೆಯಲ್ಲಿದ್ದು ಕೆ.ಜಿ.ಒಡೆಯರ ಮನೆತನದ ಮೇಲೆ ಚಳುವಳಿ ನಡೆಯುತ್ತದೆಯೆಂದು'' ಪತ್ರಿಕೆಯಲ್ಲೂ ಹೇಳಿಕೆ ಕೊಟ್ಟಿದ್ದಾರೆ. ಈ ತರಹದ ಹೊಸ ಅಂಶಗಳನ್ನು ಹುಟ್ಟು ಹಾಕುತ್ತಿದ್ದಂತೆ ಚಳುವಳಿಯು ತೀವ್ರವಾಗತೊಡಗಿತು. ಇದರಿಂದ ಕಡಿದಾಳ್‌ರು ಹೋರಾಟಕ್ಕೆ ಒಂದು ಅಂತಿಮ ಹಂತ ನೀಡಬೇಕೆಂದು ಕಡಿದಾಳ್‌ರು ಸಂಧಾನಕ್ಕೆ ಮುಂದಾದರು ಎಂಬುದಾಗಿ ತಿಳಿಯುತ್ತದೆ (ರಾಜಶೇಖರ್, ೧೯೮೦:೭೫). ಸಂಧಾನದ ಸಮಯದಲ್ಲಿ ಕೊಳಗದ ವಿಷಯ ಮತ್ತು ಜಮೀನಿನ ವಿಷಯ ಮಾತನಾಡುತ್ತಾರೆ. ''ಕಾಗೋಡಿನ ಒಡೆಯರು ಗೇಣಿ ಭೂಮಿಯನ್ನು ಬಿಡಬೇಕು ಎಂದು ಸರ್ಕಾರದವರು ಹೇಳಿದಾಗ, ಒಡೆಯರು ನೀರಾವರಿ ಜಮೀನಾದ ಕಾಗೋಡಿನ ಜಮೀನಿಗೆ ಬದಲಾಗಿ ಅವರಿಗೆ ಅನಂದಪುರದ ಹೋಬಳಿ ಕೆಂಜಿಗಾಪುರದ ಬಳಿ ಇರುವ ಜಮೀನನ್ನು ಬಿಡುವುದಾಗಿ ತಿಳಿಸಿದರು. ಅಲ್ಲಿಯ ಇಡೀ ಗ್ರಾಮದ ಭೂಮಿ ಸರಕಾರದ ವಶದಲ್ಲಿದ್ದು, ಕಾಗೋಡು ಭೂಮಿಗಿಂತ ಉತ್ತಮವಾಗಿದೆ. ಗೇಣಿದಾರರಿಗೆ ಕಾಗೋಡಿನಲ್ಲಿ ಗೇಣಿಗೆ ಬಿಟ್ಟಷ್ಟೇ ಜಮೀನನ್ನು ಆ ಗ್ರಾಮದಲ್ಲಿ ಕೊಡುತ್ತದೆ, ಪುರ್ನವಸತಿಯ ಎಲ್ಲ ಸೌಲಭ್ಯಗಳನ್ನು ಸರಕಾರವೇ ಮಾಡಿಸಿಕೊಡುತ್ತದೆ'' ಎಂದು ಜಿಲ್ಲಾಧಿಕಾರಿಗಳು ಸರಕಾರದ ಪರವಾಗಿ ತೀರ್ಮಾನ ಹೇಳಿದರು. ಈ ಒಪ್ಪಂದಕ್ಕೆ ರೈತ ಸಂಘದ ಸದಸ್ಯರು  ಒಪ್ಪಿದ ಹಾಗೆ ಕಂಡುಬರುತ್ತದೆ. ಆದರೆ ಕಡಿದಾಳ್ ಮಂಜಪ್ಪನವರು ಯಾವುದೇ ಸಮ್ಮತಿಯನ್ನು ಸೂಚಿಸಲಿಲ್ಲ. ಆದರೆ ಕಡಿದಾಳ್‌ರು ಸಂಧಾನವಾದ ಒಂದೆರಡು ದಿನಗಳಲ್ಲೇ ''ತಾವು ಸತ್ಯಾಗ್ರಹದಿಂದ ದೂರ ಉಳಿಯುವುದಾಗಿ ಪತ್ರಿಕೆ ಹೇಳಿಕೆಯನ್ನು ಕೊಟ್ಟರು''. ಪತ್ರಿಕೆ ಹೇಳಿಕೆಯ ಪ್ರಕಾರ ತಿಳಿಯುವುದೇನೆಂದರೆ ''ಕಾಗೋಡಿನ ರೈತರೆಲ್ಲರೂ ಭೂಮಿ ಬಿಡುವುದಕ್ಕೆ ಅವರ ಪರವಾಗಿ ತಾವು ಒಪ್ಪಿಕೊಳ್ಳುತ್ತೇವೆ ಎಂದು ಗಣಪತಿಯಪ್ಪ ಮತ್ತು ಮೂಕಪ್ಪ ಸಭೆಯಲ್ಲಿ ತಿಳಿಸಿದರು''ಎನ್ನುವ ಅಂಶ ಕಂಡುಬಂದಿದೆ (ಪ್ರಜಾವಣಿ, ೩೧-೫-೧೯೫೧). ಈ ನಡುವೆ ಕಡಿದಾಳ್‌ರು ಸತ್ಯಾಗ್ರಹದಿಂದ ಹಿಂದೆ ಸರಿಯಲು ಮುಖ್ಯವಾದ ಕಾರಣವನ್ನು ಪ್ರಜಾವಾಣಿ ಪತ್ರಿಕಾ ವರದಿಯಲ್ಲಿ ಹೀಗೆ ಬಂದಿದೆ.

> ''ಕಾಗೋಡಿನ ಪೂರಾ ಜಮೀನನ್ನು ಬಿಟ್ಟುಕೊಟ್ಟರೆ ಸೋಷಲಿಸ್ಟರ ಪ್ರವೇಶದಿಂದ ಸಮಸ್ಯೆ ತೊಡಕಾಗಬಹುದೆಂದು ನಾನು ಗಣಪತಿಯಪ್ಪ ಮತ್ತ ಮೂಕಪ್ಪನವರಿಗೆ ತಿಳಿಸಿದೆ. ಹಾಗೆ ಏನೂ ಆಗುವುದಿಲ್ಲವೆಂದು ಅವರು ಹೇಳಿದರು. ನಂತರ ಈ ಸಲಹೆಯನ್ನು ಬಹಿರಂಗವಾಗಿ (ಸಂಧಾನದ) ಸಭೆಯಲ್ಲೇ ತಿಳಿಸಿದೆ. ಜಮೀನ್ದಾರರು ಯಾವ ಮಾತೂ ಆಡಲಿಲ್ಲ. ಅವರೊಡನೆ ಯಾವ ಒಪ್ಪಂದವೂ ಆಗಲಿಲ್ಲ. ಮೂರನೆಯ ದಿನ ಬೆಳಗ್ಗೆ ಶ್ರೀ ಮೂಕಪ್ಪನವರೂ ಗಣಪತಿಯಪ್ಪನವರೂ ನನ್ನ ಮನೆಗೆ ಬಂದು ಡಿ.ಸಿ.ಯವರಿಗೆ ಅರ್ಜಿ ಕೊಡತಕ್ಕ ಬಗ್ಗೆ (ಕೆಂಜಿಗಾಪುರದ) ಜಮೀನಿನ ಸರ್ವೆ ನಂಬರುಗಳನ್ನು

ತಿಳಿಸುವುದಾಗಿ ಹೇಳಿ ಹೋದರು. ನಂತರ ಅವರು ಸೋಷಲಿಸ್ಟರ ಸಮ್ಮುಖದಲ್ಲಿ ರೈತರ ಸಭೆ ಸೇರಿಸಿ ಸಾಗರ ರೈತ ಸಂಘವು ಸೋಷಲಿಸ್ಟರ ಬೆಂಬಲವನ್ನು ಪಡೆದು ಸತ್ಯಾಗ್ರಹ ಹೂಡಬೇಕೆಂದು ನಿರ್ಣಯ ಮಾಡುವುದಾಗಿ ನನಗೆ ತಿಳಿದುಬಂತು. ಮಲೆನಾಡ ರೈತ ಸಂಘದವರೇ ನಿಸ್ಸಹಾಯಕತೆಯಿಂದ ಜಮೀನು ಬಿಟ್ಟು ಕೊಡುವ ನಿರ್ಧಾರಕ್ಕೆ ಬಂದರೆಂದು ಸೋಷಲಿಸ್ಟರು ಅಪಪ್ರಚಾರ ಮಾಡಲು ತೊಡಗಿದ್ದಾರೆ." (ಪ್ರಜಾವಾಣಿ ೩೧-೫-೧೯೫೧)

ಕಡಿದಾಳ್‌ರು ಕೊಟ್ಟ ಈ ಮೇಲಿನ ಪತ್ರಿಕಾ ಹೇಳಿಕೆಯ ಪ್ರಕಾರ ತಿಳಿಯುವುದೇನೆಂದರೆ ಸಂಧಾನಕ್ಕೆ ಮೊದಲು ಒಪ್ಪಿದವರು ಗಣಪತಿಯಪ್ಪ ಮತ್ತು ಮೂಕಪ್ಪ. ಅದೇ ಪ್ರಕಾರ ಕಡಿದಾಳ್‌ರು ಒಪ್ಪಿರುವುದು ಕಂಡುಬರುತ್ತದೆ. ಆದರೆ ಸೋಷಲಿಸ್ಟರ ಒತ್ತಡದಿಂದಾಗಿ ಸಂಧಾನ ಮುರಿದುಬಿತ್ತೆಂದು ಮತ್ತು ಸೋಷಲಿಸ್ಟರು ಚಳುವಳಿಗೆ ಪ್ರವೇಶ ಪಡೆದರೆಂದು ತಿಳಿಯುತ್ತದೆ. ಗಣಪತಿಯಪ್ಪ ಮತ್ತು ಮೂಕಪ್ಪನವರು ಸಂಧಾನಕ್ಕೆ ಒಪ್ಪಿ ನಂತರ ಸೋಷಲಿಸ್ಟರು ಸೇರಿದ್ದು, ಜೊತೆಗೆ ಸೋಷಲಿಸ್ಟರು ರೈತ ಸಂಘವನ್ನು ಅಸಹಾಯಕ ಎಂದು ಅಪಪ್ರಚಾರ ಮಾಡಿದ್ದರೆಂದು ಕಡಿದಾಳ್‌ರು ಬೇಸತ್ತು "ತಾವು ಹಾಕಿದ ಅಡಿಪಾಯದ ಮೇಲೆ ಸಮಾಜವಾದಿಗಳು ಸೌಧ ನಿರ್ಮಿಸುತ್ತಾರೆಂದು" ಚಳುವಳಿಯಿಂದ ನಿರ್ಗಮಿಸಿದರು (ಕಡಿದಾಳ್, ೧೯೯೦:೧೨೭), (ರಾಮದಾಶ್, ೨೦೦೭:೫).

ಕಡಿದಾಳ್‌ರ ಈ ಹೇಳಿಕೆಯನ್ನು ಮೂಕಪ್ಪನವರು ಸಮರ್ಥಿಸಿಕೊಂಡಿದ್ದಾರೆ. ತಾವು ಈ ಸಂಧಾನಕ್ಕೆ ಮೊದಲು ಒಪ್ಪಿಕೊಂಡಿದ್ದೆಂದು, ಆದರೆ ಗಣಪತಿಯಪ್ಪನವರು ಒಪ್ಪಲಿಲ್ಲ ಎಂಬ ವಿಷಯವನ್ನು ಜಿ.ರಾಜಶೇಖರವರು ತಿಳಿಸುತ್ತಾರೆ (ರಾಜಶೇಖರ್, ೧೯೮೦:೮೫).

ಈ ದ್ವಂದ್ವತೆಯನ್ನು ಕುರಿತಂತೆ ಸಂದರ್ಶನದ ಸಂದರ್ಭದಲ್ಲಿ ಪ್ರಸ್ತುತ ಸಂಶೋಧಕರು ಗಣಪತಿಯಪ್ಪನವರನ್ನು ಕೇಳಿದಾಗ ಅವರು ಹೀಗೆ ಹೇಳಿದರು. "ಕಡಿದಾಳ್‌ರು ಸತ್ಯಾಗ್ರಹದಿಂದ ಬೇಸತ್ತು ಹೋಗಲಿಲ್ಲ. ಸಂಧಾನದ ನಂತರ ನಾನು, ಕಡಿದಾಳ್‌ರು ಮತ್ತು ಗೋಪಾಲಗೌಡರು ಮೂರು ಜನ ಸೇರಿ ಒಪ್ಪಂದ ಮಾಡಿಕೊಂಡಿದ್ದೆವು (ಒಪ್ಪಂದದ ಬಗ್ಗೆ ಸಮರ್ಪಕವಾದ ಮಾಹಿತಿ ನೀಡಲಿಲ್ಲ). ನಾನು ರೈತ ಸಂಘಟನೆಯನ್ನು ಮಾಡುವುದು, ಕಡಿದಾಳ್‌ರು ಸರ್ಕಾರದಲ್ಲೇ ಇದ್ದುಕೊಂಡು ಸುಧಾರಣೆಯನ್ನು ಮಾಡುವುದಾಗಿ ಹಾಗೂ ಗೋಪಾಲಗೌಡರು ಹೋರಾಟದ ಮೂಲಕ ಭೂಮಿಯನ್ನ ಪಡೆಯುವುದಾಗಿ ಒಪ್ಪಂದವಾಗಿತ್ತು. ಗೋಪಾಲಗೌಡರ ಮುಖ್ಯ ಉದ್ದೇಶ ಇಲ್ಲಿ ರೈತ ಚಳುವಳಿಯ ಮುಖಂಡತ್ವದೊಂದಿಗೆ ಪಕ್ಷ ಬೆಳೆಸುವುದೇ ಆಗಿತ್ತು. ಕಡಿದಾಳ್‌ರು ಮಲೆನಾಡ ಭಾಗದಲ್ಲಿ ಗೇಣಿದಾರ ಸಂಘಟನೆ ಬೆಳೆಯುವುದಕ್ಕೆ ಕಾರಣವಾಗಿದ್ದರು ಹಾಗೂ ಈ ಚಳುವಳಿ ನಡೆಯುವುದಕ್ಕೆ ಪ್ರಾರಂಭದಲ್ಲಿ ನಾನು, ಬಸವಾನಿ ರಾಮಶರ್ಮರು ಮತ್ತು ಕಡಿದಾಳ್

ಮಂಜಪ್ಪನವರು ಕಾರಣವಾಗಿದ್ದರು. ಘರ್ಷಣೆ ಪ್ರಾರಂಭವಾದಾಗ ಗೋಪಾಲಗೌಡರ ಹಾಗೆ ಕಡಿದಾಳ್‌ರು ಯುದ್ಧಕ್ಕೆ ಬರಲಿಲ್ಲ. ಅವರು ಚಳುವಳಿಯಲ್ಲಿ ಭಾಗವಹಿಸಿದ್ದರೆ, ಕಾಂಗ್ರೆಸ್ಸಿನೋರು ಪಕ್ಷದಿಂದ ಹೊರಗೆ ಹಾಕ್ತಾರೆ. ಹೊರಗೆ ಹಾಕಿದ್ಮೇಲೆ ನಾಳೆ ಎಲೆಕ್ಷನ್ ನಲ್ಲಿ ಟಿಕೇಟ್ ಕೊಡ್ತಾರಾ? ಟಿಕೇಟ್ ಕೊಡದೇ ಹೋದ್ರೆ ಎಲೆಕ್ಷನ್‌ಗೆ ನಿಲ್ಲಕಾಗಲ್ಲ. ಅಧಿಕಾರಕ್ಕೆ ಬರೋಕಾಗಲ್ಲ. ಅಧಿಕಾರಕ್ಕೆ ಹತ್ತತ್ರ ಇದ್ದೋರು. ೧೯೫೨ರಲ್ಲಿ ಏನು ಚೆಂಗಲರೆಡ್ಡಿಯವರ ಗೌರ್ಮೆಂಟು ಬಂತು, ಅದೇ ಗೌರ್ಮೆಂಟಲ್ಲೇ ಅವರು ಮಂತ್ರಿ ಆಗೇ ಬಿಟ್ರಲ್ಲ. ಭೂಸುಧಾರಣೆ ಕಾನೂನು ಪ್ರಾರಂಭ ಮಾಡಿ ಟೆನ್ಸಿಸಿ ಬಿಲ್ ತಂದಿದ್ದೇ ಅವರು'' (ಸಂದರ್ಶನ : ಗಣಪತಿಯಪ್ಪ, ೨೦.೦೫.೨೦೦೮).

ಹಿ.ಚಿ.ಬೋರಲಿಂಗಯ್ಯನವರ ಸಂದರ್ಶನದಿಂದ ಪಡೆದ ಮಾಹಿತಿಯ ಪ್ರಕಾರ ''ಕಾಗೋಡು ಚಳುವಳಿ ಆರಂಭವಾಗಿದ್ದು ಸ್ವಾತಂತ್ರ್ಯ ಬಂದ ನಂತರ. ಸ್ವಾತಂತ್ರ್ಯ ಬಂದಿದ್ದರಿಂದ ಜನಗಳ ಮೇಲೆ ಸ್ವಾತಂತ್ರ್ಯದ ಎಚ್ಚರವಾಗಿ ಮತ್ತೆ ಹೋರಾಟಗಳು ಪ್ರಾರಂಭವಾದವು. ಸೀಮಿತವಾದ ಅವಧಿಯಲ್ಲಿ ಸೀಮಿತವಾದ ಪ್ರದೇಶದಲ್ಲಿ ನಡೆದಂತ ಚಳುವಳಿಯಾಗಿದೆ. ಈ ಚಳುವಳಿಗೆ ಮೂಲ ಪ್ರೇರಣೆ ನೀಡಿದವರು ಕಡಿದಾಳ್ ಮಂಜಪ್ಪ. ೧೯೪೫ರಿಂದಲೇ ಮಲೆನಾಡಿನ ಭಾಗದಲ್ಲಿ ಗೇಣಿದಾರರ ಪರ ಸಂಘಟನೆ ಮಾಡಲು ಪ್ರಾರಂಭಿಸಿದರು. ನಂತರ ಸಾಗರದ ರೈತ ಸಂಘ ಸ್ಥಾಪನೆಯೊಂದಿಗೆ ಕಾಗೋಡು ಚಳುವಳಿಯನ್ನು ಪ್ರಾರಂಭಿಸಿದರು. ರೈತರೆಲ್ಲ ಒಗ್ಗಟ್ಟಾಗಿ, ಒಟ್ಟಾಗಿ ಚಳುವಳಿಯನ್ನು ಪ್ರಾರಂಭಿಸಿದರು. ನಂತರ ಸಮಾಜವಾದಿಗಳು ಭಾಗವಹಿಸಿದರು. ಕಡಿದಾಳ್‌ರು ಹಿಂದೆ ಸರಿದರು. ಸಮಾಜವಾದಿಗಳು ಪಕ್ಷ ಬೆಳೆಸುವ ಉದ್ದೇಶದಿಂದ ಭಾಗವಹಿಸಿದರು. ಚಳುವಳಿಯಿಂದ ಹಿಂದೆ ಸರಿದಿದ್ದು ಒಂದು ದೃಷ್ಟಿಯಲ್ಲಿ ಒಳ್ಳೆಯದೆ ಆಯ್ತು. ಮುಂದೆ ಭೂಸುಧಾರಣೆ ತರಲು ಸಾಧ್ಯವಾಯಿತು. ಭೂಸುಧಾರಣೆಯು ಫಲ ಕೊಡುವವರೆಗೂ ಹೋರಾಟ ಮಾಡಿದರು. ಹಂಗೆ ನೋಡಿದ್ರೆ ಕಾಯ್ದೆಗಳು ರೂಪುಗೊಳ್ಳುವುದಕ್ಕೆ ಕಾರಣರಾದರು ಮುಖ್ಯವಾಗುತ್ತಾರೆ ಅನ್ನೋದಾದ್ರೆ ಅದು ಬಹಳ ಮುಖ್ಯವಾಗುತ್ತದೆ. ಆ ದೃಷ್ಟಿಯಿಂದ ಕಡಿದಾಳ್ ಮಂಜಪ್ಪನವರು ಕಾಗೋಡು ಚಳುವಳಿಯ ನಂತರ ಬಹಳ ಪ್ರಮಿನೆಂಟ್ ಆದಂತಹ ತಳಪಾಯ ಹಾಕಿದ್ದಾರೆ (ಸಂದರ್ಶನ ಬೋರಲಿಂಗಯ್ಯ, ೦೮.೦೭.೨೦೦೮).

ಈ ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಕಂಡುಬರುವುದೆನೆಂದರೆ ಕಾಗೋಡು ಚಳುವಳಿ ನಡೆಯಲು ಕಾರಣರಾಗಿದ್ದ ಕಡಿದಾಳ್ ಮಂಜಪ್ಪನವರು ಗಾಂಧಿತತ್ವದ ಪ್ರತಿಪಾದಕರಾಗಿ ಸತ್ಯ, ಅಹಿಂಸೆ, ಸತ್ಯಾಗ್ರಹ ಎಂಬ ಅಂಶದಿಂದ ಸತ್ಯಾಗ್ರಹದ ಫಲವನ್ನು ಸಂಧಾನದ ಮೂಲಕ ಪಡೆಯಲು ಪ್ರಯತ್ನಿಸಿದ್ದು, ಅದರ

ಫಲವನ್ನು ಪಡೆಯಲು ಪ್ರಯತ್ನಿಸಿದ್ದು ಕಂಡುಬರುತ್ತದೆ. ಅದು ಒಂದು ನಿರ್ಣಾಯಕ ಹಂತವನ್ನು ಕೂಡ ತಲುಪಿತ್ತು. ಸರ್ಕಾರವು ಸಂಧಾನದಲ್ಲಿ ಭಾಗವಹಿಸಿದ್ದು, ಕಾಗೋಡು ಗೇಣಿದಾರರ ಮುಖಂಡರಾದ ಗಣಪತಿಯಪ್ಪ ಮತ್ತು ಮೂಕಪ್ಪನವರು ರೈತರ ಪರವಾಗಿ ಒಪ್ಪಿಕೊಂಡಿದ್ದರು. ಈ ಚಳುವಳಿ ಕಡಿದಾಳ್‌ರ ಮುಖಂಡತ್ವದಲ್ಲಿ ಅಂತಿಮ ಹಂತವನ್ನು ತಲುಪಿದ ಹಾಗೆ ಕಂಡುಬರುತ್ತದೆ (ರಾಜಶೇಖರ್, ೧೯೮೦:೮೫).

ಕಡಿದಾಳ್‌ರು ಚಳುವಳಿಯಲ್ಲಿ ಹಿಂದೆ ಸರಿದುದ್ದನ್ನು ಕುರಿತಂತೆ ಬಿ.ಪೀರ್‌ಬಾಷ ಅವರು ''ಸಮಾಜವಾದಿ ಹೋರಾಟಗಾರರ ಸಂದರ್ಶನ'' ಎಂಬ ಕೃತಿಯಲ್ಲಿ ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸಿದ್ದಾರೆ.

> ''ಕಾಗೋಡಿನ ಜಮೀನ್ದಾರರ ವಿರುದ್ಧವಾಗಿ ಮಲೆನಾಡು ರೈತಸಂಘ ಗೇಣಿ ಮಾಪನದಲ್ಲಾದ ಅನ್ಯಾಯ ಸರಿಪಡಿಸಲು ಹೋರಾಟ ಆರಂಭಿಸಿತು. ಕಾಂಗ್ರೆಸ್ ಆಡಳಿತದ ಸರ್ಕಾರವಿದ್ದ ಸಂದರ್ಭದಲ್ಲಿ ಗೇಣಿದಾರರ ಪರವಾದ ಹೋರಾಟದ ನಾಯಕತ್ವವು ಕಾಂಗ್ರೆಸಿಗರಾಗಿದ್ದ ಕಡಿದಾಳ್ ಮಂಜಪ್ಪನವರದೇ ಆಗಿತ್ತು. ಹಾಗೂ ಜಮೀನ್ದಾರರು ಕೂಡ ಕಾಂಗ್ರೆಸ್ಸಿಗರೇ ಆಗಿದ್ದರು. ಗೇಣಿದಾರರ ಹೋರಾಟ ಜಮೀನ್ದಾರರು ಹಾಗೂ ಸರ್ಕಾರದ ವಿರುದ್ಧ ನಿರ್ಣಯಕ ಸಂಘರ್ಷದ ಹಂತ ತಲುಪಿದಾಗ ಕಡಿದಾಳ್‌ರು ಹೋರಾಟದಿಂದ ಹಿಂದಕ್ಕೆ ಸರಿದರು. ಈ ಹಂತದಲ್ಲಿ ಸಮಾಜವಾದಿಗಳು ಕಾಗೋಡಿನ ಸತ್ಯಾಗ್ರಹವನ್ನು ಪ್ರವೇಶಿಸಿ ನಾಯಕತ್ವ ವಹಿಸಿಕೊಂಡರಾದರೂ ಅದು ಗೋಪಾಲಗೌಡರ ಅತೀವ ರೈ ಕಾಳಜಿಯ ವೈಯಕ್ತಿಕ ತೀರ್ಮಾನವೇ ಆಗಿತ್ತು ಎಂಬುದಾಗಿ ತಿಳಿಸಿದ್ದಾರೆ'' (ಪೀರ್‌ಬಾಷ, ೨೦೦೭:೧೨-೧೩).

ಜಿ.ರಾಜಶೇಖರ್ ಅವರು ಸಮಾಜವಾದಿ ಪಕ್ಷ ಕಾಗೋಡು ಚಳುವಳಿಯಲ್ಲಿ ಪಾಲ್ಗೊಂಡಿದ್ದರ ಕುರಿಂತೆ ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸಿದ್ದಾರೆ.

> ''ಕಾಗೋಡು ಚಳುವಳಿ ಪ್ರಾರಂಭವಾದಂತಹ ಸಂದರ್ಭದಲ್ಲಿ ಸೋಷಿಯಲಿಸ್ಟ್ ಪಕ್ಷ ರಾಜ್ಯದಲ್ಲಿ ತುಂಬ ಬಲಹೀನ ಸ್ಥಿತಿಯಲ್ಲಿತ್ತು...... ಆಗ ಮೈಸೂರು ಸಂಸ್ಥಾನದ ಸೋಷಿಯಲಿಸ್ಟ್ ಪಕ್ಷದ ಅಧ್ಯಕ್ಷ ಸಿ.ಜಿ.ಕೆ.ರೆಡ್ಡಿ ಅವರಿಗೂ ಕಾಗೋಡಿನ ವಿಷಯದಲ್ಲಿ ಅಷ್ಟೊಂದು ಆಸಕ್ತಿ ಇರಲಿಲ್ಲವಂತೆ.... ಸಿ.ಜಿ.ಕೆ.ರೆಡ್ಡಿ ಅವರ ಹತ್ತಿರ ಗೋಪಾಲಗೌಡರು ಕಾಗೋಡಿನಲ್ಲಿ ರೈತ ಸತ್ಯಾಗ್ರಹ ಆಗಬೇಕೆಂದು ವಾದಿಸಿದಾಗ ಮೊದಲು ಉದಾಸೀನ ರಾಗಿದ್ದರಂತೆ... ಗೋಪಾಲಗೌಡರು ಹಠ ಹಿಡಿದಿದ್ದರಿಂದ ಪಾಲ್ಗೊಂಡರು ಎಂಬ ಅಂಶವನ್ನು ತಿಳಿಸುತ್ತಾರೆ'' (ರಾಜಶೇಖರ್, ೧೯೮೦:೭೦).

ಈ ಮೇಲ್ಕಂಡ ಎಲ್ಲಾ ಅಂಶಗಳಿಂದ ತಿಳಿಯುವುದೇನೆಂದರೆ ಕಡಿದಾಳ್‌ರು ಕಾಗೋಡು ಚಳುವಳಿಯನ್ನು ಸಂಘಟಿಸಿ, ಭದ್ರ ಬುನಾದಿ ಹಾಕಿದ್ದು, ನಂತರ ಚಳುವಳಿಯಿಂದ ಕಡಿದಾಳರು ವಿಮುಖರಾದರು ಎನ್ನುವುದಕ್ಕೆ ಇಲ್ಲಿ ಏಕಮುಖವಾದ ಕಾರಣಗಳು ದೊರೆಯುವುದಿಲ್ಲ. ಇಲ್ಲಿ ಸ್ಪಷ್ಟವಾಗುವ ವಿಚಾರವೆಂದರೆ ಕಾಗೋಡು ಚಳುವಳಿಯನ್ನು ಕಡಿದಾಳ್‌ರು ರೂಪಿಸಿದ ಭೂಮಿಕೆಯ ಆಧಾರದ ಮೇಲೆ ಪ್ರಾರಂಭವಾಗಿದ್ದು, ಹಾಗೆಯೇ ಅವರು ಕೇವಲ ಚಳುವಳಿಗಾಗಿ ಚಳುವಳಿ ಮಾಡಿದವರಲ್ಲ. ಕೇವಲ ಅಧಿಕಾರದ ದಾಹದ ಧ್ಯೇಯೋದ್ದೇಶವು ಅವರಲ್ಲಿರಲಿಲ್ಲ. ವೈಯಕ್ತಿಕ ಲಾಭದ ಆಸೆಯಂತೂ ಖಂಡಿತ ಇರಲಿಲ್ಲ. ಏಕೆಂದರೆ ಅವರು ರಾಜಕೀಯದಲ್ಲಿ ಪ್ರಮಾಣಿಕವಾಗಿದ್ದರು (ರಾಜಶೇಖರ್, ೧೯೮೦:೧೩೬). ಗಾಂಧಿವಾದಿಗಳಾದ ಇವರು ಸತ್ಯ, ಅಹಿಂಸೆ, ಸತ್ಯಾಗ್ರಹ ಎಂಬ ಅಂಶದ ಮೂಲಕ ಫಲ ಪಡೆದದ್ದು ಕಂಡುಬರುತ್ತದೆ. ಹಾಗೆಯೇ ಇವರಿಗೆ ರೈತ ಸಮಸ್ಯೆಗಳಿಗೆ ಸಮಾನ ರೀತಿಯಿಂದ ನ್ಯಾಯ ನಿರ್ಣಯವಾಗಬೇಕೆಂಬ ಹಂಬಲವಿತ್ತು. ಕಾಂಗ್ರೆಸ್ ಪಕ್ಷದಲ್ಲಿ ಭೂ ಒಡೆಯರೇ ಇದ್ದರು ಎಂಬ ಕಾರಣಕ್ಕಾಗಿ ಮಾತ್ರವೇ ಈ ನಿರ್ಧಾರವನ್ನು ಅವರು ಕೈಗೊಂಡಿರಲಿಲ್ಲ. ಸಮಾಜವಾದಿ ಪಕ್ಷಗಳ ಏಕಪಕ್ಷೀಯ ನ್ಯಾಯ ನಿರ್ಣಯ, ಕೇವಲ ಪಕ್ಷವನ್ನು ಬೆಳೆಸುವ ದುರುದ್ದೇಶ ಒಂದಕ್ಕೆ ಕಡಿದಾಳ್‌ರು ಸೀಮಿತವಾಗಲಿಲ್ಲ. ಭೂಮಾಲೀಕರು ಹಾಗೂ ಗೇಣಿದಾರರು ಈ ಎರಡು ವರ್ಗಗಳಲ್ಲಿ ತಾರತಮ್ಯಯುಕ್ತ ನಿರ್ಣಯವನ್ನು ಕೈಗೊಂಡರೆ ಮುಂದಾಗಬಹುದಾದ ಅನಾಹುತದ ಬಗ್ಗೆ ಇವರು ಎಚ್ಚರ ವಹಿಸಿದರು. ಆಡಳಿತ ಪಕ್ಷದಿಂದ ಈ ರೀತಿಯ ನಿರ್ಣಯಗಳಿಂದ ಗೊಂದಲಗಳು ಉಂಟಾಗುವ ಸಾಧ್ಯತೆಗಳಿದ್ದವು. ಈ ಕಾರಣಕ್ಕಾಗಿ ಕಡಿದಾಳ್ ಮಂಜಪ್ಪನವರು ಪುನಃ ಆಡಳಿತದಲ್ಲಿದ್ದುಕೊಂಡೇ ಸುಧಾರಣೆಗಳನ್ನು ತರಬಯಸಿದರು. ಈ ಒಂದು ದೃಷ್ಟಿಯಿಂದ ತಟಸ್ಥ ನಿಲುವು ಉಪಯೋಗಕ್ಕೆ ಬಂತು. ಕಡಿದಾಳ್‌ರು ಎಲ್ಲವನ್ನು ಕಾನೂನಿನ ಮೂಲಕ ತರಬೇಕೆಂದು ಬಯಸುತ್ತಿದ್ದರು. ಈ ಪಕ್ಷದಲ್ಲಿದ್ದು ಸರ್ಕಾರ ಅನುಕೂಲಕರವಾದ ಕಾಯ್ದೆಗಳನ್ನು ರೂಪಿಸಬೇಕೆನ್ನುತ್ತಿದ್ದರು. ಈ ಒಂದು ದೃಷ್ಟಿಯಿಂದ ನೋಡಿದರೆ ನಮ್ಮ ರೈತರಿಗೆ ಹೋರಾಟ ಮಾಡಿದವರಿಗಿಂತ ಕಾಯ್ದೆಗಳನ್ನು ರೂಪಿಸಿದವರು ಮುಖ್ಯವಾಗುತ್ತಾರೆ. ಹೋರಾಟ ಮಾಡಿದವರು ನಮ್ಮ ಕಣ್ಣಿಗೆ ಕಾಣಿಸುತ್ತಾರೆ. ಆದರೆ ಖಾಯ್ದೆಗಳು ರೂಪಿಸಿ ಅವುಗಳನ್ನು ಜಾರಿಗೊಳಿಸಲು ಕಾರಣರಾದವರು ಹಿನ್ನೆಲೆಯಲ್ಲಿರುತ್ತಾರೆ (ಸಂದರ್ಶನ : ಬೋರಲಿಂಗಯ್ಯ, ೮.೦೨.೨೦೦೮). ನಂತರದ ದಿನಗಳಲ್ಲಿ ತಂದಂತಹ ಭೂಸುಧಾರಣೆಗಳೇ ಇದಕ್ಕೆ ನಿದರ್ಶನಗಳಾಗಿವೆ. ಈ ದೃಷ್ಟಿಯಿಂದ ಕಡಿದಾಳ್‌ರು ಭೂಮಾಲೀಕರು ಹಾಗೂ ಗೇಣೀದಾರರಿಗೆ ಇಬ್ಬರಲ್ಲಿಯೂ ವ್ಯವಸಾಯಕ್ಕೆ ಸಂಬಂಧಿಸಿದ ಹಕ್ಕು ಬಾಧ್ಯತೆಗಳೆರಡನ್ನು, ಸಂಪತ್ತಿನ ಹಂಚಿಕೆಯನ್ನು ಕುರಿತಂತೆ ಸಮಾನ ರೀತಿಯಲ್ಲಿ ನ್ಯಾಯನಿರ್ಣಯ ಮಾಡಲು ಬಯಸಿ ಕಾಯ್ದೆಗಳ ರೂಪದಲ್ಲಿ ತರಲು ಬಯಸಿದರು.

**ಟಿಪ್ಪಣಿಗಳು**

೧. **ಬಸವಾನಿ ರಾಮಶರ್ಮ :** ಇವರು ತೀರ್ಥಹಳ್ಳಿ ತಾಲ್ಲೂಕಿನ ಬಸವಾನಿ ಗ್ರಾಮದವರು. ವಿಶ್ವನಾಥ ಭಟ್ ಮತ್ತು ನಾಗಮ್ಮನವರ ಕಿರಿಯ ಮಗನಾಗಿ ೦೭.೧೧.೧೯೧೩ರಲ್ಲಿ ಜನಿಸಿದರು. ೧೯೨೭ರಲ್ಲಿ ಗಾಂಧೀಜಿಯ ದರ್ಶನ ಪಡೆಯುವುದರ ಮೂಲಕ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದು, ಬ್ರಿಟಿಷರ ವಿರುದ್ಧ ಕಾರ್ಯಾಚರಣೆಯಲ್ಲಿ ತೊಡಗಿ ಊರೊಳಗೆ ವಿದೇಶಿ ವಸ್ತುಗಳನ್ನು ಧ್ವಂಸಗೊಳಿಸಬೇಕೆಂದು ಕಾಡಿನಲ್ಲಿಯೇ ಕಾಲಕಳೆದವರು. ಭೂಮಾಲೀಕರು ಗೇಣಿ ರೈತರನ್ನ ಶೋಷಣೆಗೆ ಒಳಪಡಿಸಿದವರು ಗೇಣಿಧಾರರಾಗಿದ್ದರು, ಹೊಲದಲ್ಲಿ ಬೇವರು ಸುರಿಸಿ ದುಡಿಯುವವನೊಬ್ಬನಾದರೇ ಅದರ ಫಲ ಪಡೆಯುವವನು ಭೂಮಾಲೀಕನಾಗಿದ್ದನು. ಇದನ್ನು ತಪ್ಪಿಸಲು ೧೯೪೫ರಲ್ಲಿ ತೀರ್ಥಹಳ್ಳಿಯಲ್ಲಿ ರೈತರ ಸಮಸ್ಯೆಯ ಪರಿಹಾರಕ್ಕಾಗಿ ಕಡಿದಾಳ್ ಮಂಜಪ್ಪನವರ ಅಧ್ಯಕ್ಷತೆಯಲ್ಲಿ ಸ್ಥಾಪನೆಯಾದ ಗೇಣಿದಾರರ ಸಂಘದ ಪ್ರಧಾನಕಾರ್ಯದರ್ಶಿಯಾಗಿದ್ದರು. ಮುಂದೆ ಕಾಗೋಡು ಚಳುವಳಿಯಲ್ಲಿಯೂ ಕೂಡ ಸಕ್ರಿಯವಾಗಿ ಭಾಗವಹಿಸದ್ದರು. "ಕಾಗೋಡು ಗೇಣಿ ರೈತರ ಹೋರಾಟ ಹುಟ್ಟು ಹರವು" ಎಂಬ ಲೇಖನವನ್ನು ಬರೆದಿದ್ದಾರೆ (ಬೋರಲಿಂಗಯ್ಯ ಮತ್ತು ಹುಚ್ಚಪ್ಪ ಮಾಸ್ತರ, ೨೦೦೨, ೧೮೭ ೧೮೮).

೨. **ಎಚ್. ಗಣಪತಿಯಪ್ಪ :** ಕಾಗೋಡು ಚಳುವಳಿಯ ರೂವಾರಿ ಎಂದೇ ಕರೆಯಲ್ಪಡುವ ಗಣಪತಿಯಪ್ಪ ನವರು ಹುಟ್ಟಿದ್ದು ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರ ತಾಲ್ಲೂಕಿನ ಹೊಸೂರು ಗ್ರಾಮದಲ್ಲಿ. ಉದ್ಯೋಗ ಅರಸುತ್ತ ಸಿದ್ಧಾಪುರದಿಂದ ಸಾಗರ ತಾಲ್ಲೂಕಿನ ಹಿರೇ ನೆಲ್ಲೂರು ಎಂಬ ಹಳ್ಳಿಯಲ್ಲಿ ಬಂದು ನೆಲೆಸಿದರು. ಈ ಭಾಗದಲ್ಲಿ ಭೂಮಾಲೀಕರಿಂದ ದೀವರ ಸಮುದಾಯಕ್ಕೆ ಆಗುತ್ತಿದ್ದ ಶೋಷಣೆಯನ್ನು ತಪ್ಪಿಸಲು ೧೯೪೮ರಲ್ಲಿ ಸಾಗರ ತಾಲ್ಲೂಕು ರೈತ ಸಂಘವನ್ನು ಸ್ಥಾಪಿಸಿದರು. ಮುಂದೆ ಈ ಸಂಘವನ್ನು ಕಡಿದಾಳ್‌ರು ಸ್ಥಾಪಿಸಿದಂತಹ ಗೇಣಿದಾರರ ಸಂಘದೊಂದಿಗೆ ಸೇರಿಸಿ ರೈತ ಸಂಘವನ್ನಾಗಿ ಪರಿವರ್ತಿಸಿದರು. ಈ ಸಂಘಟನೆಯ ಮೂಲಕವೇ ಕಾಗೋಡು ಚಳುವಳಿಯನ್ನು ಪ್ರಾರಂಭಿಸಿ ಕಾಗೋಡು ಚಳುವಳಿಯ ರೂವಾರಿ ಎನ್ನಿಸಿಕೊಂಡಿದ್ದಾರೆ. ಕಾಗೋಡು ಸತ್ಯಾಗ್ರಹ ಕುರಿತಂತೆ "ಕಾಗೋಡು ಸತ್ಯಾಗ್ರಹದ ಹುಟ್ಟು ಮತ್ತು ಬೆಳವಣಿಗೆ" ಎಂಬ ಲೇಖನವನ್ನು ಬರೆದಿದ್ದಾರೆ (ವೆಂಕಪ್ಪಗೌಡ, ೨೦೦೭), (ಬೋರಲಿಂಗಯ್ಯ ಮತ್ತು ಹುಚ್ಚಪ್ಪ ಮಾಸ್ತರ, ೨೦೦೨:೧೯೯-೧೫೦- ೧೫೧).

೩. **ಡಿ.ಮೂಕಪ್ಪ :** ಇವರು ಸಾಗರ ತಾಲ್ಲೂಕಿನ ಮರತ್ತೂರು ಎಂಬ ಗ್ರಾಮದವರು. ೪.೧.೧೯೪೮ರಂದು ಮತ್ತೂರಿನಲ್ಲಿ ನಡೆದ ರೈತ ಸಂಘದ ಸಭೆಯಲ್ಲಿ ಸಾಗರ ತಾಲ್ಲೂಕು ರೈತ ಸಂಘದ ಅಧ್ಯಕ್ಷರಾಗಿ ಆಯ್ಕೆಗೊಂಡರು. ೧೫.೧.೧೯೫೦ ರಿಂದ ೨೬.೦೩.೧೯೫೧ರವರೆಗೆ ಸಾಗರ ತಾಲ್ಲೂಕಿನ ಅನೇಕ ಕಡೆಯಲ್ಲಿ ರೈತ ಸಂಘದ ಸಭೆಯನ್ನು ನಡೆಸಿ ಗೇಣಿದಾರರಲ್ಲಿ ಜಾಗೃತಿಯನ್ನು ಮೂಡಿಸಿದರು. ೧೯೫೧ರಲ್ಲಿ ರೈತ ಸಂಘದ ವತಿಯಿಂದ ಕಾಗೋಡು ಸತ್ಯಾಗ್ರಹ ಪ್ರಾರಂಭವಾಗಿದ್ದಂತಹ ಸಂದರ್ಭದಲ್ಲಿ ಮೂಕಪ್ಪನವರು ಪೋಲಿಸರಿಂದ ಬಂಧನಕ್ಕೆ ಒಳಪಟ್ಟರು. ನಂತರ ಅಂದರೆ ಡಾ.ರಾಮಮನೋಹರ ಲೋಹಿಯಾ ಅವರೊಂದಿಗೆ ೧೪.೬.೧೯೫೧ರಲ್ಲಿ

ಮತ್ತೆ ಬಂಧನಕ್ಕೆ ಒಳಗಾದರು. ಹೀಗೆ ಕಾಗೋಡು ಚಳುವಳಿಯಲ್ಲಿ ಸಕ್ರೀಯವಾಗಿ ಭಾಗವಹಿಸಿದಂತಹ ವ್ಯಕ್ತಿಯಾಗಿದ್ದಾರೆ (ಬೋರಲಿಂಗಯ್ಯ ಮತ್ತು ಹುಚ್ಚಪ್ಪ ಮಾಸ್ತರ, ೨೦೦೨:೧೯೯-೧೬೦).

೪. **ಶಾಂತವೇರಿ ಗೋಪಾಲಗೌಡ :** ಉಳುವವನೇ ಭೂಮಿಯ ಒಡೆಯ ಎಂಬ ತತ್ವವನ್ನಿಟ್ಟುಕೊಂಡು ಕಾಗೋಡು ಚಳುವಳಿಗೆ ಚಾಲಕ ಶಕ್ತಿಯಾಗಿದ್ದರು. ಈ ಚಳುವಳಿಯ ಸ್ಫೂರ್ತಿಯ ನೇತಾರ ಕೂಡ ಆಗಿದ್ದರು. ಚಳುವಳಿಯ ಸಂದರ್ಭದಲ್ಲಿ ಗೋಪಾಲಗೌಡರು ಮತ್ತು ಕಡಿದಾಳ್‌ರು ಪ್ರಮುಖ ವ್ಯಕ್ತಿಯಾಗಿದ್ದರು. ಅಂಶ ಇಲ್ಲಿ ಮುಖ್ಯವಾಗುತ್ತದೆ. ಕಡಿದಾಳ್‌ರು ಮತ್ತು ಗೋಪಾಲಗೌಡರು ಒಂದೇ ತಾಲ್ಲೂಕಿನವರಾಗಿದ್ದು, ಇಬ್ಬರು ಗೇಣಿದಾರ ಕುಟುಂಬದಿಂದ ಬಂದವರಾಗಿ ಪಕ್ಷ ಮಾತ್ರ ಬೇರೆ ಬೇರೆಯಾಗಿತ್ತು. ಆದರೆ ಗೇಣಿದಾರರ ಕುರಿತಂತೆ ಇವರಿಬ್ಬರಲ್ಲು ಸಮಾನತೆಯ ಧೋರಣೆಯನ್ನು ನೋಡಬಹುದು. ಕಾಗೋಡು ಹೋರಾಟದ ಸಮಯದಲ್ಲಿ ಕಡಿದಾಳ್‌ರು ಭೂಮಾಲೀಕರ ಮತ್ತು ಗೇಣಿದಾರರ ಸಮಸ್ಯೆಯನ್ನು ರಾಜಿ ಮಾರ್ಗದಿಂದ ಬಗೆಹರಿಸಲು ಪ್ರಯತ್ನಿಸಿದರು. ಆದರೆ ಗೋಪಾಲ ಗೌಡರಿಗೆ ಅದು ಇಷ್ಟವಿರಲಿಲ್ಲ. ಗೇಣಿದಾರರ ಸಮಸ್ಯೆಗೆ ಕಾನೂನುಬದ್ಧವಾಗಿಯೇ ಮತ್ತು ಹೋರಾಟದ ಮೂಲಕ ಪರಿಹಾರ ನೀಡಬೇಕು ಎಂಬುದು ಗೌಡರ ಉದ್ದೇಶವಾಗಿತ್ತು. ಹೀಗೆ ಸೈದ್ಧಾಂತಿಕವಾಗಿ ಭಿನ್ನತೆ ಇದ್ದರು ಇಬ್ಬರಲ್ಲು ಬಡರೈತರ ಬಗ್ಗೆ ಅನುಕಂಪ ತೀವ್ರವಾದ ಕಳಕಳಿಯಿತ್ತು. ಗೋಪಾಲಗೌಡರು ಕಾಗೋಡು ಚಳುವಳಿಯಲ್ಲಿ ಪಾಲ್ಗೊಂಡಿದ್ದರ ಕುರಿತಂತೆ ಹೆಚ್ಚಿನ ವಿವರಗಳಿಗಾಗಿ ಕಾಳೇಗೌಡನಾಗವಾರ ಮತ್ತು ಜಿ.ವಿ.ಆನಂದಮೂರ್ತಿ ಅವರ "ಶಾಂತವೇರಿ ಗೋಪಾಲಗೌಡ ನೆನಪಿನ ಸಂಪುಟ"(೧೯೯೭), ಕೋಣಂದೂರು ವೆಂಕಪ್ಪಗೌಡ ಸಂಪುಟ(ಸಂ) ಅವರ "ಜೀವಂತ ಜ್ವಾಲೆ"(೧೯೮೧) ಎಂಬಕೃತಿಗಳಲ್ಲಿ ಮಾಹಿತಿ ಒಳಗೊಂಡಿದೆ.

೫. **ಕಾಗೋಡು ಗೌಡರು :** ಕಾಗೋಡಿನಲ್ಲಿ ಸುಮಾರು ೬೦ ದೀವರ ಕುಟುಂಬಗಳು ೧೪ ಹರಿಜನರ ಕುಟುಂಬಗಳು, ೩ ಮಡಿವಾಳ ಕುಟುಂಬ, ೧ ಅಕ್ಕಸಾಲಿಗ ಕುಟುಂಬಗಳಿದ್ದು, ಈ ಎಲ್ಲಾ ಕುಟುಂಬಗಳಲ್ಲಿ ಕಾಗೋಡು ಜಮೀನ್ದಾರ ಕುಟುಂಬ ಎನಿಸಿಕೊಂಡಿದ್ದ ಒಡೆಯ ಒಂದೇ ಒಂದು ಕುಟುಂಬವಿತ್ತು. ಇವರು ಲಿಂಗಾಯತ ವರ್ಗಕ್ಕೆ ಸೇರಿದ್ದರು, ಗೌಡರ ಮನೆತನದಲ್ಲಿ ಕೆ.ಶಿವಲಿಂಗೇಗೌಡ, ಕೆ.ಗುರುಬಸಪ್ಪ ಒಡೆಯರ್, ಕೆ.ಗುರುವಯ್ಯಗೌಡ ಎಂಬ ಮೂರು ಜನ ಅಣ್ಣತಮ್ಮಂದಿರಿದ್ದರು. ಒಡೆಯರು ಸುಮಾರು ೧೦೦೦ ಎಕರೆ ಜಮೀನನ್ನು ಹೊಂದಿದ್ದು, ಹಿಸೆ ಆಗಿರಲಿಲ್ಲ. ಕಾಗೋಡಿನಲ್ಲಿ ಉಳಿದಂತ ಎಲ್ಲಾ ಕುಟುಂಬಗಳಿಗೆ ಈ ಜಮೀನನ್ನು ಗೇಣಿಗೆ ಕೊಟ್ಟಿದ್ದು ಅವರನ್ನು ಶೋಷಣೆಗೆ ಒಳಪಡಿಸಿದರು. ಈ ರೀತಿ ಶೋಷಣೆಗೆ ಒಳಪಡಿಸಿದ್ದರಿಂದ ಮುಂದೆ ಕಾಗೋಡು ಚಳುವಳಿ ನಡೆಯಲು ಕಾರಣವಾಯಿತು. ಹೆಚ್ಚಿನ ವಿವರಕ್ಕಾಗಿ (ರಾಜಶೇಖರ್, ೧೯೮೦:೧೮-೧೯), (ಚಂದ್ರಶೇಖರ್ ೨೦೦೭:೧-೨). ಬೋರಲಿಂಗಯ್ಯ ಮತ್ತು ಹುಚ್ಚಪ್ಪ ಮಾಸ್ತರ, ೨೦೦೨:೯-೨೯).

೬. ಕಾಗೋಡು ಚಳುವಳಿಗೆ ಸಂಬಂಧಪಟ್ಟಂತೆ ಇನ್ನು ಹೆಚ್ಚಿನ ವಿವರಕ್ಕಾಗಿ ಜಿ.ರಾಜಶೇಖರ್ ಅವರ "ಕಾಗೋಡು ಸತ್ಯಾಗ್ರಹ"(೧೯೮೦) ಕೋಣಂದೂರು ವೆಂಕಪ್ಪಗೌಡ ಅವರ "ಕಾಗೋಡು ರೈತ ಹೋರಾಟ ರೂವಾರಿ"(೨೦೦೦), ಸಿ.ಬಿ.ಚಂದ್ರಶೇಖರ್ ಅವರ "ಕಾಗೋಡು ಒಂದು ನೆನಪು" (೨೦೦೭), ಕಾಳೇಗೌಡ ನಾಗವಾರ ಅವರ "ಶಾಂತವೇರಿ ಗೋಪಾಲಗೌಡ ನೆನಪಿನ ಸಂಪುಟ"(೧೯೯೭) ಎಂಬ ಕೃತಿಗಳನ್ನು ಉದಾಹರಿಸಬಹುದು.

ಭೂಸುಧಾರಣೆ ಎಂಬ ಪರಿಕಲ್ಪನೆಯು ಭೂಮಿಯ ಒಡೆತನದ ಪುನರ್ ಹಂಚಿಕೆ, ಹತೋಟಿ ಮತ್ತು ಭೂ ಮಾನವ ಸಂಬಂಧಗಳ ಕುರಿತದ್ದಾಗಿದೆ. ಈ ಉದ್ದೇಶಗಳಿಗಾಗಿ ಸರ್ಕಾರ ಕಾನೂನು ರೂಪಿಸಿ ಕಾರ್ಯಗತಗೊಳಿಸುವುದರ ಮೂಲಕ ಕೃಷಿ ವಿನ್ಯಾಸದಲ್ಲಿ ಮಾರ್ಪಾಡು ತರುವುದೇ ಆಗಿದೆ. ಈ ಹಿನ್ನೆಲೆಯಲ್ಲಿ ಕಡಿದಾಳ್‌ರು ೧೯೫೧ರಿಂದ ೧೯೬೧ರವರೆಗೆ ಸರ್ಕಾರದಲ್ಲಿದ್ದುಕೊಂಡು ಹಂತ ಹಂತವಾಗಿ ಭೂಸುಧಾರಣೆಯ ಶಾಸನ ರೂಪಿಸಲು ಪ್ರಯತ್ನಪಟ್ಟಿದ್ದನ್ನು ಈ ಅಧ್ಯಾಯದಲ್ಲಿ ಅಭ್ಯಾಸಿಸಲಾಗಿದೆ.

## ೪.೧. ಭೂಸುಧಾರಣೆಯ ಹಿನ್ನೆಲೆ

ಸ್ವಾತಂತ್ರ್ಯಾನಂತರ ಕರ್ನಾಟಕದಲ್ಲಿ ಜಾರಿಗೆ ಬಂದಂತಹ ಭೂಸುಧಾರಣೆಯನ್ನು ಅದರಲ್ಲೂ ಕಡಿದಾಳ್ ಮಂಜಪ್ಪನವರ ಕಾಲದಲ್ಲಿ ಜಾರಿಗೆ ಬಂದಂತಹ ಭೂಸುಧಾರಣೆಗೆ ಸಂಬಂಧಪಟ್ಟ ಕಾಯಿದೆ ಕಾನೂನುಗಳನ್ನು ತಿಳಿಯಬೇಕಾದರೆ ಚಾರಿತ್ರಿಕವಾಗಿ ರಾಜವಂಶಗಳ ಕಾಲದಲ್ಲಿ ಮತ್ತು ವಸಾಹತು ಕಾಲಘಟ್ಟದಲ್ಲಿನ ಭೂಸಂಬಂಧಗಳು ಮತ್ತು ಕಂದಾಯ ವ್ಯವಸ್ಥೆಗಳನ್ನು ಸ್ಥೂಲವಾಗಿ ತಿಳಿದುಕೊಳ್ಳಬೇಕಾಗುತ್ತದೆ. ವಿಜಯನಗರ ಅರಸರ ಆಳ್ವಿಕೆಯ ಕಾಲದಿಂದ ಹಿಡಿದು ವಸಾಹತು ಕಾಲಘಟ್ಟದವರೆಗೂ ಜಮೀನ್ದಾರರ ಕಂದಾಯ ವ್ಯವಸ್ಥೆ ಮತ್ತು ಶೋಷಣೆಯ ವಿರುದ್ಧ ಜನರು ಸಿಡಿದೆದ್ದಿರುವುದನ್ನು ಕಾಣುತ್ತೇವೆ. ಕಡಿದಾಳ್ ಮಂಜಪ್ಪನವರ ಕಾಲದಲ್ಲಿನ ಭೂಸುಧಾರಣೆಯನ್ನು ಅರ್ಥಮಾಡಿಕೊಳ್ಳಲು ಚಾರಿತ್ರಿಕ ಹಿನ್ನೆಲೆಯನ್ನು ವಿವರಿಸುವುದು ಹಾಗೂ ಅವು ಹೇಗೆ ಕಡಿದಾಳ್‌ರ ಹೋರಾಟಕ್ಕೆ ಪೂರಕವಾಗಿದೆ ಎಂಬ ಅಂಶವನ್ನು ಅಧ್ಯಯನ ಮಾಡಲಾಗಿದೆ.

ಚಾರಿತ್ರಿಕವಾಗಿ ಭೂಸುಧಾರಣೆಯನ್ನು ಅಧ್ಯಯನ ಮಾಡಿದಾಗ ವಿಜಯನಗರ ಕಾಲದಲ್ಲಿ ಭೂಸುಧಾರಣೆಗೆ ಸಂಬಂಧಿಸಿದ ಅಂಶಗಳು ಕಂಡುಬರುತ್ತವೆ. ಇಲ್ಲಿಯ ರಾಜರು ಭೂನಿರ್ವಹಣೆಗೆ ಸಂಬಂಧಿಸಿದ ಆಡಳಿತವನ್ನು ನೋಡಿಕೊಳ್ಳಲು ಪಾಳೆಯಗಾರರನ್ನು ನೇಮಿಸಿದ್ದರು. ಕ್ಷೀರ ಸಾಗರ ಅವರ ಅಭಿಪ್ರಾಯದಂತೆ ಪಾಳೆಯಗಾರರು ಭೂಮಿಯ ಆಡಳಿತವನ್ನು ನಿರ್ವಹಿಸುವುದರೊಂದಿಗೆ ಶಕ್ತಿಶಾಲಿಗಳಾಗಿ ಸರ್ವಾಧಿಕಾರಿಗಳಂತೆ ವರ್ತಿಸುತ್ತಿದ್ದರು ಎಂಬುದಾಗಿ ತಿಳಿಸಿದ್ದಾರೆ. ಸಂಪೂರ್ಣವಾಗಿ ರೈತರನ್ನು ನಿಯಂತ್ರಿಸುತ್ತಿದ್ದರು. ತಮ್ಮದೆ ಆದಂಥ ಸೈನ್ಯ ವ್ಯವಸ್ಥೆಯನ್ನು ಹೊಂದಿರುತ್ತಿದ್ದರು. ರಾಜ್ಯಾಧಿಕಾರಿಗಳು ಬದಲಾದಂತೆ ಇವರೇ ಕ್ರಮೇಣ ದೊಡ್ಡ ಜಮೀನ್ದಾರರಾಗಿ ಮಾರ್ಪಟ್ಟಿದ್ದರು. ಈ ಪಾಳೆಯಗಾರರ ಭೂನಿರ್ವಹಣೆಯ ಕಾರ್ಯವೈಖರಿಯನ್ನು ನೋಡಿದಾಗ ಸಂಪೂರ್ಣವಾಗಿ ರೈತರನ್ನು ನಿಯಂತ್ರಿಸುತ್ತಿದ್ದಂತೆ

ಕಂಡುಬರುತ್ತದೆ. ಪಾಳೆಯಗಾರರಲ್ಲದೆ ೧೨ ರೀತಿಯ ಆಯಗಾರರು ವಿಜಯನಗರ ಸಾಮ್ರಾಜ್ಯದಲ್ಲಿ ಕಂಡುಬರುತ್ತಿದ್ದರು. ಈ ಆಯಗಾರರು ಮುಖ್ಯವಾಗಿ ಗ್ರಾಮಗಳಲ್ಲಿ ಗೊತ್ತಾದ ಕೆಲಸಗಳನ್ನು ಮಾಡಬೇಕಾಗಿತ್ತು. ಈ ವೃತ್ತಿಗಳನ್ನು ನಡೆಸಿಕೊಂಡು ಹೋಗಲು ಅನುವಾಗುವಂತೆ ರೈತರು ತಾವು ಬೆಳೆದ ಬೆಳೆಯಲ್ಲಿ ಸ್ವಲ್ಪ ಭಾಗ ಇವರಿಗೆ ಕೊಡಬೇಕಿತ್ತು.

ವಿಜಯನಗರ ಅರಸರ ಕಾಲದಲ್ಲಿ ಪಾಳೆಗಾರರೊಂದಿಗೆ ರಾಜರು ಕೂಡ ಕಂದಾಯ ವಸೂಲಿ ಮಾಡುವುದರತ್ತ ಗಮನಹರಿಸುತ್ತಿದ್ದರು. ಕಂದಾಯ ವಸೂಲಿ ಮಾಡುವುದಕ್ಕೋಸ್ಕರ ರಾಜ್ಯದ ಸರಹದ್ದುಗಳನ್ನು ಗುರುತಿಸಿದ್ದರು. ಹಾಗೆಯೇ ಕಂದಾಯದ ವಸೂಲಿಯನ್ನು ಅಧಿಕಾರಶಾಹಿ ಗೌಡ ಮತ್ತು ಶಾನುಭೋಗರ ಮೂಲಕ ರೈತರು ತೆರಿಗೆಯನ್ನು ರಾಜ್ಯದ ಬೊಕ್ಕಸಕ್ಕೆ ಕಟ್ಟಬೇಕಿತ್ತು. ಇದು ವಿಜಯನಗರ ಕಾಲದ ರಾಜರ ಕಂದಾಯ ಪದ್ಧತಿಯಾಗಿತ್ತು (ಕ್ಷೀರಸಾಗರ, ೧೯೮೫: ೧೭೧೮).

ಕೃಷಿಗೆ ಸಂಬಂಧಿಸಿದಂತೆ ಮೈಸೂರು ಒಡೆಯರು ಹಾಗೂ ವಿಜಯನಗರ ಅರಸರು ತಮ್ಮದೆ ಆದ ನಿಯಮಗಳನ್ನು ರೂಪಿಸಿಕೊಂಡಿದ್ದರು. ಒಡೆಯರು ವಿಜಯನಗರ ಕಾಲದಲ್ಲಿ ಇದ್ದಂತಹ ಪಾಳೆಯಗಾರರನ್ನು ಸಂಪೂರ್ಣವಾಗಿ ನಿಯಂತ್ರಿಸಿದ್ದರು. ಕೃಷಿ ಭೂಮಿಯ ಒಡೆತನವನ್ನು ರಾಜ್ಯವೇ ಇಟ್ಟುಕೊಂಡಿತ್ತು. ಇಂತಹ ವ್ಯವಸ್ಥೆಯನ್ನು ಮೊಟ್ಟಮೊದಲು ಜಾರಿಗೆ ತಂದವರು ಚಿಕ್ಕದೇವರಾಜ ಒಡೆಯರು (೧೬೭೨-೧೭೦೪). ಆರ್.ವಿ. ವಿಠ್ಠಲಮೂರ್ತಿಯವರ ಪ್ರಕಾರ ಚಿಕ್ಕದೇವರಾಜ ಒಡೆಯರು ಭೂಮಿಯ ಹಕ್ಕನ್ನು ಸಂಪೂರ್ಣವಾಗಿ ಪಡೆದು ರೈತರಿಗೆ ಯಾವುದೇ ರೀತಿಯ ಸ್ವಾತಂತ್ರ್ಯ ನೀಡಿಲ್ಲ ಎಂದು ತಿಳಿಸಿದ್ದಾರೆ. ಜೊತೆಗೆ ರೈತರ ಮೇಲೆ ಹಲವಾರು ರೀತಿಯ ತೆರಿಗೆಗಳನ್ನು ಹಾಕುತ್ತಿದ್ದರು ಹಾಗೂ ಗೇಣಿದಾರರು ಬೆಳೆದ ಬೆಳೆಯಲ್ಲಿ ಶೇಕಡ ೪೦ ಭಾಗವನ್ನು ರಾಜ್ಯಕ್ಕೆ ಒಪ್ಪಿಸಬೇಕಾಗಿತ್ತು ಎಂಬ ಅಂಶವನ್ನು ತಿಳಿಸಿದ್ದಾರೆ. ಹಾಗೆಯೇ ಇದೇ ಸಂದರ್ಭದಲ್ಲಿ ಭೂಮಿಯ ಹಕ್ಕನ್ನು ಕಳೆದುಕೊಂಡ ನಂಜನಗೂಡಿನ ರೈತರು ಚಿಕ್ಕದೇವರಾಜ ಒಡೆಯರ ವಿರುದ್ಧ ದಂಗೆಯೆದ್ದರೂ ಕೂಡ ಒಡೆಯರ್ ತಮ್ಮ ಶ್ರಮದಿಂದ ದಂಗೆಯನ್ನು ಅಡಗಿಸಿದರು ಎಂದು ತಿಳಿಸಿದ್ದಾರೆ. ಚಿಕ್ಕ ದೇವರಾಜ ಒಡೆಯರ ನಂತರ ಪಾಳೆಯಗಾರರು ಮತ್ತೆ ತಲೆಯೆತ್ತಿದ್ದರು. ಕಳೆದು ಹೋದ ಸ್ಥಾನವನ್ನು ಮತ್ತೆ ಪಡೆದು ಅವರಿಗೆ ಅನುಕೂಲವಾಗುವಂತೆ ಆಡಳಿತ ವ್ಯವಸ್ಥೆಯನ್ನು ಜಾರಿಗೆ ತಂದರು (ದೇಜಗೌ, ಕಮಲೇಶ, ೨೦೦೬:೩೯೯), (ಅರುಣ, ೨೦೦೭:೧೦).

೧೭೬೧ರಿಂದ ೧೭೯೯ರವರೆಗೆ ಮೈಸೂರು ರಾಜ್ಯವು ಮುಸ್ಲಿಂ ಆಡಳಿತಕ್ಕೆ ಒಳಪಟ್ಟಿತು. ಈ ಅವಧಿಯಲ್ಲಿ ಅಧಿಕಾರಕ್ಕೆ ಬಂದ ಹೈದರಾಲಿಯು ಮೈಸೂರು ರಾಜ್ಯದ ಪಾಳೆಯಗಾರರ ಪ್ರಾಬಲ್ಯವನ್ನು ಹತ್ತಿಕ್ಕಲು ಯತ್ನಿಸಿದನು. ಆದರೆ ಪಾಳೆಯಗಾರರು ಇದನ್ನು ಸಹಿಸದೇ ಈತನ ಆಡಳಿತದ ವಿರುದ್ಧ ದಂಗೆ ಏಳುತ್ತಿದ್ದರು. ೧೭೮೩ರ ನಂತರ ತಂದೆಯ ಸ್ಥಾನಕ್ಕೆ ಬಂದ ಟಿಪ್ಪುವು ಪಾಳೆಯಗಾರರ ವಿರುದ್ಧ ಹೋರಾಟ ನಡೆಸಿ ಸಂಪೂರ್ಣ ಅಧಿಕಾರ ಪಡೆದುಕೊಂಡನು. ಟಿಪ್ಪು ಅಧಿಕಾರಕ್ಕೆ ಬಂದ ಪ್ರಾರಂಭದಲ್ಲಿ

ಕಂದಾಯದ ನೀತಿಯಲ್ಲಿ ಮಹತ್ತರ ಬದಲಾವಣೆ ತರಲು ಪ್ರಯತ್ನಿಸಿದನು. ಇದರಿಂದಾಗಿ ಪಾಳೆಯಗಾರರಿಂದ ಭೂಮಿಯನ್ನು ವಶಪಡಿಸಿಕೊಂಡು ನೇರವಾಗಿ ಗೇಣಿ ರೈತರಿಗೆ ಜಮೀನನ್ನು ನೀಡಲಾಗಿತ್ತು.

ಟಿಪ್ಪುವಿನ ಕಾಲದಲ್ಲಿ ಭೂನಿರ್ವಹಣೆ ಹೆಚ್ಚು ಮಹತ್ವ ಪಡೆಯಿತು. ಈತನ ಆಡಳಿತಕ್ಕೊಳಪಟ್ಟ ಭೂಮಿಯನ್ನೆಲ್ಲಾ ತುಕಡಿಯನ್ನಾಗಿ ಮಾಡಿದ್ದನು.[೨] ಟಿಪ್ಪು ಹೀಗೆ ಭೂಮಿಯನ್ನು ತುಕಡಿಯನ್ನಾಗಿ ಮಾಡುವ ಮುಖ್ಯ ಉದ್ದೇಶವೆಂದರೆ ಕಂದಾಯ ವಸೂಲಿ ಮಾಡುವುದೇ ಆಗಿತ್ತು. ಟಿಪ್ಪು ಇನ್ನೂ ಮುಂದುವರೆದು ಭೂನಿಯಂತ್ರಣದ ಯೋಜನೆಯನ್ನು ಕೂಡ ರೂಪಿಸಿದ್ದು ಕಂಡುಬಂದಿದೆ. ಈ ಯೋಜನೆಯಲ್ಲಿ ಮುಖ್ಯವಾಗಿ ಸರ್ಕಾರಿ ಅಧಿಕಾರಿಗಳಿಗೆ ಭೂಮಾಲೀಕತ್ವವನ್ನು ನಿರಾಕರಿಸಿದ್ದನು. ಕ್ಷೀರಸಾಗರ ಅವರು ಭೂನಿಯಂತ್ರಣ ಕುರಿತಂತೆ ಹೀಗೆ ಹೇಳಿದ್ದಾರೆ. "ಟಿಪ್ಪು ಸುಲ್ತಾನ್‌ನು ಒಬ್ಬ ರೈತನಿಗೆ ಭೂಮಿಯನ್ನು ಅವನ ಜೀವನಕ್ಕೆ ಅಗತ್ಯವಾಗುವಷ್ಟು ನೀಡುತ್ತಿದ್ದನು (ಒಂದು ಯೋಜನೆಗಿಂತ ಜಾಸ್ತಿ ನೀಡುತ್ತಿರಲಿಲ್ಲ). ರೈತರು ಕೊಡಬೇಕಾಗಿದ್ದ ಬಾಕಿಯನ್ನು ಪಾವತಿ ಮಾಡಿದ ಮೇಲೆಯೇ ಮುಚ್ಚಳಿಕೆಯನ್ನು ಬರೆಸಿಕೊಂಡು ಭೂಮಿಯನ್ನು ಮತ್ತೆ ಕೃಷಿಗೆ ನೀಡುತ್ತಿದ್ದನಂತೆ. ಭೂಮಿಯನ್ನು ಹಾಳುಗೆಡವಿದ್ದರೆ ರೈತರು ದಂಡ ತೆರಬೇಕಾಗುತ್ತಿತ್ತು". ಇಂತಹ ಪ್ರಗತಿಪರವಾದ ಭೂಸುಧಾರಣೆ ನೀತಿಯನ್ನು ಟಿಪ್ಪು ಜಾರಿಗೊಳಿಸಿದ್ದನು (ಸೂರ್ಯನಾಥ್, ೧೯೮೫:೪೧೮-೪೧೯), (ಕ್ಷೀರಸಾಗರ, ೧೯೮೫:೧೮-೧೯). ಈ ವ್ಯವಸ್ಥೆಯೊಂದಿಗೆ ಸರ್ಕಾರಿ ಅಧಿಕಾರಿಗಳಿಗೆ ಜಹಗೀರು ಭೂಮಿಗಳನ್ನು ನೀಡುತ್ತಿದ್ದನು. ಅವರು ಜೀವನಪರ್ಯಂತ ಬಳಸಿ ಮರಣದ ನಂತರ ಆ ಭೂಮಿ ಸರ್ಕಾರದ ಒಡೆತನಕ್ಕೆ ಸೇರುತ್ತಿತ್ತು. ಭೂಸುಧಾರಣೆಯ ಜೊತೆಗೆ ಇನಾಂತಿ ಭೂಮಿ ನೀಡುವ ಪದ್ಧತಿಯನ್ನು ಟಿಪ್ಪು ಅನುಸರಿಸುತ್ತಿದ್ದನು. ಇವುಗಳನ್ನು ಮುಸ್ಲಿಂ ನಾಯಕರಿಗೆ, ದೇವಸ್ಥಾನಗಳಿಗೆ ನೀಡಿದ್ದನು. ಪ್ರಗತಿಪರ ಆಡಳಿತ ಸುಧಾರಣೆಯೊಂದಿಗೆ ಹೆಚ್ಚು ಅಮಲ್ದಾರರನ್ನು ನೇಮಿಸಿದ್ದನು. ಅಮಲ್ದಾರರಿಂದಾಗಿ ಕಂದಾಯಸೋರಿಕೆ ಮತ್ತು ಆದಾಯಕ್ಕಿಂತ ಖರ್ಚು ಹೆಚ್ಚಾಗಲು ಕಾರಣವಾಗಿತ್ತು.

೧೭೯೯ರಲ್ಲಿ ಟಿಪ್ಪು ಬ್ರಿಟಿಷರ ವಿರುದ್ಧ ಹೋರಾಡುವಾಗ ಸಾವನ್ನಪ್ಪಿದ. ನಂತರ ಟಿಪ್ಪುವಿನ ಕಾಲದಲ್ಲಿಯೇ ಮಂತ್ರಿಯಾಗಿದ್ದ ದಿವಾನ್ ಪೂರ್ಣಯ್ಯನವರು ಮೈಸೂರಿನ ಅಧಿಕಾರ ವಹಿಸಿಕೊಂಡರು. ಇವರು ೧೭೯೯ ರಿಂದ ೧೮೧೦ರವರೆಗೆ ಮೈಸೂರು ಸಂಸ್ಥಾನದ ಆಡಳಿತ ನಡೆಸಿದರು. ಈ ಸಂದರ್ಭದಲ್ಲಿ ಪಾಳೇಯಗಾರರು ಮತ್ತೆ ತಲೆ ಎತ್ತಿ ದೊಡ್ಡ ಜಮೀನ್ದಾರರಾಗಿ ಅಸ್ತಿತ್ವ ಪಡೆದರು. ಈ ಅವಧಿಯಲ್ಲಿ ಪಟೇಲರು, ಶಾನುಭೋಗರು, ಪೋಲೀಸರು ಸಾವಿರಾರು ಎಕರೆ ಜಮೀನುಗಳನ್ನು ತಮ್ಮ ಖಾತೆಗೆ ನೋಂದಾಯಿಸಿಕೊಂಡರು. "ವಂಶಪಾರಂಪರ್ಯದಿಂದ ಬಂದ ಆಸ್ತಿಯ ಹಕ್ಕನ್ನು ಸಕ್ರಮಗೊಳಿಸಿ, ಹೆಚ್ಚಿನ ಪ್ರಮಾಣದಲ್ಲಿದ್ದ ಇನಾಂತಿ ಭೂಮಿಗಳಲ್ಲಿ ಬಹಳಷ್ಟು ಜೋಡಿ ಇನಾಂತಿಗಳಾಗಿ ಪರಿವರ್ತಿಸಿ ಹಗುರ ಕಂದಾಯ ಹೇರಿದ ಕೀರ್ತಿ ಪೂರ್ಣಯ್ಯನವರಿಗೆ ಸಲ್ಲುತ್ತದೆ. ಇವರ ಅಧಿಕಾರಾವಧಿಯಲ್ಲಿ

ವಂಶಪಾರಂಪರ್ಯವಾಗಿ ಆಸ್ತಿಯನ್ನು ರಕ್ಷಿಸುವುದು ಮತ್ತು ಕಂದಾಯವನ್ನು ಕಡಿಮೆಗೊಳಿಸಿರುವುದು ಕಂಡುಬರುತ್ತದೆ (ಸೂರ್ಯನಾಥ, ೧೯೮೫:೪೧೯).

೧೭೯೯ರ ಒಪ್ಪಂದದ ನಂತರ ಮೈಸೂರು ಸಂಸ್ಥಾನದ ವಿದ್ಯಮಾನಗಳಲ್ಲಿ ಬ್ರಿಟಿಷ್ ಸಾಮ್ರಾಜ್ಯಶಾಹಿಯ ಕೈವಾಡವಿತ್ತೆಂಬ ಅಂಶವನ್ನು ಗಮನಿಸಬಹುದಾಗಿದೆ. ಆದರೆ ರೈತರ ಅತೃಪ್ತಿಯನ್ನು ಕೆರಳಿಸುವಲ್ಲಿ ಇವರ ಪಾತ್ರ ಗೌಣ ಎನ್ನಬಹುದಾಗಿದೆ. ಆದರೂ ೨೪ ಲಕ್ಷ ರೂ.ಗಳ ಸಬ್ಸಿಡಿಯನ್ನು ಕೊಡಲೇಬೇಕೆನ್ನುವ ಒತ್ತಾಯ ಕಂದಾಯವನ್ನು ಹೆಚ್ಚಿಸಲು ಕಾರಣವಾಯಿತು. ಈಗಾಗಲೇ ಹೇಳಿದ ಹಾಗೆ ನಗರ ಡಿವಿಷನ್ನಿನ ರೈತ ಹೋರಾಟದಿಂದ ಸರ್ಕಾರದ ಅಧಿಕಾರಶಾಹಿಯ ಕೈಗಳಲ್ಲಿ ನರಳುತ್ತಿದ್ದ ರೈತಾಪಿ ವರ್ಗಗಳು ಈ ದಂಗೆಯಲ್ಲಿ ಪಾಲ್ಗೊಂಡರು. ಕೆಲವು ಅಧಿಕಾರಿಗಳ ಕುತಂತ್ರದಿಂದಾಗಿ ಈ ಚಳುವಳಿ ಆರಂಭವಾಯಿತಾದರೂ ಮುಂದೆ ಸಾವಿರಾರು ಜನ ರೈತರು ಸೇರಿದ್ದರಿಂದ ಚಳುವಳಿಯ ಸ್ವರೂಪವೇ ಬದಲಾಯಿತು. ಸರ್ಕಾರದ ವಿರೋಧಿಯಾಗಿ, ವರ್ತಕರ ವಿರೋಧಿಯಾಗಿ ರೈತರ ದಂಗೆ ರೂಪುಗೊಂಡಿತು. ಈ ಹೋರಾಟವು ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಕಂಡುಬಂದಿದೆ (ವಿಜಯ್(ಸಂ), ೨೦೦೧: ೮೫೧-೮೫೨), (ಬೋರಲಿಂಗಯ್ಯ ಮತ್ತು ಹುಚ್ಚಪ್ಪ ಮಾಸ್ತರ, ೨೦೦೨:೩೦೦೩-೩೦೪).

ಕ್ಷೀರ ಸಾಗರರವರು ಹೇಳುವ ಹಾಗೆ ೧೮೧೧ರಿಂದ ೧೮೩೧ರವರೆಗೆ ಕೃಷ್ಣರಾಜ ಒಡೆಯರ ಆಳ್ವಿಕೆಯಲ್ಲಿ ಬ್ರಿಟಿಷರಿಗೆ ಕಂದಾಯ ವಸೂಲಿ ಮಾಡಿಕೊಡಲಾಗಿತ್ತು. ದೇವಸ್ಥಾನ ಮಠ ಮುಂತಾದವುಗಳಿಗೆ ಉದಾರವಾಗಿ ಇನಾಂತಿ ಭೂಮಿಯನ್ನು ನೀಡುವಂತೆ ತಮ್ಮ ಭೂಸುಧಾರಣೆಯನ್ನು ತಂದಿದ್ದರು.[೩] ಇವರ ಬಂಧುಗಳಿಗೆ ಭೂಮಂಜೂರಾತಿಯಿಂದ ಅನುಕೂಲವಾಗಲೆಂದು ಖಾಯಂ ಗುತ್ತಾ,[೩.೧] ನಿರೂಪ[೩.೨] ಜಮೀನುಗಳನ್ನು ನೀಡಿದ್ದರು (ಕ್ಷೀರಸಾಗರ, ೧೮೮೬:೨೨-೨೩), (ಮಲ್ಲಿಕಾರ್ಜುನ, ೨೦೦೭:೪೯). ಭೂಮಿಗೆ ಸಂಬಂಧಿಸಿದಂತೆ ಸರ್ಕಾರ ಮೋಜಣಿಗ ಮತ್ತು ಆಸ್ತಿ ವ್ಯವಸ್ಥೆಯ ಇಲಾಖೆಯನ್ನು ಸ್ಥಾಪಿಸಿದರು. ಈ ಇಲಾಖೆಯ ಮೂಲಕ ಸರ್ಕಾರಕ್ಕೆ ಸೇರಿದ್ದ ಭೂಮಿಯ ಸರಹದ್ದುಗಳನ್ನು ಭೂಮಿಯ ಗುಣ ಹಾಗೂ ವ್ಯವಸಾಯೋತ್ಪನ್ನ ಸಂಬಂಧಗಳನ್ನು ಗುರುತಿಸಿದ್ದು ಮಹತ್ವದ್ದೆನಿಸಿದೆ. ವ್ಯವಸಾಯೋತ್ಪಾದನಾ ಸಂಬಂಧ ಮುಖ್ಯವಾಗಿ ಎರಡು ರೀತಿಯಾಗಿ ವಿಭಾಗಿಸಿದ್ದು, ಭೂಕಂದಾಯಕ್ಕೆ ಸಂಬಂಧಿಸಿದಂತೆ ಸುಧಾರಣೆ ಮಾಡಿದ್ದಾರೆ.[೩.೩]

## ವಸಾಹತು ಕಾಲಘಟ್ಟದಲ್ಲಿನ ಭೂಸುಧಾರಣೆ

ಮುಮ್ಮಡಿ ಕೃಷ್ಣರಾಜ ಒಡೆಯರ ನಂತರ ಬ್ರಿಟಿಷರು ಮೈಸೂರು ಸಂಸ್ಥಾನದಲ್ಲಿ ನೇರವಾಗಿ ಆಡಳಿತ ಜವಾಬ್ದಾರಿಯನ್ನು ತಾವೇ ವಹಿಸಿಕೊಂಡರು. ಈ ಸಂದರ್ಭದಲ್ಲಿ ಭೂಮಿಗೆ ಸಂಬಂಧಪಟ್ಟ ಒಂದು ವ್ಯವಸ್ಥಿತವಾದ ರೂಪತರಲು ಸರ್ಕಾರ ಪ್ರಯತ್ನಪಟ್ಟಿದೆ. ''ಮೋಜಣಿ (ಭೂಮಿಯನ್ನು ಅಳತೆ

ಮಾಡುವುದು) ಮತ್ತು ಆಸ್ತಿ ವ್ಯವಸ್ಥೆಯ ಇಲಾಖೆಯನ್ನು" ಸ್ಥಾಪಿಸಿದ್ದರು. ಈ ಸಂದರ್ಭದಲ್ಲಿ ಜಮೀನ್ದಾರಿ ಮತ್ತು ರೈತವಾರಿ[೪] ಪದ್ಧತಿಯನ್ನು ಜಾರಿಗೆ ತಂದಿದ್ದರು.

ಕಮೀಷನರ್ ಬೌರಿಂಗನು ಮತ್ತು ಮಾರ್ಕ್‌ಕಬ್ಬನ್ ೧೮೬೧ರಲ್ಲಿ ಮೈಸೂರು ರಾಜ್ಯದ ಆಡಳಿತ ವಹಿಸಿಕೊಂಡ ಮೇಲೆ ವ್ಯವಸಾಯ ಕ್ಷೇತ್ರದಲ್ಲಿ ಮಹತ್ತರವಾದ ಬದಲಾವಣೆಗಳನ್ನು ತಂದಿದ್ದು ಕಂಡುಬರುತ್ತದೆ. ಭೂಹಿಡುವಳಿಗಳಲ್ಲಿ ಬದಲಾವಣೆ ತಂದಿದ್ದಲ್ಲದೆ ಕಾಫಿ, ಏಲಕ್ಕಿ, ಕಾಳುಮೆಣಸು ಮುಂತಾದ ವಾಣಿಜ್ಯ ಬೆಳೆಗಳನ್ನು ಬೆಳೆಯಲು ಪ್ರೋತ್ಸಾಹಿಸಿದರು(ಕಮಲೇಶ, ೨೦೦೦:೧). ಈ ಬೆಳೆಯನ್ನು ಬೆಳೆಯಲು ಬೇಕಾದ ಪಶ್ಚಿಮಘಟ್ಟದ ಕಾಡುಗಳನ್ನು ಬಹಿರಂಗವಾಗಿ ಹರಾಜು ಹಾಕಿ ಒಡೆತನ ಕೊಡುತ್ತಿದ್ದರು. ಈ ತರಹ ಬೆಳೆಗಳನ್ನು ಬೆಳೆಯಲು ಪ್ರೋತ್ಸಾಹಿಸಿದ್ದರಿಂದ ಜನಜೀವನದ ಮೇಲೆ ಕೆಟ್ಟ ಪರಿಣಾಮ ಬೀರಿತು. ಈ ಹಿನ್ನೆಲೆಯಲ್ಲಿ ವಾಣಿಜ್ಯ ಬೆಳೆಗಳನ್ನು ಬೆಳೆಯಲು ಪ್ರೋತ್ಸಾಹಿಸಿದ್ದರಿಂದ ಆಹಾರ ಧಾನ್ಯಗಳ ಕೊರತೆಯುಂಟಾಗಿ ಮೈಸೂರು ಪ್ರಾಂತ್ಯದಲ್ಲಿ ೧೮೭೬ರಿಂದ ೧೮೭೮ರವರೆಗೆ ಬರಗಾಲ ಉಂಟಾಗಿ ಸುಮಾರು ಹತ್ತು ಲಕ್ಷ ಜನ ಇದರ ಭೀಕರ ಪರಿಣಾಮಕ್ಕೆ ತುತ್ತಾಗಿದ್ದರು (ಕ್ಷಿರಸಾಗರ, ೧೯೮೫:೨೬-೨೭).

ವಸಾಹತು ಕಾಲಘಟ್ಟದಲ್ಲಿ ತಂದಂತಹ ಹೊಸ ಕೃಷಿ ಪದ್ಧತಿಗಳಿಂದ ರೈತವಾರಿ ಮತ್ತು ಜಮೀನ್ದಾರಿ ಪದ್ಧತಿಗಳಿಂದಾಗಿ ರೈತರ ಮೇಲೆ ಹೆಚ್ಚಿನ ಪರಿಣಾಮ ಉಂಟಾಯಿತು. ರೈತವಾರಿ ಪ್ರಬಲವಾಗಿದ್ದಂಥ ಮೈಸೂರಿನಲ್ಲಿ ಶೇಕಡ ೫೦ ಭಾಗ ಮಾತ್ರ ರೈತರಿಗೆ ಭೂಮಿ ಸೇರಿತು. ಇದರಲ್ಲಿ ಶೇಕಡ ೬೦ರಿಂದ ೭೦ ಭಾಗ ಬಡ ರೈತರೇ ಇದ್ದರು. ಇವರು ತಂದ ಭೂಸುಧಾರಣೆಗಳು ಜಮೀನ್ದಾರರಿಗೆ ಹೆಚ್ಚು ಸಹಾಯಕವಾಗಿದ್ದವು. ಹಾಗೆಯೇ ಭಾರತದ ದಕ್ಷಿಣ ಪ್ರಾಂತ್ಯಗಳಲ್ಲಿದ್ದ ರೈತವಾರಿ ಕ್ಷೇತ್ರಗಳಲ್ಲಿನ ದೊಡ್ಡ ರೈತರು ಸಾಮಾನ್ಯವಾಗಿ ಹೆಚ್ಚು ಭಾಗದ ಭೂಮಿಯನ್ನು ಗೇಣಿ ವ್ಯವಸಾಯಕ್ಕೆ ಕೊಟ್ಟು ಉಳಿದದ್ದನ್ನು ಕೂಲಿ ಆಳುಗಳ ಮೂಲಕ ವ್ಯವಸಾಯ ಮಾಡಿಸುತ್ತಿದ್ದರು. ವಸಾಹತು ಆಳ್ವಿಕೆಯಿಂದ ವಾಣಿಜ್ಯ ಬೆಳೆಗಳನ್ನು ಹೆಚ್ಚು ಬೆಳೆಯಲು ಪ್ರೋತ್ಸಾಹಿಸಿದ್ದರಿಂದ ದಕ್ಷಿಣ ಭಾರತದಲ್ಲಿ ಬಂಡವಾಳಶಾಹಿ ವ್ಯವಸಾಯ ಕಂಡುಬರುತ್ತದೆ. ವಾಣಿಜ್ಯ ಬೆಳೆಗಳನ್ನು ಬೆಳೆಯಲು ಕೂಲಿಗಾರರನ್ನು ಹೆಚ್ಚಾಗಿ ಬಳಸಿಕೊಂಡರು. ಅಲ್ಲದೆ ಈ ಪದ್ಧತಿಯು ಜೀತಗಾರರನ್ನು ಸೃಷ್ಟಿಸಿತು. ಪ್ಲಾಂಟೇಶನ್ ಒಡೆಯನೊಬ್ಬ ಕೈಗಾರಿಕಾ ಬಂಡವಾಳಶಾಹಿ ಮತ್ತು ಅದೇ ಸಮಯದಲ್ಲಿ ಭೂಮಾಲೀಕನು ಕೂಡ ಆಗಿರುತ್ತಿದ್ದ. ಹೀಗೆ ಶೋಷಣೆ ಮಿತಿ ಮೀರಿದಾಗಲೆಲ್ಲ ಸಿಡಿದೆದ್ದು ಹೋರಾಡಿ ತಮ್ಮ ಹಕ್ಕುಗಳನ್ನು ಕಾಪಾಡಿಕೊಂಡ ಇತಿಹಾಸ ರೈತರಿಗಿದೆ (ಕ್ಷೀರಸಾಗರ, ೧೯೮೫:೨೯), (ಸೂರ್ಯನಾಥ, ೧೯೮೫:೪೨೮).

ವಸಾಹತು ಪರಿಣಾಮದಿಂದಾಗಿ, ಮೈಸೂರು ಸಂಸ್ಥಾನ ೧೮೮೧ರಲ್ಲಿ ಮೈಸೂರು ಪ್ರಾಂತ್ಯದ ಗೇಣಿದಾರರಿಗೆ ಭೂಕಂದಾಯ ಶಾಸನ ಜಾರಿ ಮಾಡಿತು. ಈ ಶಾಸನದ ಪ್ರಕಾರ ಗೇಣೀದಾರರು ತಮ್ಮ

ಹೆಸರನ್ನು ನೋಂದಾಯಿಸಿಕೊಳ್ಳುವ ಅವಕಾಶವನ್ನು ನೀಡಲಾಗಿತ್ತು. ಆದರೆ ಈ ಶಾಸನದಲ್ಲಿ ಭೂಮಾಲೀಕರ ಪರವಾಗಿ ಗೇಣಿ ರೈತರಿಗೆ ಅನನುಕೂಲಕಾರಿಯಾಗುವಂತಹ ಹಲವು ನ್ಯೂನತೆಗಳಿದ್ದವು. ಈ ಎಲ್ಲ ನ್ಯೂನತೆಗಳ ಹಿನ್ನೆಲೆಯಲ್ಲಿ ಕಾಂಗ್ರೆಸ್ ಪಕ್ಷ ಹೋರಾಟ ಮಾಡಿರುವುದು ಕಂಡುಬರುತ್ತದೆ.

## ಕಾಂಗ್ರೆಸ್ ಹೋರಾಟ ಮತ್ತು ಭೂಸುಧಾರಣೆ

೧೯ನೇ ಶತಮಾನದ ಉತ್ತಾರಾರ್ಧದಲ್ಲಿ ಹುಟ್ಟಿಕೊಂಡ ಕಾಂಗ್ರೆಸ್ ಪಕ್ಷವು ಪ್ರಾರಂಭದಲ್ಲಿ ರೈತರ ಸಮಸ್ಯೆಗಳ ಬಗ್ಗೆ ಗಮನ ಹರಿಸಲಿಲ್ಲ, ನಂತರದ ದಿನಗಳಲ್ಲಿ ಅಲ್ಲಲ್ಲಿ ರೈತರ ಶೋಷಣೆ ಹೆಚ್ಚಿದಂತೆಲ್ಲಾ ರೈತರ ಪರವಾಗಿ ಚಳುವಳಿಯನ್ನು ನಡೆಸುತ್ತಾ ಬಂದಿರುವುದು ಕಂಡುಬಂದಿದೆ. ಅತಿಯಾದ ಕಂದಾಯದ ವಿರುದ್ಧ ಧ್ವನಿ ಎತ್ತಿದ್ದನ್ನು ಗುರುತಿಸಬಹುದು. ಭಾರತದ ಸಂದರ್ಭದಲ್ಲಿ ನೋಡಿದಾಗ ೧೮೫೭ರಿಂದಲೇ ಜಮೀನ್ದಾರರ ದಬ್ಬಾಳಿಕೆ, ಬ್ರಿಟೀಷರು ಹೇರುತ್ತಿದ್ದ ಅತಿಯಾದ ಕಂದಾಯ ಪದ್ಧತಿಯ ವಿರುದ್ಧ ಹಲವಾರು ಚಳುವಳಿಗಳು ನಡೆದಿವೆ. ಕರ್ನಾಟಕದಲ್ಲಿ ಕೂಡ ಭೂಹೋರಾಟಗಳು ಕಂಡುಬಂದಿವೆ. ಕಾಂಗ್ರೆಸ್ ಪಕ್ಷ ಮತ್ತಷ್ಟು ಎಚ್ಚರಗೊಂಡು ಉತ್ತರ ಕನ್ನಡ ಗೇಣಿದಾರರ ಹೋರಾಟ, ಕಾಗೋಡು ಚಳುವಳಿಯಂತಹವು ನಡೆದಿವೆ.

ರಾಷ್ಟ್ರಮಟ್ಟದಲ್ಲಿ ಕಾಂಗ್ರೆಸ್ ಪಕ್ಷದ ನಾಯಕರು ಭೂಸುಧಾರಣೆಯನ್ನು ಕೈಗೊಂಡಿರುವುದನ್ನು ಈ ಕೆಳಗಿನಂತೆ ನೋಡಬಹುದು. ೧೯೩೬ರಲ್ಲಿ ನಡೆದ ಲಕ್ನೊ ಮತ್ತು ಫಯಿಜಪುರ ಕಾಂಗ್ರೆಸ್ ಸಮ್ಮೇಳನದಲ್ಲಿ ವ್ಯವಸಾಯ ಕ್ಷೇತ್ರಕ್ಕೆ ಸಂಬಂಧಪಟ್ಟಂತೆ ಕೆಲವು ಸುಧಾರಣೆ ತರುವುದಕ್ಕಾಗಿ ಒತ್ತು ಕೊಟ್ಟಿರುವುದನ್ನು ಗಮನಿಸಬಹುದು. ಅವುಗಳೆಂದರೆ

೧. ಗೇಣಿದಾರರನ್ನು ಖಾಯಂಗೊಳಿಸುವುದು.

೨. ಗೇಣಿದಾರರನ್ನು ಒಕ್ಕಲೆಬ್ಬಿಸುವುದರ ಬಗ್ಗೆ ಭೂಮಾಲೀಕರಿಗಿದ್ದ ಹಕ್ಕನ್ನು ಮೊಟಕುಗೊಳಿಸುವುದು.

೩. ಗೇಣಿದಾರರು ಭೂಮಾಲೀಕರಿಗೆ ಕಡಿಮೆ ಗುತ್ತಿಗೆ ಕೊಡುವುದು. ಇವು ಮೂರು ಮುಖ್ಯ ಅಂಶಗಳಾಗಿದ್ದವು (ಕ್ಷೀರಸಾಗರ, ೧೯೮೫:೩೨-೩೩).

ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದ ಡಾ.ರಾಜೇಂದ್ರ ಪ್ರಸಾದರು ೧೯೪೭ರಲ್ಲಿ ಗಾಂಧೀಜಿಯ ಅರ್ಥಶಾಸ್ತ್ರಜ್ಞರಾಗಿದ್ದ ಡಾ.ಜೆ.ಸಿ.ಕುಮಾರಪ್ಪನವರ ನೇತೃತ್ವದಲ್ಲಿ ವ್ಯವಸಾಯ ಸುಧಾರಣಾ ಕಮಿಟಿಯನ್ನು ರಚಿಸಿದರು. ಈ ಕಮಿಟಿಯು ಗ್ರಾಮಾಂತರ ಪ್ರದೇಶದ ಭೂವ್ಯವಸಾಯ ಸಂಬಂಧಗಳನ್ನು ಕೂಲಂಕಶವಾಗಿ ತನಿಖೆ ನಡೆಸಿತ್ತು. ಇದರಲ್ಲಿ ಜಮೀನ್ದಾರಿ ಬಂಡವಾಳಶಾಹಿ ರೀತಿಯ ಭೂಮಾಲೀಕತ್ವವನ್ನು ರದ್ದುಗೊಳಿಸುವುದು, ಎಲ್ಲ ರೀತಿಯ ಶೋಷಣೆಯನ್ನು ತಪ್ಪಿಸಿ ಹಕ್ಕನ್ನು ಕಳೆದುಕೊಂಡ ಭೂಮಾಲೀಕರಿಗೆ

ಸೂಕ್ತ ಪರಿಹಾರ ಕೊಡುವುದಾಗಿತ್ತು ಮತ್ತು ಸಣ್ಣ ಹಿಡುವಳಿಗಳನ್ನು ಲಾಭದಾಯಕವಾಗಲು ಸಹಕಾರಿ ಬೇಸಾಯ ಜಾರಿಗೆ ತರುವುದಾಗಿತ್ತು.

ಇದೇ ಸಂದರ್ಭದಲ್ಲಿ ಬಾಂಬೆ ಕರ್ನಾಟಕ ಪ್ರಾಂತ್ಯದಲ್ಲಿ ಮೊದಲು ಗೇಣಿ ಕಾನೂನು ತರಲಾಗಿತ್ತು. ಈ ಪ್ರಾಂತ್ಯ ಬೆಳಗಾವಿ, ಬಿಜಾಪುರ, ಧಾರವಾಡ ಮತ್ತು ಉತ್ತರ ಕನ್ನಡ ಜಿಲ್ಲೆಗಳು ಹಿಂದೆ ಬಾಂಬೆ ಕರ್ನಾಟಕ ಪ್ರಾಂತ್ಯಕ್ಕೆ ಸೇರಿದ್ದವು. ವಿಶಾಲ ಕರ್ನಾಟಕ ರಚನೆಯಾದ ಮೇಲೆ ಕರ್ನಾಟಕಕ್ಕೆ ಸೇರಿದವು. ಇದಕ್ಕಿಂತಲೂ ಹಿಂದೆ ಈ ಪ್ರದೇಶಗಳಲ್ಲಿ ೧೯೩೯ರಲ್ಲಿ ಬಾಂಬೆ ಗೇಣಿ ಕಾನೂನು ಶಾಸನವನ್ನು ಜಾರಿಗೆ ತರಲಾಯಿತು. ಈ ಕಾನೂನು ಗೇಣಿದಾರರ ಹಿತರಕ್ಷಣೆಗೆ ಸಹಕಾರಿಯಾಗಿತ್ತು.

೧. ಗೇಣೀದಾರರು ಗೇಣಿಯನ್ನು ಒಂದು ನಿಗದಿತ ಮೊತ್ತದ ಗುತ್ತಿಗೆಗಿಂತ ಹೆಚ್ಚು ಕೊಡಬಾರದು.

೨. ಭೂಮಾಲೀಕರು ತಾವೇ ಮನಸೊ ಇಚ್ಛೆ ಗೇಣಿಯನ್ನು ಹೆಚ್ಚಿಸಬಾರದು.

೩. ಗೇಣಿದಾರರನ್ನು ಒಕ್ಕಲೆಬ್ಬಿಸಬಾರದು.

೪. ಗೇಣೀದಾರ ತಾನು ವ್ಯವಸಾಯ ಮಾಡುತ್ತಿರುವ ಜಮೀನಿನಲ್ಲಿ ಮರ ಮುಟ್ಟು ಬೆಳೆದರೆ ಮತ್ತು ಮನೆ ಕಟ್ಟಿಕೊಂಡರೆ ಅದರ ಒಡೆತನದ ಹಕ್ಕು ಗೇಣಿದಾರರಿಗೆ ಸೇರುತ್ತದೆ. ಈ ಶಾಸನ ಗೇಣಿದಾರರಿಗೆ ಒಂದು ಉತ್ತಮವಾದಂತ ಶಾಸನವಾಗಿತ್ತು (ಕ್ಷೀರಸಾಗರ, ೧೯೮೫:೩೨-೩೫) (ಪುಣೇಕರ, ೨೦೦೭:೫).

ಮೇಲ್ಕಂಡಂತೆ ವಿಜಯನಗರ ರಾಜರ ಕಾಲದ ಮೈಸೂರು ರಾಜರ, ಮುಸ್ಲಿಂ ಆಳ್ವಿಕೆಯ ಬ್ರಿಟಿಷರ ಕಾಲದ ಭೂವ್ಯವಸ್ಥೆಯನ್ನು ತಿಳಿದಾಗ ಇಲ್ಲಿ ಕಂಡುಬರುವ ಪ್ರಮುಖ ಮುಖ್ಯಾಂಶಗಳೆಂದರೆ, ಕೃಷಿಗೆ ಸಂಬಂಧಿಸಿದಂತೆ ಯಾವುದೇ ರೀತಿಯ ಬದಲಾವಣೆಗಳನ್ನು ತಂದರೂ ಮುಖ್ಯವಾಗಿ ಕಂದಾಯ ವಸೂಲಿ ಮಾಡುವ ಉದ್ದೇಶವನ್ನು ದೃಷ್ಟಿಯಲ್ಲಿಟ್ಟುಕೊಂಡು ಮಾತ್ರ ಸುಧಾರಣೆ ಮಾಡಿದ್ದರು. ಆಗಿನ ಕಾಲದಲ್ಲಿ ಯಾವುದೇ ಭೂಸುಧಾರಣೆಗೆ ಸಂಬಂಧಿಸಿದಂತೆ ಯಾವುದೇ ಕಾನೂನು ತಂದರೂ ಜನರು ಪ್ರಶ್ನಿಸುವಂತಿರಲಿಲ್ಲ. ಏಕೆಂದರೆ ಅಧಿಕಾರವೆಲ್ಲ ರಾಜರ ಮತ್ತು ಬ್ರಿಟಿಷರ ನಿರಂಕುಶತ್ವದಲ್ಲಿದ್ದು, ಆಳ್ವಿಕೆ ನಡೆಸುವವರು ಪ್ರಜಾಪ್ರತಿನಿಧಿಗಳಾಗಿರಲಿಲ್ಲ. ರೈತರು, ಗೇಣಿದಾರರು ತಮ್ಮ ಹಕ್ಕುಗಳನ್ನೆಲ್ಲ ಕಳೆದುಕೊಂಡು ಭೂಮಾಲೀಕರ, ಆಳ್ವಿಕೆ ನಡೆಸುವವರ ದಬ್ಬಾಳಿಕೆಯಲ್ಲಿ ಬದುಕಬೇಕಿತ್ತು (ಕ್ಷೀರಸಾಗರ, ೧೯೮೫:೪೪). ಈ ವ್ಯವಸ್ಥೆ ನಿಯಂತ್ರಿಸಲಾಗಿದ್ದು, ಕರ್ನಾಟಕದಲ್ಲಿ ಕಾಯ್ದೆಗಳ ಮೂಲಕ ಭೂಸುಧಾರಣೆಯ ಕಾನೂನನ್ನು ತರಲು ಪ್ರಯತ್ನಸಿದ್ದು ಸ್ವಾತಂತ್ರ್ಯ ಬಂದ ನಂತರವೇ ಎಂಬುದು ಮುಖ್ಯವಾಗುತ್ತದೆ. ಅದು ಕಡಿದಾಳ್ ಮಂಜಪ್ಪನವರ ಅಧಿಕಾರಿವಧಿಯಲ್ಲಿಯೇ ಎಂಬುದು ಮಹತ್ವದ ವಿಚಾರವಾಗಿದೆ.

ಗ್ರಾಮೀಣ ಹಿನ್ನೆಲೆಯ ಗೇಣಿದಾರ ಕುಟುಂಬದಿಂದ ಬಂದ ಕಡಿದಾಳ್ ಅವರು ರೈತರ ಕಷ್ಟ, ಸುಖ ಮತ್ತು ನ್ಯಾಯ ಅನ್ಯಾಯಗಳನ್ನು ಕಂಡು ಬೆಳೆದವರಾಗಿದ್ದರು. ಭೂಮಿ ಯಾರಿಗೆ ಸೇರಬೇಕು? ಅದರ ನಿಜವಾದ ವಾರಸುದಾರ ಯಾರಾಗಬೇಕು ಎಂಬುದರ ಬಗ್ಗೆ ಸ್ಪಷ್ಟ ಅರಿವಿತ್ತು. ಈ ಕಾರಣದಿಂದಾಗಿ ಕಡಿದಾಳ್‌ರು ಭೂಮಾಲೀಕರು ಮತ್ತು ಗೇಣೀದಾರರ ನಡುವಿನ ಅಸಮಾನತೆಯನ್ನು ಹೋಗಲಾಡಿಸಲು ಭೂಸುಧಾರಣೆಯ ಕಾರ್ಯ ಕೈಗೊಂಡಿರುವುದು ಸಮಂಜಸವೆನಿಸುತ್ತದೆ. ಇದರಿಂದಾಗಿ ನೂರಾರು ವರ್ಷಗಳಿಂದ ಕೃಷಿ ಭೂಮಿಯಿಲ್ಲದೆ ಭೂಮಾಲೀಕರಿಂದ ಶೋಷಣೆಗೆ ಒಳಗಾಗಿದ್ದ ಗೇಣಿದಾರರಿಗೆ ನ್ಯಾಯ ದೊರಕಿಸುವಲ್ಲಿ ಸಹಾಯಕವಾಯಿತು. ಭೂಮಾಲಿಕ ಮತ್ತು ಗೇಣಿದಾರಿಬ್ಬರಿಗೂ ಅನ್ಯಾಯವಾಗದಂತೆ ಸಾಮಾಜಿಕ ನ್ಯಾಯ ದೊರಕುವಂತೆ ಮಾಡಿದರು. ಇದು ಸಾಮಾಜಿಕ ನ್ಯಾಯದ ಬಗ್ಗೆ ಕಡಿದಾಳ್‌ರಿಗೆ ಇದ್ದ ಅಚಲ ನಿಷ್ಠೆ ಹಾಗೂ ದಕ್ಷತೆಗೆ ಹೆಸರಾಗಿದೆ.

ಸ್ವಾತಂತ್ರ್ಯ ಭಾರತದಲ್ಲಿ ಕಡಿದಾಳ್‌ರಿಗಿಂತ ಮೊದಲೇ ಜವಾಹರಲಾಲ್ ನೆಹರು ಅವರ ನೇತೃತ್ವದಲ್ಲಿ ಕಾಂಗ್ರೆಸ್ ಭೂಸುಧಾರಣೆಗಳ ಪರವಾಗಿ ೧೯೪೭ರಿಂದಲೇ ಪ್ರಯತ್ನಪಟ್ಟಿದ್ದರು. ಆದರೆ ಭೂಸುಧಾರಣೆ ಕಾಯ್ದೆಗಳನ್ನು ಜಾರಿಗೊಳಿಸಲು ಕಾಂಗ್ರೆಸ್ ಅಧಿಕಾರದಲ್ಲಿದ್ದ ಯಾವ ರಾಜ್ಯವು ಗಂಭೀರ ಪ್ರಯತ್ನ ನಡೆಸಿರಲೇ ಇಲ್ಲ. ಮೈಸೂರು ರಾಜ್ಯದಲ್ಲಿ ಇಂಥದ್ದೇ ಸ್ಥಿತಿ ಕಂಡುಬಂದಿದೆ. ೧೯೪೭ರಿಂದ ೧೯೬೫ರವರೆಗೆ ಕಾಂಗ್ರೆಸ್‌ನೊಳಗೆ ಬಲಪಂಥೀಯ ನಾಯಕರಾದ ರಾಜಾಜಿ, ರಾಮರಾಜ, ನಿಜಲಿಂಗಪ್ಪ, ವಲ್ಲಭಬಾಯಿ ಪಟೇಲ್, ಗೋವಿಂದ ವಲ್ಲಭಪಂತ, ವಸಂತರಾವ್ ಪಾಟೀಲ್ ಅವರಂಥ ಮುಖಂಡರು ಪ್ರಬಲರಾಗಿದ್ದರು. ಇವರ ಮನವೊಲಿಸಲು ನೆಹರು ಎರಡು ದಶಕಗಳಿಗೂ ಹೆಚ್ಚು ಕಾಲ ಅವಿರತವಾಗಿ ಶ್ರಮಿಸಬೇಕಾಯಿತು. ಆದರೂ ಭೂಸುಧಾರಣೆಯಂಥ ಸಾಮಾಜಿಕ ನ್ಯಾಯ ದೊರಕಿಸಲು ಸಾಧ್ಯವಾಗಲಿಲ್ಲ. ಕಾರಣ ಅಂದು ಕಾಂಗ್ರೆಸಿನಲ್ಲಿ ಭೂಮಾಲೀಕ ವರ್ಗವೇ ಮುಂಚೂಣಿಯಲ್ಲಿತ್ತು (ಹಣಮಂತ್ರಯ್ಯ, ೨೦೦೬:೩೩). ಇಂಥ ಸಂದರ್ಭದಲ್ಲಿ ಕಡಿದಾಳ್‌ರು ಭೂಮಾಲೀಕರಿಗೆ ಮತ್ತು ಗೇಣಿದಾರರಿಬ್ಬರಿಗೂ ಅನ್ಯಾಯವಾಗದಂತೆ, ಕಾಯ್ದೆ ತಂದು ಭೂಮಾಲೀಕರ ಮನವೊಲಿಸಲು ಪ್ರಯತ್ನಪಟ್ಟಿರುವುದು ಮಹತ್ವವೆನಿಸುತ್ತದೆ.

ಕಡಿದಾಳ್‌ರು ಒಬ್ಬ ಸುಧಾರಕರಾಗಿದ್ದಲ್ಲದೆ, ಸಾಮಾಜಿಕ ವ್ಯವಸ್ಥೆಯಲ್ಲಿ ಕ್ರಾಂತಿಕಾರಿ ಬದಲಾವಣೆ ಆಗಬೇಕೆಂದು ಕನಸು ಕಂಡವರು. ಸಮಾಜದಲ್ಲಿ ಆರ್ಥಿಕ ವ್ಯವಸ್ಥೆ ಸಂಪೂರ್ಣ ಬದಲಾಗಬೇಕು ಎನ್ನುತ್ತಿದ್ದರು. ಈ ನಿಟ್ಟಿನಲ್ಲಿ ಭೂಸುಧಾರಣೆಯಂಥ ಕಾರ್ಯ ಕೈಗೊಂಡಿರುವುದು ಕಂಡುಬಂದಿದೆ (ಶ್ರೀನಿವಾಸಯ್ಯ, ೧೯೯೬:೪೬). ಕಡಿದಾಳ್‌ರು ಅಧಿಕಾರಕ್ಕೆ ಬಂದಂಥ ಸಮಯದಲ್ಲಿ ಪಂಚವಾರ್ಷಿಕ ಯೋಜನೆಯ ಸನ್ನಿವೇಶ ಕೂಡ ಇತ್ತು. ಈ ಯೋಜನೆಯಲ್ಲಿ ಕೃಷಿಗೆ ಮಹತ್ವ ನೀಡಿದ್ದರು. ಹೀಗಾಗಿ ಕೃಷಿ ವ್ಯವಸ್ಥೆಯಲ್ಲಿ ಬದಲಾವಣೆ ತರಲು ಪ್ರಯತ್ನಪಟ್ಟರು. ಇದಕೋಸ್ಕರ ಅವರು ಬಲಾಢ್ಯವರ್ಗದ ದ್ವೇಷವನ್ನು ಕಟ್ಟಿಕೊಳ್ಳಬೇಕಾಯಿತು. ಈ ಭೂಸುಧಾರಣೆಯಲ್ಲಿ ಮೈಸೂರು ಗೇಣಿ ಶಾಸನ, ಧರ್ಮದಾಯ,

ದೇವದಾಯ, ಇನಾಮ್ ಪದ್ಧತಿಗಳನ್ನು ರದ್ದು ಮಾಡಿದ್ದು ಮಹತ್ವದ್ದೆನಿಸಿದೆ. ಈ ಮಸೂದೆಯನ್ನು ತರಬೇಕಾದರೆ ಬಹಳ ಜನ ಅವರನ್ನು ಟೀಕೆ ಮಾಡಿದರೂ ಕೂಡ ರೈತ ವರ್ಗಕ್ಕೆ ಬೆಂಬಲವಾಗಿ ನಿಲ್ಲುವುದರ ಮೂಲಕ 'ಹೊಲ ಉಳುವವನೇ ಒಡೆಯನಾಗಬೇಕು ಅನ್ನುವಂತಹ' ಪರಮ ಸಿದ್ಧಾಂತವನ್ನು ಭೂಸುಧಾರಣೆಯ ಮೂಲಕ ಜಾರಿಗೆ ತಂದರು. ಈ ಕಾರಣದಿಂದ ೧೯೫೦ರಿಂದಲೇ ಹಂತ ಹಂತವಾಗಿ ೧೯೬೧ರವರೆಗೆ ಸರ್ಕಾರದೊಂದಿಗೆ ಪ್ರಯತ್ನಪಟ್ಟಿರುವುದು ಕಂಡುಬಂದಿದೆ.

## ೪.೨. ೧೯೫೨ರ ಮೈಸೂರು ಟೆನನ್ಸಿ ಕಾಯಿದೆ

೧೯೫೧ರಲ್ಲಿ ಭಾರತದ ರಾಜ್ಯಂಗದ ೩ನೇ ಎ ವಿಧಿಯನ್ನು ಅಂಗೀಕರಿಸುವುದರ ಮೂಲಕ ಜಮೀನ್ದಾರಿ ಪದ್ಧತಿಯನ್ನು ಮೂಲೋಚ್ಚಾಟನೆ ಮಾಡಲಾಯಿತು. ಕರ್ನಾಟಕದ ಭೂಸುಧಾರಣೆಗಳ ಮಸೂದೆಗಳಲ್ಲಿ ಮೊದಲ ಮಸೂದೆಯಾಗಿದ್ದು (ರಾಮದಾಸ್, ೧೯೮೩:೬೦). ೧೯೫೨ರಲ್ಲಿ ಅಂದರೆ ಕಡಿದಾಳ್ ಮಂಜಪ್ಪನವರು ಕಂದಾಯ ಮಂತ್ರಿಯಾದಂತಹ ಸಂದರ್ಭದಲ್ಲಿ ವಿಧಾನಸಭೆಯಲ್ಲಿ ಮಂಡಿಸಲ್ಪಟ್ಟಿತು. ಈ ಮಸೂದೆಗೆ ಸಂಬಂಧಪಟ್ಟಂತೆ ವಿವರಗಳು ಈ ಕೆಳಕಂಡಂತಿದೆ.

ಗೇಣಿ ರೈತರಿಗೆ ಭದ್ರತೆಯನ್ನೊದಗಿಸುವ ದೃಷ್ಟಿಯಿಂದ ಮೈಸೂರು ಟೆನನ್ಸಿ ಕಾಯಿದೆಯನ್ನು ಕಡಿದಾಳ್‌ರು ಜಾರಿಗೆ ತಂದರು. ಈ ಶಾಸನವನ್ನು ಕಡಿದಾಳ್‌ರು ಕಾಗೋಡು ಚಳುವಳಿಯು ಪ್ರಾರಂಭವಾದ ನಂತರ ಸತ್ಯಾಗ್ರಹದಲ್ಲಿ ಭಾಗವಹಿಸುತ್ತಲೇ ಜೊತೆ ಜೊತೆಗ ಗೇಣಿಶಾಸನ ತರಲು ಸರ್ಕಾರದೊಂದಿಗೆ ಪ್ರಯತ್ನಪಟ್ಟಿದ್ದು ಕಂಡುಬಂದಿದೆ. ಆಗ ಮೈಸೂರು ರಾಜ್ಯದಲ್ಲಿ ಕೆ.ಸಿ.ರೆಡ್ಡಿಯವರ ನೇತೃತ್ವದ ಸರ್ಕಾರವಿತ್ತು. ಗೇಣಿರೈತರ ರಕ್ಷಣೆಗಾಗಿ ಬಾಂಬೆ ಕರ್ನಾಟಕ ಮಾದರಿಯಲ್ಲಿ ಗೇಣಿಶಾಸನ ತರಲು ಕೆ.ಸಿ.ರೆಡ್ಡಿಯವರಿಗೆ ಒತ್ತಡ ತಂದಿದ್ದರಿಂದಾಗಿ ಒಂದು ಸಮಿತಿಯನ್ನು ರಚಿಸಲಾಯಿತು. ಈ ಸಮಿತಿಯಲ್ಲಿ ಕಡಿದಾಳ್‌ರು ಸೇರಿದಂತೆ ರೆವಿನ್ಯೂ ಮಂತ್ರಿಯಾದ ಹೆಚ್.ಸಿದ್ಧಯ್ಯ, ಗೃಹಸಚಿವರಾದ ಮರಿಯಪ್ಪ, ಕಾನೂನು ಮಂತ್ರಿಯಾದ ಕೆ.ಟಿ.ಭಾಷ್ಯಂ ಅವರು ಹಾಗೂ ಶಾಸಕರೂ ಸಮಿತಿಯ ಸದಸ್ಯರಾಗಿದ್ದರು. ಗೇಣಿಶಾಸನ ಕುರಿತಂತೆ ಈ ಸಮಿತಿಯಲ್ಲಿ ಚರ್ಚೆ ನಡೆಯುವಂತ ಸಂದರ್ಭದಲ್ಲಿ ಕಡಿದಾಳ್‌ರೊಬ್ಬರೇ ಗೇಣಿದಾರರ ಪರ ಮಾತನಾಡುತ್ತಿದ್ದವರಾಗಿದ್ದರು. ಏಕೆಂದರೆ ಉಳಿದವರೆಲ್ಲ ಭೂಮಾಲೀಕರಾಗಿದ್ದರು. ಕಡಿದಾಳ್‌ರು ಗೇಣಿದಾರರ ಪರ ವಾದಿಸುತ್ತಿರುವಾಗ ಕೆ.ಟಿ.ಭಾಷ್ಯಂ ಅವರು ನೀನು ಮುಂದೆ ಕಂದಾಯ ಮಂತ್ರಿಯಾದರೆ ನಮ್ಮ ಭೂಮಿಯನ್ನೆಲ್ಲ ಉಳಿಸುವುದಿಲ್ಲವೆಂದು ಹೇಳುತ್ತಿದ್ದರು ಎಂಬ ವಿಷಯವನ್ನು ಕಡಿದಾಳ್‌ರು ತಮ್ಮ ಆತ್ಮಕಥೆಯಲ್ಲಿ ವ್ಯಕ್ತಪಡಿಸಿದ್ದಾರೆ. ನಂತರ ಸಮಿತಿಯ ವರದಿಗೆ ವಿಧಾನಸಭೆಯಲ್ಲಿ ಒಪ್ಪಿಗೆ ಪಡೆದು ಗೇಣಿಶಾಸನವನ್ನು ರೂಪಿಸಿದರು. ಕಡಿದಾಳ್‌ರು ತಂದಂತಹ ಈ ಗೇಣಿಶಾಸನ ಬಹಳ ಸರಳವಾಗಿದ್ದರೂ ಒಂದು ಪ್ರಗತಿಯ ಸಂಕೇತವಾಗಿತ್ತು (ಕಡಿದಾಳ್, ೧೯೯೦:೧೨೮).

ಈ ಪರಿಶೀಲನಾ ಸಮಿತಿಯಲ್ಲಿ ಕಡಿದಾಳ್‌ರು ಗೇಣಿದಾರರನ್ನು ಒಕ್ಕಲೆಬ್ಬಿಸದಂತೆ ಭದ್ರತೆಯನ್ನು ಒದಗಿಸಲು ಕಾನೂನನ್ನು ರೂಪಿಸಿದ್ದರು. ಭೂಮಾಲೀಕರು ಕೃಷಿ ಭೂಮಿಯನ್ನು ಮಾರುವಂತಿದ್ದರೆ ಅದನ್ನು ಗೇಣಿ ಮಾಡುವವರಿಗೆ ಕೊಡಬೇಕಿತ್ತು. ಅದನ್ನು ಸುಲಭ ಕಂತುಗಳಲ್ಲಿ ಕೊಡಬೇಕಾಗಿತ್ತು. ಗೇಣಿದಾರರ ಪರವಾಗಿ ಕ್ರಮ ಕೈಗೊಂಡಿರುವುದು ಕಂಡುಬರುತ್ತದೆ. ಕಡಿದಾಳ್‌ರು ಗೇಣಿದಾರರಿಗಾಗಿ ಒಂದು ಸರಳ ಶಾಸನವನ್ನು ತಾತ್ಕಾಲಿಕವಾಗಿ ತಂದಿರುವುದನ್ನು ಗುರುತಿಸಬಹುದು. ಈ ಶಾಸನ ಪರಿಶೀಲನಾ ಸಮಿತಿಯಿಂದ ಒಪ್ಪಿಗೆ ಪಡೆದು ಗೇಣಿಶಾಸನವಾದರೂ ಅದು ಜಾರಿಗೆ ಬರಲಿಲ್ಲ. ಏಕೆಂದರೆ ಅದನ್ನು ಜಾರಿಗೆ ತರುವ ಮುನ್ನ ೧೯೫೨ರಲ್ಲಿ ವಿಧಾನಸಭೆಗೆ ಸಾರ್ವತ್ರಿಕ ಚುನಾವಣೆ ನಡೆಯಿತು. ಅನಂತರದಲ್ಲಿ ಮಂತ್ರಿಮಂಡಲ ಬದಲಾಯಿತು. ಇದರಿಂದ ಗೇಣಿ ಶಾಸನ ಕೂಡ ಸ್ಥಗಿತಗೊಂಡಿತು. ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ಅಧಿಕಾರಕ್ಕೆ ಬಂದಂತಹ ಸಂದರ್ಭದಲ್ಲಿ ಕಡಿದಾಳ್‌ರು ಮುಖ್ಯಮಂತ್ರಿ ಕೆಂಗಲ್ ಹನುಮಂತಯ್ಯನವರ ಸಚಿವ ಸಂಪುಟದಲ್ಲಿ ಕಂದಾಯ ಮಂತ್ರಿಯಾದಾಗ ೧೯೫೧ರಲ್ಲಿ ಸ್ಥಗೀತಗೊಂಡಿದ್ದ ಗೇಣಿಶಾಸನವನ್ನು ತಿದ್ದುಪಡಿ ಮಾಡಲು ಪ್ರಯತ್ನಿಸಿದ್ದು ಕಂಡುಬರುತ್ತದೆ. ಹಾಗೆಯೇ ಅಧಿಕಾರವನ್ನು ಪಡೆಯುವುದರ ಮೂಲಕ ಗೇಣಿದಾರರಿಗೆ ಮತ್ತು ಭೂಮಾಲೀಕರಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಇತ್ಯರ್ಥಪಡಿಸಲು ಒಂದು ಉತ್ತಮವಾದ ಗೇಣಿಶಾಸನ ರೂಪಿಸಿದ್ದು ಕಂಡುಬರುತ್ತದೆ. ಕೆ.ಸಿ.ರೆಡ್ಡಿಯವರು ಮುಖ್ಯಮಂತ್ರಿಯಾಗಿದ್ದಾಗ ಮಂಡಿಸಲ್ಪಟ್ಟಿದ್ದ ಗೇಣಿಶಾಸನವನ್ನೇ "ಮೈಸೂರು ಟೆನೆನ್ಸಿ ಕಾಯಿದೆ" ಎಂಬ ಹೆಸರಿನಲ್ಲಿ ೧೦-೬-೧೯೫೨ರಂದು ಕಡಿದಾಳ್ ಅವರು ಜಾರಿಗೆ ತಂದಿದ್ದರು. ಈ ಕಾಯಿದೆಯನ್ನು ಮೊದಲು ರೈತರ ಸಮಸ್ಯೆಗಳು ತೀವ್ರವಾಗಿ ಕಂಡುಬರುವಂಥ ಸ್ಥಳಗಳಲ್ಲಿ ಜಾರಿಗೆ ತಂದರು. ಬಂಗಾರುಪೇಟೆ, ಮುಳಬಾಗಿಲು, ಮೊಳಕಾಲ್ಮೂರು, ತೀರ್ಥಹಳ್ಳಿ, ಸಾಗರ, ಹೊಸನಗರ, ಕೊಪ್ಪ, ಶ್ರೀರಂಗಪಟ್ಟಣ, ಮಧುಗಿರಿ ತಾಲ್ಲೂಕುಗಳಲ್ಲಿ ತರುವಂತೆ ಸರ್ಕಾರಕ್ಕೆ ಆದೇಶ ಹೊರಡಿಸಿದರು. ೧೯೫೩ರಲ್ಲಿ ರಾಜ್ಯದ ಬೇರೆ ಬೇರೆ ಕಡೆಯಲ್ಲಿ ಪ್ರವಾಸ ಕೈಗೊಂಡು ರೈತರ ಸಮಸ್ಯೆಗಳನ್ನು ಕಂಡು ಕೇಳಿ ಉಳಿದ ತಾಲ್ಲೂಕುಗಳಲ್ಲೂ ಜಾರಿಗೆ ತಂದರು. ಈ ಗೇಣಿಶಾಸನವನ್ನು ವಿಧಾನಸಭೆಯಲ್ಲಿ ಚರ್ಚಿಸುವಾಗ ಹರಿಜನ, ಗಿರಿಜನರಿಗೂ ಮತ್ತು ಭೂಹೀನ ಕೃಷಿಕರಿಗೂ ಪ್ರಾಮುಖ್ಯತೆ ಕೊಟ್ಟಿದ್ದು ಮಹತ್ವವೆನಿಸುತ್ತದೆ. ವ್ಯವಸಾಯಕ್ಕೆ ಯೋಗ್ಯವಾದ ಸರ್ಕಾರಿ ಭೂಮಿಯನ್ನು ಸಾಮಾನ್ಯವಾಗಿ ಹರಾಜಿನ ಮೂಲಕ ಆಗಲೇ ಜಮೀನನ್ನು ಹೊಂದಿದಂತಹ ಭೂಮಾಲೀಕರು ಮತ್ತು ಶ್ರೀಮಂತರೇ ಪಡೆಯುತ್ತಿದ್ದರು. ಇದನ್ನು ತಪ್ಪಿಸಿ ಭೂಹೀನ ಕೃಷಿಕರಿಗೆ ಸಿಗುವಂತೆ ಮಾಡಿದ್ದು ಕಂಡುಬರುತ್ತದೆ. ಹಾಗೆಯೇ ಭೂಮಿಯನ್ನು ಯಾರು ಕೃಷಿ ಮಾಡುತ್ತಿರುತ್ತಾರೆಯೋ ಅವರ ಹೆಸರಿಗೆ ಖಾಯಂಗೊಳಿಸಲು ಕ್ರಮಕೈಗೊಂಡರು. (ಕಡಿದಾಳ್, ೧೯೯೦:೧೫೦), (ರಾಜಶೇಖರ್, ೧೯೮೦:೧೨೧-೧೨೨).

೧೯೫೨ರಲ್ಲಿ ತಂದಂತಹ ಈ ಶಾಸನ ಕರ್ನಾಟಕ ಭುಸುಧಾರಣೆಯಲ್ಲಿಯೂ ಮೊದಲ ಶಾಸನವಾಗಿತ್ತು. ಈ ಕಾಯಿದೆಯಲ್ಲಿ ತಿದ್ದುಪಡಿಯಾದಂಥ ಅಂಶಗಳೆಂದರೆ;

೧. "೧೨ ವರ್ಷಕ್ಕಿಂತ ಜಾಸ್ತಿ ಅವಧಿಯಲ್ಲಿ ಗೇಣಿ ಮಾಡಿಕೊಂಡಿದ್ದ ಗೇಣಿ ಒಕ್ಕಲುಗಳಿಗೆ ಖಾಯಂ ಹಕ್ಕುಗಳನ್ನು ಕೊಟ್ಟಿತು.

೨. ಈ ಕಾಯಿದೆ ಗೇಣಿಯನ್ನು ಫಸಲಿನ ೧/೩ ಕ್ಕಿಂತ ಜಾಸ್ತಿ ಇರಕೂಡದೆಂದು ಕಾಯಿದೆ ತರಲಾಯಿತು.

೩. ಕಾಯಿದೆ ಪ್ರಕಾರ ಭೂಮಾಲೀಕ ತನ್ನ ಸ್ವಂತ ಸಾಗುವಳಿಗೆಂದು ಒಕ್ಕಲುಗಳಿಂದ ಭೂಮಿಯನ್ನು ಬಿಡಿಸಿಕೊಳ್ಳಬಹುದಾಗಿತ್ತು. ಜೊತೆಗೆ ಗೇಣಿ ಬಾಕಿ ಇದ್ದರೆ, ಗೇಣಿ ಜಮೀನಿನಲ್ಲಿ ಒಕ್ಕಲುಗಳು ಕೃಷಿ ಮಾಡದೇ ಇದ್ದರೆ, ಜಮೀನು ಹಾಳುಗೆಡವಿದ್ದರೆ ಭೂಮಾಲೀಕರು ಒಕ್ಕಲೆಬ್ಬಿಸಬಹುದಾಗಿತ್ತು (ವಿಧಾನಸಭೆ ನಡವಳಿಕೆ, ೨೭ನೇ ಮಾರ್ಚ್ ೧೯೫೩), (ಕವಂಟೆ ಮತ್ತು ಪೂಜಾರ್, ೧೯೯೯:೫೧-೫೨).

ಈ ಮೇಲಿನ ಅಂಶಗಳನ್ನು ಇಟ್ಟುಕೊಂಡು ಕಡಿದಾಳ್‌ರು ವಿಧಾನಸಭೆಯಲ್ಲಿ ಚರ್ಚಿಸುವಾಗ ಈ ಕಾಯ್ದೆಯನ್ನು ಕುರಿತಂತೆ "ಭೂಮಿಯನ್ನು ೧೨ ವರ್ಷಗಳವರೆಗೆ ಸಾಗುವಳಿ ಮಾಡಿದ್ದರೆ, ಅವನು ಆ ಭೂಮಿಗೆ ಖಾಯಂ ಒಡೆಯನಾಗುವುದು ಸತ್ಯ. ಒಂದು ವೇಳೆ ಭೂಮಿಯನ್ನು ಸಾಗುವಳಿ ಮಾಡಬೇಕಾದರೆ, ನೀವು ಅಮಲ್ದಾರರಿಗೆ ಅರ್ಜಿ ಸಲ್ಲಿಸಿ, ಭೂಮಿಯ ಮೇಲೆ ತಮ್ಮ ಸೊತ್ತನ್ನು ಪಡೆದುಕೊಳ್ಳಬಹುದು. ಈ ಉಪಬಂಧವನ್ನು ತಿದ್ದುಪಡಿ ಮಾಡಬೇಕಾಗುತ್ತದೆ ಎಂದು ತಿಳಿಸಿದರು(ವಿಧಾನ ಸಭೆ ನಡವಳಿಕೆ ೨೭ನೇ ಮಾರ್ಚ್ ೧೯೫೩), (ಕವಂಟೆ ಮತ್ತು ಪೂಜಾರ್, ೧೯೯೯:೫೧-೫೨-೫೩).

ಈ ಮಸೂದೆಯು ಭೂಮಾಲೀಕರಿಗೆ ಅನುಕೂಲವಾಗುವಂತೆ ಇದೆಯೆಂದು ಯೋಚಿಸಿ ಕಡಿದಾಳ್‌ರು ಮತ್ತೊಮ್ಮೆ ತಿದ್ದುಪಡಿ ಮಾಡಲು ವಾದಿಸಿದ್ದರು. ವಿಧಾನಸಭೆಯಲ್ಲಿ ಚರ್ಚೆ ನಡೆಯುವಂತಹ ಸಂದರ್ಭದಲ್ಲಿ ಕಡಿದಾಳ್‌ರು ಗೇಣೀದಾರರ ಪರ ನಿಂತು ವಾದಿಸುತ್ತಾರೆ. ಹಾಗೆಯೇ ಶ್ರೀಮಂತ ಮತ್ತು ಒಡೆಯರ ಮಧ್ಯೆಯಿರುವ ವೈಷಮ್ಯತೆ ನಿರ್ಮೂಲನೆ ಮಾಡಲು ಹಿಡುವಳಿಗೆ ಗರಿಷ್ಠ ಮಿತಿ ನಿಗದಿಗೊಳಿಸಬೇಕೆಂದರು. ಈ ಮಿತಿಯನ್ನು ನಿಗದಿಗೊಳಿಸಲು ಭೂಮಿಯ ಸ್ವರೂಪ ಮತ್ತು ಸನ್ನಿವೇಶ ಗಮನದಲ್ಲಿಟ್ಟುಕೊಳ್ಳುವಂತೆ ವಾದಿಸಿರುವುದು ಕಂಡುಬಂದಿದೆ. ಸ್ವತ್ತಿನ ಹಂಚಿಕೆಯು ಕೇವಲ ಕೃಷಿ ಭೂಮಿಗಳಿಗೆ ಮಾತ್ರ ಸೀಮಿತಗೊಳ್ಳದೇ ಮನೆ ಮತ್ತು ಇತರ ಸ್ವತ್ತುಗಳಿಗೂ ವಿಸ್ತರಿಸಬೇಕೆಂದರು. ಈ ರೀತಿಯಾಗಿ ಸಮರ್ಪಕವಾಗಿ ಹಂಚಿದರೆ ಮಾತ್ರ ಬಡವ ಮತ್ತು ಶ್ರೀಮಂತರ ನಡುವಿನ ಅಸಮಾನತೆಯನ್ನು ಹೋಗಲಾಡಿಸಬಹುದೆಂದು ವಾದಿಸಿರುವುದು ಅವರಲ್ಲಿ ಸಮಾನತೆಯ ದೃಷ್ಟಿಕೋನದ ಒಲವನ್ನು ತಿಳಿಸುತ್ತದೆ (ಕವಂಟೆ ಮತ್ತು ಪೂಜಾರ್, ೧೯೯೯:೫೨). ಈ ಕಾಯ್ದೆ ಜಾರಿಗೆ ತಂದಾಗ ಬಂದಂತಹ ಪ್ರತಿಕ್ರಿಯೆ ಈ ಕೆಳಗಿನಂತಿದೆ.

೧೯೫೨ರ ಮೈಸೂರು ಟೆನನ್ಸಿ ಕಾಯಿದೆ ಗೇಣಿರೈತರಿಗೆ ಭದ್ರತೆಯನ್ನೊದಗಿಸುವ ದೃಷ್ಟಿಯಿಂದ ರಚಿತವಾಗಿದ್ದರೂ ಜಮೀನ್ದಾರರಿಗೆ ತಮ್ಮ ಜಮೀನಿನಿಂದ ಗೇಣಿ ರೈತರನ್ನು ಹೊರ ಹಾಕಲಿಕ್ಕೆ

ಸದವಕಾಶವನ್ನು ಕಲ್ಪಿಸಿಕೊಟ್ಟಿತು. ಈ ಗೇಣಿಶಾಸನ ಬರುವುದಕ್ಕಿಂತ ಮುಂಚೆ ಭೂಮಾಲೀಕರೇ ಗೇಣಿರೈತರನ್ನು ಹೊರಹಾಕುತ್ತಿದ್ದರು. ಆದರೆ ಈ ಶಾಸನ ಜಾರಿಗೆ ಬಂದ ನಂತರ ಕಾನೂನಿನ ಮೂಲಕ ಗೇಣಿದಾರರನ್ನು ಒಕ್ಕಲೆಬ್ಬಿಸಲು ಸರ್ಕಾರವೇ ದಾರಿ ತೋರಿಸಿಕೊಟ್ಟಂತಾಯಿತು ಎಂಬ ಆಪಾದನೆಯು ಬಂತು. ಈ ಶಾಸನವನ್ನು ಕುರಿತಂತೆ ಕಡಿದಾಳ್‌ರು ಜುಲೈ ೧೯, ೧೯೫೪ರಲ್ಲಿ 'ತಾಯಿನಾಡು' ಪತ್ರಿಕೆಯಲ್ಲಿ ಆಕ್ಷೇಪಣೆ ವ್ಯಕ್ತಪಡಿಸಿದ್ದು ಕಂಡುಬಂದಿದೆ (ಕೀರ್ತಿನಾಥ, ೧೯೯೫:೪೪). ಗೇಣಿ ಕಾನೂನಿನಲ್ಲಿ ಗೇಣಿದಾರ ರೈತನಿಗೆ ಉಳುಮೆಯ ಹಕ್ಕನ್ನು ಕೊಟ್ಟಿದ್ದಾರೆ ನಿಜ, ಆದರೆ ಕಾನೂನಿನಲ್ಲಿ ಒದಗಿಸಿರುವ ಈ ಅಲ್ಪ ಸೌಲಭ್ಯಗಳನ್ನು ರೈತರಿಗೆ ತಲುಪಿಸಬೇಕೆಂಬ ಕರ್ತವ್ಯವನ್ನು ಸರ್ಕಾರ ಮರೆತಂತಿದೆ. ಜಮೀನ್ದಾರ ಹಿಡುವಳಿದಾರರು ಮತ್ತು ಇನಾಂದಾರರು ಓದು ಬರಹ ತಿಳಿದಂತವರಾಗಿದ್ದು, ಕಾನೂನಿನಲ್ಲಿ ತಮಗಿರುವ ರಕ್ಷಣೆಯನ್ನು ಸಂಪೂರ್ಣವಾಗಿ ಪಡೆಯುತ್ತಿದ್ದರು ಎಂಬ ವಿಷಯ ವ್ಯಕ್ತವಾಗುತ್ತದೆ (ಕ್ಷೀರಸಾಗರ, ೧೯೮೫:೫೨-೫೩), (ಬೋರಲಿಂಗಯ್ಯ ಮತ್ತು ಹುಚ್ಚಪ್ಪ ಮಾಸ್ತರ್, ೨೦೦೨:೬೭೧).

## ೪.೩. ೧೯೫೪-೫೫ರ ಇನಾಂ ಮತ್ತು ಜಹಗೀರು ರದ್ದಿಯಾತಿ ಶಾಸನ

ಇನಾಂ ಎಂಬ ಪದವು ಪರ್ಶಿಯನ್ ಭಾಷೆಯಿಂದ ಬಂದ ಪದವಾಗಿದೆ. ಪ್ರಾಚೀನ ಕಾಲದಲ್ಲಿ ದಕ್ಷಿಣ ಭಾರತದಲ್ಲಿ ಒಂದು ವಿಧದ ಸಾಗುವಳಿ ಭೂಮಿಗೆ ಹೀಗೆ ಕರೆಯುತ್ತಿದ್ದರು (ಕೆ.ನೀಲಕಂಠಶಾಸ್ತ್ರಿ ಜಿ ಚೋಳ್ ಮದ್ರಾಸ್, ೧೯೫೪, ೫೭೪ ೫೮೨). ಸಾಹಿತ್ಯಿಕವಾದ ಅರ್ಥದಲ್ಲಿ ಕಂದಾಯ ರಹಿತ ಕೊಡುಗೆ ಭೂಮಿಯೆಂದು ಹೇಳಬಹುದು. ಇನಾಮ್ ಭೂಮಿಯ ಹಾಗೆ ಜಹಗೀರ ಪದ್ಧತಿಯು ಒಂದು ವಿಧವಾಗಿದ್ದು, ಇದು ಕೂಡ ಕಂದಾಯ ರಹಿತ ಭೂಮಿಯಾಗಿತ್ತು. ಈ ಹಿಡುವಳಿಗಳನ್ನು ಪ್ರಾಚೀನ ಕಾಲದಿಂದ ಬಂದ ರಾಜವಂಶಗಳು ಧಾರ್ಮಿಕ ಸಂಸ್ಥೆಗಳಿಗೆ ಮತ್ತು ಅಧಿಕಾರಿಗಳಿಗೆ ಕೊಟ್ಟು ರಕ್ಷಿಸುತ್ತಾ ಬಂದಿವೆ. ಇದು ಭಾರತದ ಸ್ವಾತಂತ್ರ ಪಡೆದ ನಂತರ ೧೯೫೪ ೧೯೫೫ರಲ್ಲಿ ಇವುಗಳ ರದ್ಧಯಾತಿ ಕುರಿತಂತೆ ಕಡಿದಾಳ್‌ರು ಕಂದಾಯ ಮಂತ್ರಿಯಾದಂತಹ ಸಂದರ್ಭದಲ್ಲಿ ಕೈಗೊಂಡ ಕ್ರಮಗಳು ಈ ಕೆಳಗಿನಂತಿದೆ.

ಸ್ವಾತಂತ್ರ್ಯನಂತರ ಮೈಸೂರು ರಾಜ್ಯದಲ್ಲಿ ಸರ್ಕಾರದಿಂದ ಜಾರಿಗೆ ಬಂದ ೧೯೫೪-೫೫ರ ಇನಾಂ ಮತ್ತು ಜಹಗೀರ್ ರದ್ದಿಯಾತಿ ಶಾಸನ ಬಹಳ ಮುಖ್ಯವಾದದ್ದು. ಈ ಕೃಷಿಯ ಪದ್ಧತಿಯನ್ನು ಸ್ವಾತಂತ್ರ್ಯಪೂರ್ವದಲ್ಲಿ ಅಂದರೆ ಪ್ರಜಾಪ್ರತಿನಿಧಿ ಸಭೆ ಪ್ರಾರಂಭವಾದಾಗಿನಿಂದಲೂ ಇನಾಂ ಮತ್ತು ಜಹಗೀರ ಪದ್ಧತಿಯನ್ನು ರದ್ದು ಮಾಡಲು ಪ್ರಯತ್ನ ಪಟ್ಟಿದ್ದರೂ ಸಾಧ್ಯವಾಗಿರಲಿಲ್ಲ. ಆದರೆ ಕಡಿದಾಳ್ ಮಂಜಪ್ಪನವರು ಕಂದಾಯ ಮಂತ್ರಿಯಾದ ಸಂದರ್ಭದಲ್ಲಿ ಈ ಶಾಸನವನ್ನು ಜಾರಿಗೆ ತಂದಿರುವುದು ಕ್ರಾಂತಿಕಾರಕವಾಗಿತ್ತು. ಧರ್ಮದ ಹೆಸರಿನಲ್ಲಿ ದೇವಾಲಯಗಳಿಗೆ ಮತ್ತು ಮಠಗಳಿಗೆ ಇನಾಮ್ ಮತ್ತು ಜಹಗೀರ್ ಹೆಸರಿನಲ್ಲಿ ಬಿಟ್ಟಿದ್ದ ಆಸ್ತಿಯ ಹಕ್ಕನ್ನು ರದ್ದು ಮಾಡಿ ಆ ಭೂಮಿಯನ್ನು ಉಳುವವನಿಗೆ

ನೀಡುವ ಮುಖ್ಯ ಉದ್ದೇಶವನ್ನು ಇಟ್ಟುಕೊಂಡು, ಕಡಿದಾಳ್‌ರು ಈ ಕಾಯ್ದೆಯನ್ನು ಜಾರಿಗೆ ತಂದರು. ಬ್ರಾಹ್ಮಣ ವರ್ಗದವರು ಅಧಿಕವಾಗಿರುವ ಮೈಸೂರು ಸಂಸ್ಥಾನದಲ್ಲಿ ಈ ಪದ್ಧತಿಯ ಹೆಸರಿನಲ್ಲಿ ಭೂಮಿಯು ಸಂಪೂರ್ಣ ಅವರ ವಶದಲ್ಲೇ ಇತ್ತು. ಕಂದಾಯದಿಂದ ವಿನಾಯಿತಿ ಹೊಂದಿದ್ದ. ಜಮೀನ್ದಾರರೆನಿಸಿಕೊಂಡಿದ್ದರು. ಆದರೆ ಅವರು ಸ್ವತಃ ವ್ಯವಸಾಯ ಮಾಡುವ ಉಳುಮೆದಾರರಾಗಿರಲಿಲ್ಲ. ಕೃಷಿ ಭೂಮಿಯನ್ನು ಗೇಣಿದಾರರಿಗೆ ನೀಡುತ್ತಿದ್ದಲ್ಲದೆ ಗೇಣಿದಾರರನ್ನು ಸಂಪೂರ್ಣವಾಗಿ ಶೋಷಣೆ ಮಾಡುತ್ತಿದ್ದರು. ಬೆಳೆದ ಬೆಳೆಯಲ್ಲಿ ಹೆಚ್ಚಿನ ಭಾಗವನ್ನು ಇನಾಂದಾರರಿಗೆ ನೀಡಬೇಕಿತ್ತು(ಕ್ಷೀರಸಾಗರ, ೧೯೮೫:೫೩) (ವಿಜಯ್(ಸಂ), ೨೦೦೧:೮೬೪-೮೬೫).

ಮೈಸೂರು ಸಂಸ್ಥಾನದಲ್ಲಿ ಹೆಚ್ಚಿನ ಜಮೀನು ಮಠ ಮತ್ತು ದೇವಾಲಯಗಳಿಗೆ ನೀಡಿದ್ದರು. ಮಠ ಮತ್ತು ದೇವಾಲಯಗಳ ಮುಖ್ಯಸ್ಥರು ಅಂದಿನ ಸಾಮಾಜಿಕ ಕ್ಷೇತ್ರದ ಜೀವನದ ಮೇಲೆ ಹೆಚ್ಚಿನ ಅಧಿಕಾರವನ್ನು ಚಲಾಯಿಸುತ್ತಿದ್ದರು. ಇಂತಹ ಪದ್ಧತಿಗೆ ಒಳಪಟ್ಟಂಥ ಜಮೀನು ಮೈಸೂರು ಸಂಸ್ಥಾನದಲ್ಲಿ ಸಾಕಷ್ಟು ಕಂಡುಬಂದಿದೆ. ಕಡಿದಾಳ್‌ರು ಇನಾಂ ಪದ್ಧತಿ ಮಸೂದೆಯನ್ನು ಮಂಡಿಸುವಂಥ ಸಂದರ್ಭದಲ್ಲಿ ಅದರ ಅಂಕಿ ಅಂಶಗಳ ವಿವರ ಹೀಗೆ ನೀಡಿದ್ದಾರೆ. ಆಗ ಮೈಸೂರು ಸಂಸ್ಥಾನದಲ್ಲಿ ದೇವಾಲಯದ ಇನಾಂತಿ ಜಮೀನು ಒಂದು ಲಕ್ಷದ ೮೪ ಸಾವಿರ ಎಕರೆ, ಬ್ರಹ್ಮಾದಾಯ ಜಮೀನು ೫ ಲಕ್ಷ ಎಕರೆ, ವೈಯಕ್ತಿಕ ಇನಾಂ ಜಮೀನು ೩ ಲಕ್ಷ ೩೧ ಸಾವಿರ ಎಕರೆ, ಪೋಟಿಕೆ ಇನಾಂತಿ ಜಮೀನು ೮ ಸಾವಿರ ಎಕರೆ, ಇತರೆ ಇನಾಂತಿ ಜಮೀಣು ೯ ಸಾವಿರ ಎಕರೆ, ಗ್ರಾಮ ಸೇವಕರಿಗೆ ೨ ಸಾವಿರ ಎಕರೆ ಜಮೀನಿತ್ತು (ವಿಧಾನ ಸಭೆ ನಡುವಳಿಕೆ, ೧೯೫೩:೧೪೮೫-೧೪೮೬), (ವೆಂಕಪ್ಪಗೌಡ, ೨೦೦೧:೫೦-೫೧). ಸ್ವಾತಂತ್ರ್ಯ ಪೂರ್ವದಲ್ಲಿಯೇ ರಾಷ್ಟ್ರಮಟ್ಟದಲ್ಲಿ ಕಾಂಗ್ರೆಸ್ಸಿಗರು ಈ ತರಹದ ಜಮೀನಿನಲ್ಲಿ ಮಧ್ಯವರ್ತಿಗಳು ಇರಬಾರದೆಂದು ಉಳುವವನೆ ಭೂಮಿಯ ಮಾಲೀಕನಾಗಬೇಕೆಂಬ ತತ್ವಕ್ಕೆ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟರು. ಈ ನೀತಿಗೆ ಅನುಗುಣವಾಗಿ ಭೂಸುಧಾರಣೆಯಾಗಬೇಕೆಂದು ಮೈಸೂರು ಸರ್ಕಾರದಲ್ಲಿ ಯೋಚಿಸಲಾಗಿತ್ತು. ಈ ಹಿನ್ನೆಲೆಯಲ್ಲಿ ೧೯೪೯ರಲ್ಲಿ ಕೆ.ಸಿ.ರೆಡ್ಡಿಯವರ ಸರ್ಕಾರ ಕಂದಾಯ ಪದ್ಧತಿಯನ್ನು ಪುನರ್‌ವಿಮರ್ಶೆ ಮಾಡುವ ಸಲುವಾಗಿ ಮತ್ತು ಇನಾಂಗಳನ್ನು, ಜಹಗೀರಿಗಳನ್ನು ರದ್ದುಮಾಡುವ ಸಲುವಾಗಿ ಸರ್ಕಾರಕ್ಕೆ ಸೂಕ್ತ ಸಲಹೆ ನೀಡುವುದಕ್ಕಾಗಿ ಒಂದು ಸಮಿತಿಯನ್ನು ಹೆಚ್.ಗುಂಡಪ್ಪಗೌಡರ ಅಧ್ಯಕ್ಷತೆಯಲ್ಲಿ ನೇಮಕ ಮಾಡಿದ್ದರು. ಈ ಸಮಿತಿಯು ಭೂಹಿಡುವಳಿಗೆ ಮತ್ತು ಭೂಸುಧಾರಣೆಗಳಿಗೆ ಸಂಬಂಧಪಟ್ಟ ಕಾನೂನುಗಳನ್ನು ಅಧ್ಯಯನ ಮಾಡಿ ಒಂದು ವರದಿಯನ್ನು ೧೯೫೧ರಲ್ಲಿ ಶಾಸನ ಸಭೆಯಲ್ಲಿ ಚರ್ಚಿಸಲು ಕೊಟ್ಟಿತ್ತು. ಇದನ್ನು ಜಾರಿಗೆ ತರುವ ಹೊತ್ತಿಗೆ ಕೆ.ಸಿ.ರೆಡ್ಡಿಯವರ ಸಚಿವ ಸಂಪುಟ ವಿಸರ್ಜನೆಗೊಂಡು ೧೯೫೨ರಲ್ಲಿ ಸಾರ್ವತ್ರಿಕ ಚುನಾವಣೆ ನಡೆದಿದ್ದರಿಂದ ಈ ಕಾನೂನು ಕೂಡ ಸ್ಥಗಿತಗೊಂಡಿತು (ವಿಧಾನಸಭೆ ನಡವಳಿಕೆ, ೧ ಏಪ್ರಿಲ್ ೧೯೫೩:೧೪೮೬), (ಕಡಿದಾಳ್, ೧೯೯೦:೧೬೦-೧೬೧).

ಕಡಿದಾಳ್‌ರು ಕಂದಾಯ ಮಂತ್ರಿಯಾದ ಸಂದರ್ಭದಲ್ಲಿ ಇನಾಂ ಪದ್ಧತಿಯನ್ನು ರದ್ದು ಮಾಡುವ ಸಲುವಾಗಿ ಒಂದು ಹೊಸ ವಿಧೇಯಕವನ್ನು ಸಿದ್ಧಗೊಳಿಸಿದ್ದರು. ಇದರ ಕುರಿತಂತೆ ವಿಧಾನಸಭೆಯಲ್ಲಿ ಧರ್ಮದಾಯ, ದೇವದಾಯ ಮುಂತಾದ ಇನಾಂಗಳನ್ನು ಕುರಿತಂತೆ ಚರ್ಚೆ ನಡೆಯಿತು. ಸದನಗಳ ಒಪ್ಪಿಗೆ ಪಡೆದು ನಂತರ ೧-೩-೧೯೫೪ರಲ್ಲಿ ಮೈಸೂರು ವೈಯಕ್ತಿಕ ಮತ್ತು ಇನ್ನಿತ್ತರ ಇನಾಂ ರದ್ಧತಿ ಕಾಯಿದೆ ಜಾರಿಗೆ ತಂದರು (ರಾಜನ್, ೧೯೮೭:೨೦೭). ಈ ಮಸೂದೆಯನ್ನು ಕುರಿತು ಕಡಿದಾಳ್‌ರು ಚರ್ಚಿಸುವಾಗ ಇನಾಂದಾರರ ಹೆಸರಿನಲ್ಲಿರುವ ಜಮೀನನ್ನು ಮೊದಲೇ ಸರ್ಕಾರದ ವಶಕ್ಕೆ ಪಡೆದು ನಂತರ ಅಲ್ಲಿ ಉಳುಮೆ ಮಾಡುತ್ತಿದ್ದ ರೈತರಿಗೆ ಕೊಡಬೇಕೆಂದು ತೀರ್ಮಾನಿಸಿದರು. ಇದರಿಂದ ರೈತರಿಗೆ ಯಾವುದೇ ರೀತಿಯ ಮೋಸವಿಲ್ಲದೆ ಸರ್ಕಾರಕ್ಕೆ ಎಲ್ಲರಂತೆ ಕಂದಾಯ ಕೊಡುವುದರ ಜೊತೆಗೆ, ಜಮೀನಿಗೆ ಏನು ಮಾರ್ಕೆಟ್ ಬೆಲೆ ಇರತ್ತದೆಯೋ ಅದರಲ್ಲಿ ಶೇ.೫೦ರಷ್ಟನ್ನು ಐದು ಕಂತುಗಳಲ್ಲಿ ಕಟ್ಟಬೇಕೆಂದು ತಿಳಿಸಿದ್ದರು (ವಿಧಾನ ಸಭೆ ನಡವಳಿಗೆ ೧೧ನೇ ಏಪ್ರಿಲ್, ೧೯೫೩). ಹಾಗೆಯೇ ಗುಂಡಪ್ಪಗೌಡ ಸಮಿತಿಯ ವರದಿಯಂತೆ ಎಲ್ಲ ವಿಧವಾದ ಇನಾಂಗಳನ್ನು, ಜಹಗೀರಿಗಳನ್ನು ರದ್ದುಪಡಿಸುವುದಕ್ಕೆ ಮಹತ್ವ ನೀಡಿರುವುದು ಕಂಡುಬಂದಿದೆ. ವೈಯಕ್ತಿಕ ಇನಾಂಗಳನ್ನು ಜಹಗೀರಿಗಳನ್ನು ರದ್ದುಪಡಿಸಿರುವುದಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದ್ದರು. ಈ ಕಾಯ್ದೆಯನ್ನು ಜಾರಿಗೆ ತರುವುದರ ಮೂಲಕ ರೈತರಿಗೆ ಹೆಚ್ಚಿನ ಸಹಾಯಕವಾಗುವಂತೆ ಕಡಿದಾಳ್‌ರು ಮಾಡಿದರು. ಈ ಮಸೂದೆಯನ್ನು ರಚಿಸಬೇಕಾದರೆ ಭಾರತದ ಇತರ ಸಂಸ್ಥಾನಗಳಲ್ಲಿ ಜಾರಿಯಲ್ಲಿರತಕ್ಕ ಕಾನೂನುಗಳನ್ನು ಪರಿಶೀಲಿಸಿ ಈ ಮಸೂದೆಯನ್ನು ತಯಾರಿಸಲಾಗಿತ್ತು.

ಧಾರ್ಮಿಕ ಜಹಗೀರು ಕಡಿಮೆ ಇದ್ದದರಿಂದ ಅದರ ಪರಿಣಾಮ ಅಷ್ಟೇನು ಮಹತ್ವದ್ದಾಗಿರಲಿಲ್ಲ. ಆದರೆ ಇನಾಂ ಕಾಯ್ದೆಯು ಕಡಿದಾಳ್‌ರು ತಂದಂತಹ ಕಾಯ್ದೆಗಳಲ್ಲೇ ಅತೀ ಮುಖ್ಯವಾದದ್ದು. ಅನೇಕ ವರ್ಷಗಳ ಕಾಲ ಮಠಗಳು ದೇವಾಲಯಗಳ ವಶದಲ್ಲಿದ್ದ ಭೂಮಿಯೆಲ್ಲ ಭೂಹೀನರಿಗೆ ದೊರೆತ್ತದ್ದರಿಂದ ಇಂದಿಗೂ ಕಡಿದಾಳ್‌ರನ್ನು ಸ್ಮರಿಸುತ್ತಾರೆ. ಶೃಂಗೇರಿ ಮಠದವರು ಬೇರೆಯವರಿಂದ ವಶಪಡಿಸಿಕೊಂಡಿದ್ದ ಭೂಮಿಯೆಲ್ಲವನ್ನು ಮರಳಿ ಪಡೆದರು. ಈ ಕಾಯ್ದೆ ತಂದಿದ್ದರಿಂದ ನಿಜವಾಗಿ ದುಡಿಯುವವನಿಗೆ ಭೂಮಿ ಸಿಗುವಂತೆ ಮಾಡಿದರು (ಪುಟ್ಟಣ್ಣ, ೧೯೯೪ : ೨೮೬).

ಇನಾಂ ಮತ್ತು ಜಹಗೀರ್ ರದ್ಧತಿ ಕಾಯಿದೆಯಿಂದಾಗಿ ಕಡಿದಾಳ್‌ರ ಮೇಲೆ ಆಪಾದನೆಗಳು ಬರ ತೊಡಗಿದವು. ಶೃಂಗೇರಿ ಮಠದ ಬ್ರಾಹ್ಮಣ ವರ್ಗದವರು ಕಡಿದಾಳ್‌ರನ್ನು ಉದ್ದೇಶಪೂರ್ವಕವಾಗಿ ಟೀಕಿಸುತ್ತಿದ್ದರು. ಕಾರಣ ಇನಾಂದಾರರಲ್ಲಿ ಬಹುಮಂದಿ ಬ್ರಾಹ್ಮಣರಾಗಿದ್ದರಿಂದಲೂ, ಶೃಂಗೇರಿ ಕೂಡ ಜಹಗೀರಿ ಒಳಗೊಂಡಿದ್ದರಿಂದ ಕಡಿದಾಳ್‌ರ ಮೇಲೆ ಅಪಪ್ರಚಾರ ಮಾಡಿರುವುದು ಕಂಡುಬರುತ್ತದೆ. ಶೃಂಗೇರಿ ಮಠದ ಭಕ್ತರು ಮೈಸೂರು ಸಂಸ್ಥಾನದ ಹಲವು ಕಡೆಗಳಲ್ಲಿದ್ದರಿಂದ ಹಾಗೂ ಮಠಗಳ ಜಮೀನು ರದ್ದಾಗಿದ್ದರಿಂದ ಕಡಿದಾಳ್‌ರ ಮೇಲೆ ಆಪಾದನೆಯನ್ನು ಹೊರಿಸಿದರು. ಬ್ರಾಹ್ಮಣ ಜಾತಿಯ

ವಿರೋಧಿಯೆಂದು ಕೂಡ ಕರೆದರು. ಹೆಚ್.ಸಿ.ದಾಸಪ್ಪನವರು ಶೃಂಗೇರಿ ಮಠದ ಪರವಾಗಿ ಇದ್ದುಕೊಂಡು ಕಡಿದಾಳ್‌ರಿಗೆ ಹೀಗೆ ಹೇಳಿದರು. ಮಠ, ದೇವಸ್ಥಾನ ಇವುಗಳಿಗೆ ನಮ್ಮ ಪೂರ್ವದವರು ಕೊಟ್ಟಿದ್ದ ಮಾನ್ಯವನ್ನು ಕಿತ್ತುಕೊಳ್ಳುವ ಪ್ರಯತ್ನ ಮಾಡಿದರೆ ದೈವಶಾಪಕ್ಕೆ ಗುರಿಯಾಗುತ್ತೇವೆ ಎಂದು ಹೇಳಿದರು. ಈ ಮಾತುಗಳಿಂದ ಕಡಿದಾಳ್‌ರು ಸ್ವಲ್ಪ ವಿಚಲಿತರಾಗದೆ, ಮಠ ಮತ್ತು ದೇವಸ್ಥಾನಗಳಿಗೆ ಮಾನ್ಯವಾಗಿ ಕೊಟ್ಟಿದ್ದ ಭೂಮಿಯನ್ನು ಬೆವರು ಸುರಿಸಿ ಬೇಸಾಯ ಮಾಡುವ ರೈತರಿಗೆ ಕೊಟ್ಟರೆ ದೇವರು ಆ ಕಾರ್ಯವನ್ನು ಮೆಚ್ಚುತ್ತಾನೆ ಎಂಬುದರ ಬಗ್ಗೆ ನಂಬಿಕೆಯನ್ನು ಇಟ್ಟಿದ್ದರು. ಕಡಿದಾಳ್‌ರು ವಾಸ್ತವವಾಗಿ ಬ್ರಾಹ್ಮಣ ವಿರೋಧಿಯಾಗಿರಲಿಲ್ಲ. ಕಡಿದಾಳ್‌ರು ಗಾಂಧಿತತ್ವದ ಹಿನ್ನೆಲೆಯಲ್ಲಿ ಸಾಮಾಜಿಕ ನ್ಯಾಯದ ಪರಿಕಲ್ಪನೆ ಇವರಲ್ಲಿ ಇದ್ದುದರಿಂದ ಆರ್ಥಿಕವಾಗಿ ಎಲ್ಲರಲ್ಲೂ ಸಮಾನತೆಯನ್ನು ತರಲು ಪ್ರಯತ್ನಿಸಿದ್ದರು (ಕಡಿದಾಳ್, ೧೯೯೦:೧೬೧-೧೬೨), (ರಾಮದಾಸ್, ೨೦೦೭:೬).

ಕಡಿದಾಳ್‌ರು ತಂದ ಭೂಸುಧಾರಣೆ ಕಾಯಿದೆಗಳಲ್ಲಿ ಇನಾಂ ಪದ್ಧತಿ ಕಾಯಿದೆ ಉತ್ತಮವಾದುದ್ದು. ದಿವಾನ್ ಪೂರ್ಣಯ್ಯನವರ ಕಾಲದಲ್ಲಿ ನಡೆದ ಇನಾಂ ಸರ್ವೆಯಿಂದ ಹದಿಮೂರು ರೀತಿಯ ಇನಾಂತಿಗಳು ಕಂಡುಬಂದಿದ್ದು, ಆಗ ಒಟ್ಟು ೫೭೮೮೮ ಇನಾಂತಿಗಳನ್ನು ಖಾಯಂಗೊಳಿಸಲಾಗಿತ್ತು. ಕಡಿದಾಳ್‌ರು ತಂದ *ದಿ ಮೈಸೂರ್ ಇನಾಂ ಅಬಾಲಿಷನ್ ಆ್ಯಕ್ಟ್ ೧೯೫೮ರ* ಪ್ರಕಾರ ಎಲ್ಲ ಇನಾಂತಿಗಳನ್ನು ಸರ್ಕಾರಕ್ಕೆ ಸೇರಿಸಿದರು. ಈ ಇನಾಂತಿಗಳು ಸರ್ಕಾರ ವಿಧಿಸುವ ಕಂದಾಯಕ್ಕೆ ಒಳಪಟ್ಟಿತು. ಈ ಕಾಯಿದೆಯನ್ನು ಗೊತ್ತುಪಡಿಸಿದ ದಿನಾಂಕದಿಂದ ಇನಾಂಗಳು ರದ್ದಾದವು (ಕ್ಷೀರಸಾಗರ, ೧೯೮೫: ೧೩೬). ಪ್ರತಿ ಇನಾಮಿಗೆ ಇರುವ ಹಕ್ಕುದಾರರು ಯಾರೆಂಬುದನ್ನು ಖಚಿತಪಡಿಸಿಕೊಳ್ಳುವುದೇ ಸಾಗುವಳಿದಾರರನ್ನು ಗುರುತಿಸುವುದು, ಇನಾಂ ಮೇಲಿನ ಹಕ್ಕುಗಳನ್ನು ಕಳೆದುಕೊಂಡರಿಗೆ ಪರಿಹಾರ ಧನದ ಮೊತ್ತದ ನಿರ್ಧಾರವಾಗುವಂತೆ ಸಮರ್ಪಕವಾಗಿ ಸೂಚಿಸಲಾಗಿತ್ತು. ಪ್ರತಿಯೊಂದು ಇನಾಂ ರದ್ದತಿ ಕಾಯಿದೆಯು ನಿರ್ದಿಷ್ಟವಾಗಿ ಒಂದು ಮಾದರಿಯ ಇನಾಂಗಳಿಗೆ ಅಥವಾ ಜಹಗೀರ್‌ಗಳಿಗೆ ಅನ್ವಯವಾಗುವಂತೆ ರೂಪಿಸಿದರು. ಇನಾಂ ರದ್ದತಿಗೊಳಿಸುವ ಕಾನೂನು ಪ್ರಕ್ರಿಯೆ ಆರಂಭವಾಯಿತಾದರೂ ಅಧಿಕಾರಶಾಹಿಯ ಅಡೆತಡೆಯಿಂದ ಅದು ನಿಧಾನಗೊಂಡಿತು. ಇದಕ್ಕೆ ಮುಖ್ಯ ಕಾರಣ ಈ ಕಾಯಿದೆಯಿಂದಾಗಿ ಬ್ರಾಹ್ಮಣ ವರ್ಗದವರ ಇನಾಂಗಳೇ ಕೈತಪ್ಪಿ ಹೋಗಿದ್ದು, ಈ ಕಾನೂನು ಜನಸಾಮಾನ್ಯರಿಗೆ ತಲುಪಿಸಬೇಕಾದಂಥ ಅಧಿಕಾರವರ್ಗದಲ್ಲಿದ್ದವರು ಹೆಚ್ಚಿನ ಮಂದಿ ಬ್ರಾಹ್ಮಣರೇ ಆಗಿದ್ದರು. ಇನಾಂ ಹಿಡುವಳಿಯಿಂದ ಲಾಭ ಪಡೆಯುತ್ತಿದ್ದ ಅಧಿಕಾರಶಾಹಿಯೇ ಈ ಪ್ರಕ್ರಿಯೆಯನ್ನು ಚುರುಕುಗೊಳಿಸಲು ಆಸಕ್ತಿ ತೋರಲಿಲ್ಲ. ಇದನ್ನು ಜಾರಿಗೆ ತರಲು ವಿಶೇಷವಾದ ಆಡಳಿತ ವ್ಯವಸ್ಥೆಯನ್ನು ಮಾಡಲಿಲ್ಲ. ಇದರಿಂದಾಗಿ ಈ ಕಾಯಿದೆ ಜಾರಿಗೆ ಬರುವಷ್ಟರಲ್ಲೇ ಇನಾಂದಾರರು ಗೇಣಿದಾರರನ್ನು ಒಕ್ಕಲೆಬ್ಬಿಸತೊಡಗಿದರು. ಇದರಿಂದ ಗೇಣಿದಾರರಿಗೆ ನ್ಯಾಯ ದೊರಕಿಸಲು ಸಾಧ್ಯವಾಗುತ್ತಿರಲಿಲ್ಲ. ಈ

ಕಾನೂನಿನನ್ವಯ ರೈತ ತನ್ನ ಹಕ್ಕು ಪಡೆಯಬೇಕಾದರೆ ನ್ಯಾಯಾಲಯಕ್ಕೆ ಹೋಗಬೇಕಾಗಿತ್ತು. ಕಡಿದಾಳ್‌ರು ತಂದ ಈ ಕಾಯಿದೆ ಸಮರ್ಪಕವಾಗಿತ್ತಾದರೂ ಅದನ್ನು ಜಾರಿಗೆ ತರುವಂಥ ಅಧಿಕಾರ ವರ್ಗ ವಿಳಂಬ ನೀತಿಯನ್ನು ಅನುಸರಿಸಿತು. ಪ್ರಜಾಪ್ರತಿನಿಧಿಗಳು ಸಮರ್ಪಕವಾಗಿರುವಂತೆ ಅಧಿಕಾರ ವರ್ಗವು ಅಭಿವೃದ್ಧಿಯ ಕಾರ್ಯವನ್ನು ನಿರಂತರವಾಗಿ ಮಾಡಿದ್ದರೆ ಮಾತ್ರ ಜನಸಾಮಾನ್ಯರಿಗೆ ಒಳ್ಳೆಯ ವ್ಯವಸ್ಥೆಯನ್ನು ಒದಗಿಸಬಹುದಿತ್ತು (ಕ್ಷೀರಸಾಗರ ೧೯೮೫:೧೩೫-೧೩೭), (ರಾಜನ್, ೧೯೮೭:೨೦೭-೨೦೮). ಈ ಕಾಯ್ದೆ ಜಾರಿಗೆ ತಂದಾಗ ಬಂದಂತಹ ಪ್ರತಿಕ್ರಿಗಳು ಈ ಕೆಳಗಿನಂತಿದೆ.

ಇನಾಂ ಕಾಯಿದೆ ಕಾರ್ಯರೂಪಕ್ಕೆ ಬರುವುದು ತಡವಾಗಿದ್ದರಿಂದ ರಾಜ್ಯಾದ್ಯಂತ ಇನಾಂದಾರರು ಗೇಣಿದಾರರನ್ನು ಒಕ್ಕಲೆಬ್ಬಿಸಲು ಪ್ರಾರಂಭಿಸಿದರು. ಆ ಸಂದರ್ಭದಲ್ಲಿ ಇನಾಂದಾರರು ಗೇಣಿದಾರರನ್ನು ಒಕ್ಕಲಿಬ್ಬಿಸಲು ಪ್ರಯತ್ನಪಟ್ಟಂಥ ನಿದರ್ಶನಗಳು ಕಂಡುಬರುತ್ತವೆ. ಶಿವಮೊಗ್ಗ ಜಿಲ್ಲೆಯದ್ಯಾಂತ ಗೇಣಿದಾರರ ಮೇಲೆ ಇನಾಂದಾರರು ದಬ್ಬಾಳಿಕೆ ನಡೆಸಿರುವುದು ಪತ್ರಿಕಾ ಪ್ರಕಟಣೆಯಲ್ಲೂ ಪ್ರಕಟವಾಗಿದೆ. ೧೯೫೬ ಜೂನ್ ೧೬ರ ಮಿಂಚು ಪತ್ರಿಕೆಯಲ್ಲಿ ಶಿವಮೊಗ್ಗ ಜಿಲ್ಲೆಯ ಕುಸ್ಕೂರು ಇನಾಂ ಗ್ರಾಮದಲ್ಲಿ ಇನಾಂದಾರರು ರೈತರಿಗೆ ಕೊಡುತ್ತಿದ್ದ ಹಿಂಸೆಯ ಬಗ್ಗೆ ವರದಿಯಾಗಿತ್ತು. ಇನಾಂ ಭೂಮಿಯನ್ನು ಶಾಸನ ಬರುವುದಕ್ಕಿಂತ ಮೊದಲೇ ಬೇರೆಯವರೆಗೆ ಮಾರಾಟ ಮಾಡಿ ಲಾಭ ಪಡೆಯಬೇಕೆಂದು ಪ್ರಯತ್ನಪಟ್ಟಿದ್ದರು. ಇದೇ ಪತ್ರಿಕೆಯಲ್ಲಿ ಶಿವಮೊಗ್ಗ ಜಿಲ್ಲೆಯ ಹೊನ್ನಾಳಿ ತಾಲ್ಲೂಕು ಕುಳಗಡ್ಡೆ ಇನಾಂ ಗ್ರಾಮದಲ್ಲಿ ನಡೆಯುತ್ತಿದ್ದ ದೌರ್ಜನ್ಯದ ಬಗ್ಗೆ ವರದಿಯಾಗಿತ್ತು. ೧೯೫೬ ನವೆಂಬರ್ ೨೦ರ ಜಾಗೃತಿ ಪತ್ರಿಕೆಯಲ್ಲಿ ಮತ್ತೂರು ಇನಾಂ ಗ್ರಾಮಕ್ಕೆ ಸೇರಿದ ಮಳಲಗೊಪ್ಪ, ಸೂಳೆಬಯಲು ಹಳ್ಳಿಗಳಲ್ಲಿ ಗೇಣಿರೈತರಿಗೆ ಭೂಮಿ ತಪ್ಪಿ ಹೋಗುವ ಪರಿಸ್ಥಿತಿ ಒದಗಿರುವುದರ ಬಗ್ಗೆ ವರದಿಯಾಗಿತ್ತು. ರಾಜ್ಯಾದ್ಯಂತ ಗೇಣಿದಾರರನ್ನು ಒಕ್ಕಲೆಬ್ಬಿಸುವಂಥ ಪರಿಸ್ಥಿತಿ ಕಂಡುಬಂದಿದ್ದು, ಇದಕ್ಕೆ ಅಧಿಕಾರಶಾಹಿ ವರ್ಗಗಳೇ ಕಾರಣರಾಗಿದ್ದರು. ಹೆಚ್ಚಿನ ಧಾರ್ಮಿಕ ಸಂಸ್ಥೆಯ ಆಸ್ತಿಪಾಸ್ತಿಗಳೆಲ್ಲವು ಈ ಶಾಸನದ ಹೊರಗೆ ಉಳಿದಿದ್ದವು (ಕೀರ್ತಿನಾಥ, ೧೯೯೫:೪೫).

ಕಡಿದಾಳ್‌ರು ತಂದಂಥ ಈ ಕಾಯಿದೆ ಗುರಿಮುಟ್ಟದೇ ಇರಬಹುದು ಆದರೆ ಇದಕ್ಕೆ ತಳಪಾಯ ಹಾಕಿದ್ದು ಮುಂದೊಂದು ದಿನ ಸಂಪೂರ್ಣವಾಗಿ ರದ್ದಾಗಿರುವುದು ಕಂಡುಬಂದಿದೆ. ಈ ಕ್ರಮ ಕಡಿದಾಳ್‌ರು ಕೈಗೊಂಡಿರುವುದು ಭೂಸುಧಾರಣೆಗಳಲ್ಲೇ ಮಹತ್ವದೆನಿಸುತ್ತದೆ. ೧೮೮೧ರಿಂದಲೇ ಇನಾಂ ಪದ್ಧತಿಯನ್ನು ರದ್ದು ಮಾಡಲು ಪ್ರಯತ್ನಿಸಿದರೂ ಆಗಿರಲಿಲ್ಲ. ಆದರೆ ಕಡಿದಾಳ್‌ರು ಪಟ್ಟು ಬಿಡದೆ, ಎಲ್ಲ ಟೀಕೆಗಳನ್ನು ಎದುರಿಸುತ್ತ ಜಾರಿಗೆ ತಂದಿದ್ದರು. ಆದರೆ ಈ ಕಾಯ್ದೆ ಜನರಿಗೆ ತಲುಪಿಸಬೇಕಾದಂತಹ ಅಧಿಕಾರಿಗಳೇ ಸರಿಯಾದ ರೀತಿಯಲ್ಲಿ ಕಾರ್ಯ ನಿರ್ವಹಿಸದೇ ಇರುವುದು ಕಾರಣವಾಗಿದೆ. ಕಡಿದಾಳ್‌ರು ಈ ಶಾಸನದ ರದ್ಧತಿಯನ್ನು ಹಂತ ಹಂತವಾಗಿ ಕೈಗೊಂಡಿದ್ದು ಕ್ರಾಂತಿಕಾರಕವಾದದ್ದು.

## ೪.೪. ಮೈಸೂರ್ ರೆವಿನ್ಯೂ ಬೋರ್ಡಿನ ರಚನೆ

ಪ್ರಾರಂಭದಲ್ಲಿ ಮೈಸೂರು ರಾಜ್ಯದಲ್ಲಿ ರೆವಿನ್ಯೂ ಅಪೀಲುಗಳ ಮತ್ತು ರಿವಿಜನ್ ಪ್ರಕರಣಗಳ ತೀರ್ಮಾನಕ್ಕಾಗಿ ರೆವಿನ್ಯೂ ಬೋರ್ಡ್ ಅಥವಾ ಮೇಲ್ಮನವಿ ಮಂಡಳಿ ಇರಲಿಲ್ಲ. ಕಂದಾಯ ಮಂತ್ರಿಯಾಗಿದ್ದವರು ರೆವಿನ್ಯೂ ಅಪೀಲುಗಳನ್ನೂ ರಿವಿಜನ್‌ನ ಅರ್ಜಿಗಳನ್ನು ರೆವಿನ್ಯೂ ಕೋರ್ಟಿನ ನ್ಯಾಯಾಧೀಶರಲ್ಲಿ ತೀರ್ಪು ನೀಡಬೇಕಾಗಿತ್ತು. ಕಂದಾಯ ಮಂತ್ರಿಗಳ ತೀರ್ಪೆ ಅಂತಿಮ ತೀರ್ಪಾದುದರಿಂದ ಸರಿಯಾದ ನ್ಯಾಯ ದೊರೆಯುವುದು ಕಷ್ಟವಾಗಿತ್ತು. ಕಾನೂನಿನ ಬಗ್ಗೆ ಗೊತ್ತಿಲ್ಲದವರು ರೆವಿನ್ಯೂ ಮಂತ್ರಿಗಳಾದರೆ ಹಾಗೂ ಅವರ ತೀರ್ಪೆ ಅಂತಿಮವಾದರೆ ಜನರಿಗೆ ನ್ಯಾಯ ದೊರೆಯುವುದು ಕಷ್ಟವಾಗುತ್ತದೆ ಎಂದು ತಿಳಿದು ರೆವಿನ್ಯೂ ಬೋರ್ಡ್‌ಬಡಜನರಿಗೆ ನ್ಯಾಯ ಒದಗಿಸುವುದಕ್ಕಾಗಿ ಕಡಿದಾಳ್‌ರು ಒಬ್ಬ ವಕೀಲರಾಗಿ, ಒಬ್ಬ ಕಂದಾಯಮಂತ್ರಿಯಾಗಿ ಯೋಚಿಸಿರುವುದು ಸೂಕ್ತವಾಗಿದೆ ಎಂಬ ಪ್ರತ್ಯೇಕ ಇಲಾಖೆಯನ್ನು ರಚಿಸಿರುವುದು ಸಹಕಾರಿಯಾಗಿದೆ (ಕವಂಟೆ, ಪೂಜಾರ್, ೧೯೯೦ ೧೦೭).

ಕಡಿದಾಳ್‌ರು ಕಂದಾಯಮಂತ್ರಿಯಾಗಿ ಹಲವು ಕಂದಾಯ ಪ್ರಕರಣಗಳನ್ನು ನಡೆಸಿದ್ದು ಕಂಡುಬಂದಿದೆ. ಈ ಸಂದರ್ಭದಲ್ಲಿ ಕಡಿದಾಳ್‌ರು ಉಭಯಪಕ್ಷಗಳ ಪರವಾಗಿ ಹಾಜರಾಗುತ್ತಿದ್ದು ವಕೀಲರುಗಳ ವಾದ ವಿವಾದಗಳನ್ನು ಕೇಳಿ ಕಾನೂನು ಪ್ರಕಾರ ತೀರ್ಪನ್ನು ಕೊಡುತ್ತಿದ್ದರು. ಇದಕ್ಕೆ ಸಂಬಂಧಪಟ್ಟಂತೆ ಕಡಿದಾಳ್‌ರು ಮೈಸೂರು ರಾಜ್ಯದಲ್ಲಿ ೧೯೫೨ನೆಯ ಏಪ್ರಿಲ್‌ನಿಂದ ೧೯೫೬ನೆಯ ಆಗಸ್ಟ್ ತಿಂಗಳವರೆಗೆ ರೆವಿನ್ಯೂ ನ್ಯಾಯಾಧೀಶರಾಗಿ ೧೫೦೦ ಆಪೀಲು ಮತ್ತು ಪ್ರಕರಣಗಳಲ್ಲಿ ಅಂತಿಮ ತೀರ್ಪು ನೀಡಿದ್ದು ಕಂಡುಬಂದಿದೆ. ನ್ಯಾಯ ನಿರ್ಣಯ ನೀಡುವುದರಲ್ಲಿ ಕಡಿದಾಳ್‌ರಿಗೆ ರಾಜಕೀಯ ಪ್ರಭಾವ ಕೂಡ ಉಂಟಾಗುತ್ತಿತ್ತು. ಆದರೂ ಯಾರಿಗೂ ಮಣಿಯದೇ ಸತ್ಯಯುತವಾದ ತೀರ್ಪನ್ನು ನೀಡುತ್ತಿದ್ದರು. ಕಡಿದಾಳ್‌ರು ಕೋರ್ಟಿನಲ್ಲಿ ರೆವಿನ್ಯೂ ಪ್ರಕರಣಗಳನ್ನು ವಾದಿಸುವ ಸಂದರ್ಭದಲ್ಲಿ ಐವತ್ತರಿಂದ ಎಪ್ಪತ್ತು ಜನ ವಕೀಲರಿರುತ್ತಿದ್ದರು. ಇವರಲ್ಲಿ ಕೆಲವರು ಗಣ್ಯ ವಕೀಲರು ಭಾಗವಹಿಸುತ್ತಿದ್ದರು. ಯತಿರಾಜುಲು ನಾಯ್ಡುರವರು ಕರ್ನಾಟಕ ಉಚ್ಚನ್ಯಾಯಾಲಯದ ನ್ಯಾಯಮೂರ್ತಿಗಳಾಗಿದ್ದ ಗೋಪಿವಲ್ಲಭ ಅಯ್ಯಂಗಾರ್ ಅವರೂ, ಎಂ.ಕೆ. ಶ್ರೀನಿವಾಸ ಅಯ್ಯಂಗಾರ್ ಅವರೂ, ಭಾರತದ ಶ್ರೇಷ್ಠ ನ್ಯಾಯಮೂರ್ತಿಯಾದ ಇ.ಎಸ್.ವೆಂಕಟರಾಮಯ್ಯನವರೂ ಪ್ರಮುಖರಾಗಿದ್ದರು. ಈ ಸಂದರ್ಭದಲ್ಲಿ ಸರ್ಕಾರಿ ಜಮೀನುಗಳ ಹಂಚಿಕೆಗೆ ಸಂಬಂಧಪಟ್ಟ ಅಪೀಲು ಅಥವಾ ರಿವಿಜನ್ ಪ್ರಕರಣಗಳಲ್ಲಿ ಸಾಧ್ಯವಿರುವ ಮಟ್ಟಿಗೆ ರಾಜೀಯ ತೀರ್ಪನ್ನು ಕೊಡಲು ಪ್ರಯತ್ನಿಸುತ್ತಿದ್ದರು. ಆದರೂ ಕೆಲವೊಮ್ಮೆ ಶಾಸನ ಸಭೆಯ ಸದಸ್ಯರು ಮತ್ತು ಪಾರ್ಲಿಮೆಂಟಿನ ಸದಸ್ಯರು ಯಾವುದಾದರೊಂದು ಪಕ್ಷದ ಪರವಾಗಿ ತೀರ್ಪನ್ನು ನೀಡಬೇಕೆಂದು ಅವರ ಮೇಲೆ ಒತ್ತಡ ಹೇರುತ್ತಿದ್ದರು. ಈ ಕಾರಣದಿಂದಾಗಿ ಕಡಿದಾಳ್‌ರು ಮುಂದೆ ರೆವಿನ್ಯೂ ಮಂತ್ರಿಯಾಗುವವರು ಯಾವುದಾದರೂ ಒಂದು ಒತ್ತಡಕ್ಕೆ ಮಣಿದು ಅಥವಾ ಹಣದ ಆಮಿಷಕ್ಕೆ ಒಳಗಾಗುತ್ತಾರೆಂದು ಹಾಗೂ

ಜನರಿಗೆ ಸರಿಯಾದ ರೀತಿಯ ನ್ಯಾಯ ದೊರಕುವುದಿಲ್ಲವೆಂದು ರೆವಿನ್ಯೂ ಬೋರ್ಡ್ ರಚಿಸಲು ಮುಂದಾದರು (ಕಡಿದಾಳ್, ೧೯೯೦:೧೬೭-೧೬೮).

ಮೈಸೂರು ಸಂಸ್ಥಾನದ ವಕೀಲರ ಸಮ್ಮೇಳನ ತುಮಕೂರಿನಲ್ಲಿ ಜರುಗಿತು. ಆ ಸಮ್ಮೇಳನದ ಅಧ್ಯಕ್ಷತೆಯನ್ನು ಕಡಿದಾಳ್‌ರೆ ವಹಿಸಿಕೊಂಡಿದ್ದರು. ಈ ಸಂದರ್ಭದಲ್ಲಿ ನ್ಯಾಯ ತೀರ್ಪುಗಳ ಕುರಿತಂತೆ ಚರ್ಚೆ ನಡೆಯುವಾಗ ಕಂದಾಯ ಇಲಾಖೆಗೆ ಸಂಬಂಧಿಸಿದಂತೆ ಪ್ರತ್ಯೇಕವಾದ ರೆವಿನ್ಯೂ ಬೋರ್ಡ್ ರಚಿಸಬೇಕೆಂದು ನಿರ್ಧರಿಸಲಾಗಿತ್ತು. ಈ ವಿಷಯವನ್ನು ಕುರಿತಂತೆ ಮುಖ್ಯಮಂತ್ರಿಯಾದ ಕೆಂಗಲ್ ಹನುಮಂತಯ್ಯನವರ ಬಳಿ ಚರ್ಚಿಸಿ ರೆವಿನ್ಯೂ ಬೋರ್ಡ್ ರಚಿಸಲು ಮುಂದಾದರು. ಕೆಂಗಲ್ ಹನುಮಂತಯ್ಯನವರು ಒಪ್ಪಿಗೆ ನೀಡಿದ್ದರು. ಇದಕ್ಕೆ ಸಂಬಂಧಿಸಿದಂತೆ ಒಂದು ವಿಧೇಯಕವನ್ನು ಸಿದ್ಧಪಡಿಸಿ ವಿಧಾನಸಭೆಯಲ್ಲಿ ಚರ್ಚಿಸಿದ್ದು ಗಮನಾರ್ಹ ಅಂಶವಾಗಿದೆ. ಇದು ಕೇಂದ್ರದ ಒಪ್ಪಿಗೆಯನ್ನು ೮-೬-೧೯೫೫ರಂದು ಪಡೆಯಿತು. ಆದರೆ ಇದು ಕಡಿದಾಳ್‌ರ ಅಧಿಕಾರಾವಧಿಯಲ್ಲಿ ಈ ವಿಧೇಯಕ ಜಾರಿಗೆ ಬರಲಿಲ್ಲ. ಅನಂತರ ಜಾರಿಗೆ ಬಂತು. ರೆವಿನ್ಯೂ ಬೋರ್ಡನ್ನು ಪ್ರಸ್ತುತ ಕರ್ನಾಟಕ ಅಪಲೇಟ್ ಟ್ರಿಬ್ಯುನಲ್ ಎಂದು ಪರಿವರ್ತನೆ ಹೊಂದಿದೆ. ನಂತರದ ದಿನಗಳಲ್ಲಿ ಕಡಿದಾಳ್‌ರು ರೆವಿನ್ಯೂ ಬೋರ್ಡ್‌ನ ಮುಂದೆ ರೈತರಿಗೆ ಸಂಬಂಧಿಸಿದಂತೆ ಕೆಲವು ಪ್ರಕರಣಗಳಲ್ಲಿ ಹಾಜರಾಗಿದ್ದರು. ಕರ್ನಾಟಕ ಆ್ಯಕ್ಟ್ ೨೪ ಸನ್ ೧೯೫೭ ಕಾಯಿದೆಯ ಮೇರೆಗೆ ರಚಿಸಲ್ಪಟ್ಟ ರೆವಿನ್ಯೂ ಬೋರ್ಡ್ ಸರಕಾರದಿಂದ ನೇಮಿಸಲ್ಪಟ್ಟ ಆರು ಜನ ಸದಸ್ಯರನ್ನು ಒಳಗೊಂಡಿತ್ತು. ಆರು ಜನರಲ್ಲಿ ಒಬ್ಬ ಅಧ್ಯಕ್ಷರು, ಉಳಿದ ಐದು ಜನ ಸದಸ್ಯರಲ್ಲಿ ಮೂರು ಜನ ಜಿಲ್ಲಾ ನ್ಯಾಯಧೀಶ ಸ್ಥಾನದಲ್ಲಿದ್ದರು. ಈ ರೀತಿ ಕಡಿದಾಳ್‌ರು ರೆವಿನ್ಯೂ ಬೋರ್ಡನ್ನು ರಚನೆ ಮಾಡಿ ಜನಸಾಮಾನ್ಯರಿಗೆ ನ್ಯಾಯ ದೊರಕುವಂತೆ ಮಾಡಿದರು (ಪುಣೇಕರ, ೨೦೦೭:೩೩).

ಕಡಿದಾಳ್‌ರು ಸ್ವತಃ ವಕೀಲರಾಗಿ ಅರ್ಹರಿಗೆ ನ್ಯಾಯವನ್ನು ದೊರಕಿಸಿಕೊಡಲು ಯತ್ನಿಸಿದ್ದು ಆ ಸಂದರ್ಭದಲ್ಲಿ ಅವರ ವಕೀಲ ಜ್ಞಾನ, ಅನುಭವಗಳು ತುಂಬ ನೆರವಾದವು. ನ್ಯಾಯ ವಿತರಣೆಯು ನಿಷ್ಪಕ್ಷವಾಗಿ ನಡೆಯಬೇಕಾದರೆ ಹಾಗೂ ರೈತರ ಕಂದಾಯ ಇತ್ಯಾದಿಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕವಾದ ರೆವಿನ್ಯೂ ಬೋರ್ಡ್ ರಚಿಸಿರುವುದು ಮಹತ್ವದಾಗಿದೆ. ಇದು ಇಡೀ ರಾಜ್ಯದ ರೈತರಿಗೆ, ಗೇಣಿದಾರರಿಗೆ ನ್ಯಾಯ ಒದಗಿಸುವುವಲ್ಲಿ ಸಹಕಾರಿಯಾಗಿತ್ತು.

### ೪.೫. ೧೯೬೧ರ ಕರ್ನಾಟಕ ಭೂಸುಧಾರಣಾ ಕಾಯಿದೆ ಮತ್ತು ಕಡಿದಾಳ್ ಮಂಜಪ್ಪ

೧೯೫೬ರಲ್ಲಿ ರಾಜ್ಯಗಳನ್ನು ಪುನರ್ವಿಂಗಡಣೆ ಮಾಡಿದರ ಪರಿಣಾಮವಾಗಿ ವಿಶಾಲ ಕರ್ನಾಟಕ ಸ್ಥಾಪನೆಯಾಯಿತು. ಪುನರ್ವಿಂಗಡಣೆ ಆಗುವುದಕ್ಕಿಂತಲೂ ಮೊದಲು ರಾಜ್ಯದ ಭೂಸ್ವಾಮ್ಯ ಮತ್ತು

ಗೇಣಿಗೆ ಸಂಬಂಧಪಟ್ಟಂತೆ ರಾಜ್ಯದ ಐದು ಪ್ರದೇಶಗಳಾದ ಮೈಸೂರು, ಕೊಡಗು, ಮುಂಬಯಿ, ಮದರಾಸು ಮತ್ತು ಹೈದರಾಬಾದ್ ಪ್ರಾಂತ್ಯಗಳಲ್ಲಿ ಐದು ವಿಧವಾದ ಕಾಯ್ದೆಗಳಿದ್ದವು. ಕರ್ನಾಟಕ ಏಕೀಕರಣಗೊಂಡ ಮೇಲೆ ಆಡಳಿತದ ಅನುಕೂಲಕ್ಕಾಗಿ ಇಲ್ಲಿನ ಪ್ರದೇಶಗಳನ್ನು ನಾಲ್ಕು ಪ್ರಾದೇಶಿಕ ಭಾಗಗಳಾಗಿ ವಿಭಾಗಿಸಲಾಗಿತ್ತು. ಅವುಗಳ ಆಡಳಿತ ಕೇಂದ್ರ ಕಛೇರಿಗಳು ಬೆಂಗಳೂರು, ಮೈಸೂರು, ಬೆಳಗಾಂ, ಗುಲ್ಬರ್ಗಾದಲ್ಲಿರುವಂತೆ ಮಾಡಲಾಯಿತು. ಈ ಎಲ್ಲ ಪ್ರದೇಶಗಳ ಭೂಕಾಯ್ದೆಗೆ ಹಾಗೂ ಹಳೇ ಮೈಸೂರು ಸಂಸ್ಥಾನದ ಭೂಕಾಯ್ದೆಗಳ ನಡುವೆ ವ್ಯತ್ಯಾಸವಿತ್ತು. ಆದ್ದರಿಂದ ರಾಜ್ಯದ ವಿವಿಧ ಕಡೆಯಲ್ಲಿ ಜಾರಿಯಲ್ಲಿದ್ದ ಕಾಯಿದೆ ನಿಬಂಧನೆಯಗಳನ್ನೆಲ್ಲ ಒಂದುಗೂಡಿಸಿ ಏಕರೂಪ ಸುಧಾರಣ ಶಾಸನವನ್ನು ರೂಪಿಸುವುದು ಹಾಗೂ ರಕ್ಷಿಸಿ ಹತೋಟಿಗೆ ತರುವ ಉದ್ದೇಶವಿತ್ತು (ರಾಜನ್, ೧೯೮೭: ೧೨).

ಈ ಉದ್ದೇಶವನ್ನು ಕಾರ್ಯರೂಪಕ್ಕೆ ತರಲು ಪ್ರಯತ್ನಪಟ್ಟವರು ಏಕೀಕರಣ ಕರ್ನಾಟಕದ ಮೊದಲ ಮುಖ್ಯಮಂತ್ರಿಯಾದ ಎಸ್.ನಿಜಲಿಂಗಪ್ಪನವರು ಆಗಿದ್ದರು. ೧೦.೫.೧೯೫೭ರಲ್ಲಿ ಬಿ.ಡಿ. ಜತ್ತಿಯವರ ನೇತೃತ್ವದಲ್ಲಿ ಭೂಸುಧಾರಣಾ ಕಮಿಟಿಯನ್ನು ರಚಿಸುವಂತೆ ನಿಜಲಿಂಗಪ್ಪನವರು ಮನವಿ ಮಾಡಿದ್ದ ಕಾರಣದಿಂದ ಮೈಸೂರು ಗೇಣಿ ಮತ್ತು ಕೃಷಿ ಭೂಮಿ ಕಾಯಿದೆ ಎಂಬ ಹೆಸರಿನಲ್ಲಿ ಸಮಿತಿಯನ್ನು ರಚಿಸಲಾಯಿತು. ಈ ಸಮಿತಿಯಲ್ಲಿ ಬಿ.ಡಿ.ಜತ್ತಿಯವರು ಅಧ್ಯಕ್ಷರಾಗಿದ್ದು, ಎಂ.ಆರ್. ಪಾಟೀಲ್, ಬಿ.ವಿ.ದೇಸಾಯಿ, ಹುಚ್ಚಮಾಸ್ತಿಗೌಡ, ಮಲ್ಲಿಕಾರ್ಜುನಪ್ಪಗೌಡ, ಬಿ.ಬಸವಲಿಂಗಪ್ಪ, ಸಿ.ವಿ. ಮುದ್ದಣ್ಣ, ಕರ್ಕೇರಾ ಎ.ಎಸ್.ಹಿರೇಮಠ್. ಎಂ.ರಾಮಪ್ಪ ಇವರು ಸದಸ್ಯರಾಗಿದ್ದರು. ಕೆ.ಬಾಲಸುಬ್ರಮಣ್ಯಂ ಅವರು ಈ ಸಮಿತಿಯ ಕಾರ್ಯದರ್ಶಿಯಾಗಿದ್ದರು. ಈ ಸಮಿತಿಯು ರಾಜ್ಯದ ವಿವಿಧ ಕಡೆಯಲ್ಲಿ ಸಂಚರಿಸಿ ರಾಷ್ಟ್ರದ ಇತರ ರಾಜ್ಯಗಳಲ್ಲಿರತಕ್ಕ ಕಾನೂನುಗಳನ್ನು ಅಧ್ಯಯನ ಮಾಡಿ ಜನಾಭಿಪ್ರಾಯವನ್ನು ಸಂಗ್ರಹಿಸಿ ಭೂಸುಧಾರಣೆಯ ಕಾನೂನಿನ ಸ್ವರೂಪ ಹೇಗಿರಬೇಕೆಂಬುದನ್ನು ನಿರ್ಧರಿಸಿತು. ಸಮಿತಿಯು ಕಂಡುಕೊಂಡ ಪ್ರಮುಖ ಅಂಶಗಳನ್ನು ೧೦-೯-೧೯೫೭ರಂದು ಒಪ್ಪಿಕೊಂಡು ವರದಿಯನ್ನು ಮಂತ್ರಿಮಂಡಲಕ್ಕೆ ಸಲ್ಲಿಸಿತು. ಇದರಲ್ಲಿ ಒಳಗೊಂಡಿರುವ ಪ್ರಮುಖ ಅಂಶಗಳು (ಕಡಿದಾಳ್, ೧೯೯೦:೨೩೨).

೧. ಜಮೀನ್ದಾರಿ ಹಾಗೂ ಗೇಣಿ ಪದ್ಧತಿಯನ್ನು ನಿಷೇಧಿಸುವುದು.

೨. ಗುತ್ತಿಗೆಯನ್ನು ನಿಷೇಧಿಸುವುದು.

೩. ಸ್ವತಃ ಬೇಸಾಯಗಾರನಿಗೆ ಭೂಮಿ ನೀಡುವುದು.

೪. ಜಮೀನ್ದಾರರು ಸ್ವತಃ ಸಾಗುವಳಿ ಮಾಡಬಹುದಾದಷ್ಟು ಭೂಮಿಯನ್ನು ಮಾತ್ರ ವಾಪಸ್ಸು ಪಡೆಯುವುದು.

ಜತ್ತಿ ಸಮಿತಿಯು ವರದಿಯನ್ನು ಒಪ್ಪಿಸಿ ಜಾರಿಗೆ ತರುವ ಕೆಲವೇ ತಿಂಗಳಲ್ಲಿ ಮುಖ್ಯಮಂತ್ರಿ ನಿಜಲಿಂಗಪ್ಪನವರ ಮಂತ್ರಿಮಂಡಲ ಅಧಿಕಾರವನ್ನು ಕಳೆದುಕೊಂಡಿತು. ನಂತರ ಶ್ರೀ ಬಿ.ಡಿ.ಜತ್ತಿಯವರ ಮಂತ್ರಿಮಂಡಲ ಅಧಿಕಾರಕ್ಕೆ ಬಂದಾಗ ಕಡಿದಾಳ್ ಅವರು ಕಂದಾಯ ಮಂತ್ರಿಯಾಗಿದ್ದರು. ಈ ಸಂದರ್ಭದಲ್ಲಿ ಕಡಿದಾಳ್‌ರ ಗುರಿಯಾಗಿದ್ದ ಭೂಸುಧಾರಣೆಯ ಕಾಯಿದೆ ತರಲು ಮುಂದಾದರು. ಬಿ.ಡಿ.ಜತ್ತಿಯವರ ನೇತೃತ್ವದ ಸಮಿತಿಯ ಶಿಫಾರಸ್ಸಿಗನುಗುಣವಾಗಿ ವಿಧೇಯಕವನ್ನು ರಚಿಸಬೇಕೆಂದು ಸಲಹೆ ಮಾಡಿದರು. ಕಡಿದಾಳ್‌ರು ಕೂಡ ಇದೇ ಉದ್ದೇಶವನ್ನು ಹೊಂದಿದ್ದು ರಾಜ್ಯದ ಪುನಾರಚನೆಯೊಂದಿಗೆ ರಾಜ್ಯದಲ್ಲೆಲ್ಲ ಅಸ್ತಿತ್ವದಲ್ಲಿರುವ ಕೃಷಿಯ ಎಲ್ಲ ಕಾನೂನು ಹಾಗೂ ಪದ್ಧತಿಗಳಿಗೆ ಸರಿಯಾದ ಹೊಸರೂಪ ಕೊಡುವ ಉದ್ದೇಶದೊಂದಿಗೆ ಕಾರ್ಯ ನಿರ್ವಹಿಸಿದ್ದರು. ಕೇಂದ್ರ ಸರ್ಕಾರದ ಮಾರ್ಗದರ್ಶಿ ಸೂತ್ರಗಳೊಂದಿಗೆ ಯೋಜನಾ ಆಯೋಗ ಹಾಗೂ ಕಾಂಗ್ರೆಸ್ ಪಕ್ಷದ ನಿರ್ಣಯಗಳ ಅಂಶವನ್ನು ಗಮನದಲ್ಲಿಟ್ಟುಕೊಂಡು ೧೯೬೧ರ ಭೂಸುಧಾರಣೆಯ ಕಾಯ್ದೆಯನ್ನು ತರಲು ಪ್ರಯತ್ನಿಸಿದರು (ಕ್ಷೀರಸಾಗರ, ೧೯೮೫:೭೮).

೧೦-೯-೧೯೫೭ರಲ್ಲಿ ಬಿ.ಡಿ.ಜತ್ತಿಯವರ ಸಮಿತಿಯ ಭೂಸುಧಾರಣಾ ವಿಧೇಯಕ ಪುನರ್ ರಚಿಸುವ ಕಾರ್ಯ ಅಷ್ಟು ಸುಲಭವಾಗಿರಲಿಲ್ಲ. ಮಂತ್ರಿ ಮಂಡಲದ ಸಚಿವರಲ್ಲಿ ಕೆಲವರು ಬಿ.ಡಿ.ಜತ್ತಿಯ ವರದಿಗೆ ಪ್ರತಿಕೂಲವಾಗಿದ್ದರು. ಅಂದು ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಹೆಚ್.ಕೆ.ವೀರಣ್ಣಗೌಡರು ಭೂಸುಧಾರಣಾ ವಿಧೇಯಕವನ್ನು ಮಂಡಿಸುವ ಮುನ್ನ ಪ್ರದೇಶ ಕಾಂಗ್ರೆಸ್ ಸಮಿತಿಯಲ್ಲಿ ಚರ್ಚೆಯಾಗಬೇಕೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದರು. ಇಂತಹ ಸಂದರ್ಭದಲ್ಲಿ ಕಡಿದಾಳ್‌ರು ಎಲ್ಲರಿಗೂ ಒಪ್ಪಿಗೆಯಾಗುವ ರೀತಿಯಲ್ಲಿ ಭೂಸುಧಾರಣೆಯ ಕಾಯ್ದೆಯನ್ನು ರೂಪಿಸುವುದು ಅವರ ಜವಾಬ್ದಾರಿಯಾಗಿತ್ತು. ಹೆಚ್.ಕೆ.ವೀರಣ್ಣಗೌಡರ ಭಿನ್ನಾಭಿಪ್ರಾಯಕ್ಕೆ ಪರಿಹಾರವೆಂಬಂತೆ ಕಾಂಗ್ರೆಸ್ ವರಿಷ್ಠ ಮಂಡಳಿಯ ಅಭಿಪ್ರಾಯವನ್ನು ಪಡೆಯುವುದು ಸೂಕ್ತವೆಂದು ಯೋಚಿಸಿ ಜತ್ತಿಯವರೊಂದಿಗೆ ತೀರ್ಮಾನಿಸಿದರು. ಈ ಸಮಸ್ಯೆಯನ್ನು ಪರಿಹರಿಸಲು ೧೯೫೮ನೇ ಅಕ್ಟೋಬರ್ ತಿಂಗಳಿನಲ್ಲಿ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಅಧಿವೇಶನವು ಆಂಧ್ರ ಪ್ರದೇಶದ ಕರ್ನೂಲ್‌ನಲ್ಲಿ ಸಮಾವೇಶಗೊಂಡಿತ್ತು. ಆ ಅಧಿವೇಶಕ್ಕೆ ಕಾಂಗ್ರೆಸ್ ವರಿಷ್ಠ ಮಂಡಳಿಯ ಪ್ರಮುಖರು ಬರಲಿದ್ದುದರಿಂದ ಕಡಿದಾಳ್‌ರು ಬಿ.ಡಿ.ಜತ್ತಿ ಮತ್ತು ವೀರಣಗೌಡರನ್ನು ಮನವೊಲಿಸಿ ಕರ್ನೂಲಿಗೆ ಕರೆದೊಯ್ದರು. ಅಲ್ಲಿ ಪ್ರಧಾನಿ ಜವಹರಲಾಲ್ ನೆಹರೂ ಅವರನ್ನು ಭೇಟಿಯಾಗುವುದರೊಂದಿಗೆ, ವರಿಷ್ಠ ಮಂಡಳಿಯ ಪ್ರಮುಖರನ್ನು ಭೇಟಿ ಮಾಡಿ ಭೂಸುಧಾರಣಾ ವಿಧೇಯಕವನ್ನು ರಚಿಸುವ ಬಗ್ಗೆ ಅಭಿಪ್ರಾಯವನ್ನು ವ್ಯಕ್ತಪಡಿಸಿ ವಿವಾದಕ್ಕೆ ಆಸ್ಪದ ಮಾಡಿದ ವೀರಣ್ಣಗೌಡರ ಮುಂದೆಯೇ ಒಪ್ಪಿಗೆಯನ್ನು ಸೂಚಿಸಿದರು. ಕಡಿದಾಳ್‌ರು ಮುಂದೆ ಸುಭದ್ರವಾದ ಒಂದು ಭೂಸುಧಾರಣಾ ವಿಧೇಯಕವನ್ನು ರಚಿಸಿದರು (ಕಡಿದಾಳ್, ೧೯೯೦:೨೩೩-೨೩೪).

ಜತ್ತಿ ಸಮಿತಿಗೆ ಅನುಗುಣವಾಗಿ ೨೯-೧೧-೧೯೫೮ರಂದು ವಿಧಾನಸಭೆಯಲ್ಲಿ ಭೂಸುಧಾರಣೆಯ ವಿಧೇಯಕವನ್ನು ಮಂಡಿಸಿದರು. ಇದಕ್ಕೆ ಸಂಬಂಧಪಟ್ಟಂತೆ ದಕ್ಷಿಣ ಕನ್ನಡ ಜಿಲ್ಲೆಯಾದ್ಯಂತ ವಿರೋಧವಿತ್ತು. ವಿರೋಧಕ್ಕೆ ಕಾರಣವನ್ನು ತಿಳಿಯಲು ಕಡಿದಾಳ್‌ರು ದಕ್ಷಿಣ ಕನ್ನಡ ಜಿಲ್ಲೆಯಾದ್ಯಂತ ಪ್ರವಾಸ ಕೈಗೊಂಡು ಕೃಷಿಗೆ ಸಂಬಂಧಿಸಿದ ಸಮಸ್ಯೆಯನ್ನು ತಿಳಿದಿದ್ದು ಮಹತ್ವವೆನಿಸುತ್ತದೆ. ಇದರ ಆಧಾರದ ಮೇಲೆ ೩೦-೭-೧೯೫೯ರಂದು ಭೂಸುಧಾರಣಾ ವಿಧೇಯಕವನ್ನು ಚರ್ಚೆಗೆ ತೆಗೆದುಕೊಂಡು ಸುಮಾರು ಹನ್ನೊಂದು ದಿನಗಳ ಕಾಲ ವಿಧಾನಸಭೆಯಲ್ಲಿ ಚರ್ಚೆ ನಡೆಸಿದರು. ಸುಮಾರು ೫ ದಿನಗಳ ಕಾಲ ವಿಧಾನ ಪರಿಷತ್ತಿನಲ್ಲಿ ಚರ್ಚೆ ನಡೆಸಿದರು. ಈ ಎರಡು ಸಭೆಗಳಿಂದ ಚುನಾಯಿತರಾದ ನಾಲ್ವತ್ತನಾಲ್ಕು ಸದಸ್ಯರಿಂದ ಕೂಡಿದ್ದ ಒಂದು ಜಂಟಿ ಪರಿಶೀಲನಾ ಸಮಿತಿಗೆ ಒಪ್ಪಿಸಲಾಗಿತ್ತು. ಈ ಸಮಿತಿಗೆ ಕಡಿದಾಳ್‌ರು ಅಧ್ಯಕ್ಷರಾಗಿದ್ದರು. ಕೆಂಗಲ್ ಹನುಮಂತಯ್ಯ, ಹೆಚ್.ಎಂ.ಚನ್ನಬಸಪ್ಪ, ಎಂ.ಪಿ.ಪಾಟೀಲ್, ಕೊಲ್ಲೂರು ಮಲ್ಲಪ್ಪ, ವೀರೇಂದ್ರ ಪಾಟೀಲ್, ಬಿ.ಎನ್, ಬೋರಣ್ಣಗೌಡ, ಕೆ.ಪುಟ್ಟಸ್ವಾಮಿ, ಡಾ. ನಾಗನಗೌಡ, ಕೆ.ಎಂ.ದೇವಯ್ಯ, ಎಂ.ಆರ್.ಪಾಟೀಲ್, ಹೆಚ್.ಕೆ. ವೀರಣ್ಣಗೌಡ, ರಾಮಕೃಷ್ಣ ಹೆಗ್ಗಡೆ, ಡಿ.ಮೂಕಪ್ಪ, ಎ.ಎಸ್. ದುದ್ಯಾನಾಯಕ್, ಎಂ.ರಾಮಪ್ಪ, ಸಿ.ಜೆ.ಮುಕ್ಕಣ್ಣಪ್ಪ, ಶ್ರೀಮತಿ ಬಸವ ರಾಜೇಶ್ವರಿ, ಬಿ.ರಾಚಯ್ಯ, ಬಿ. ಹುಚ್ಚೇಗೌಡ, ಎಂ.ಪಿ.ಎಲ್.ಶಾಸ್ತ್ರಿ, ಜಿ.ವಿ.ಆಂಜನಪ್ಪ, ಹೆಚ್.ಎಫ್.ಕಟ್ಟಿಮನಿ, ವಿ.ಶ್ರೀನಿವಾಸ ಶೆಟ್ಟಿ ಮುಂತಾದ ಪ್ರಮುಖರು ಸಮಿತಿಯಲ್ಲಿದ್ದರು. ಜಿ.ಎಸ್.ವೆಂಕಟರಮಣ ಅಯ್ಯರವರು ಸಮಿತಿಯ ಕಾರ್ಯದರ್ಶಿಯಾಗಿದ್ದರು (ಕ್ಷೀರಸಾಗರ, ೧೯೮೫:೭೮), (ಕಡಿದಾಳ್ ೧೯೯೦:೨೩೪-೨೩೫).

ಭೂಸುಧಾರಣ ವಿಧೇಯಕವನ್ನು ರಚಿಸುವುದರ ಮಧ್ಯದಲ್ಲಿಯೇ ಕಡಿದಾಳ್ ಅವರು ಹರಿಜನ, ಗಿರಿಜನ, ಭೂಹೀನ ರೈತರಿಗೆ ಸಹಾಯಕವಾಗುವಂತೆ ಒಂದು ಯೋಜನೆಯನ್ನು ರೂಪಿಸಿದರು. ಈ ಒಂದು ಯೋಜನೆಯ ಮುಖ್ಯ ಉದ್ದೇಶವೇನೆಂದರೆ ಸಾಗುವಳಿಗೆ ಯೋಗ್ಯವಾಗಿದ್ದ ಸರಕಾರಿ ಭೂಮಿ ಯಥೇಚ್ಛವಾಗಿತ್ತು. ೧೯೫೮ನೇ ಇಸವಿಯ ಅಂತ್ಯ ಭಾಗದಲ್ಲಿ ಯೋಜನೆಗನುಗುಣವಾಗಿ ಹಂಚಲು ಹೊಸ ಕಾರ್ಯಯೋಜನೆಯನ್ನು ರೂಪಿಸಿದರು. ಎರಡು ಜಿಲ್ಲೆಗಳಿಗೆ ಒಂದೊಂದು ವಿಶೇಷ ಸಿಬ್ಬಂದಿಯನ್ನು ನೇಮಕ ಮಾಡಿದರು. ವಿಶೇಷ ಸಿಬ್ಬಂದಿಗಳಿಗೆ ಒಬ್ಬೊಬ್ಬ ಅಸಿಸ್ಟೆಂಟ್ ಕಮಿಷನರ್ ದರ್ಜೆಯ ಅಧಿಕಾರಿಯನ್ನು ನೇಮಕ ಮಾಡಿದರು. ಕಮಿಷನರ್‌ಗಳಿಗೆ ಸಹಾಯಕವಾಗಿ ಒಬ್ಬೊಬ್ಬ ಯೋಜನೆದಾರರೂ, ದರಖಾಸ್ತು ತಯಾರು ಮಾಡುವ ಸಿಬ್ಬಂದಿಗಳು ಅಧಿಕಾರಿಗಳು ಬಹಳ ಪ್ರಾಮಾಣಿಕವಾಗಿ ಕೆಲಸ ಮಾಡಿದರು. ಸುಮಾರು ಎರಡು ವರ್ಷದ ಅವಧಿಯಲ್ಲಿ ಸುಮಾರು ಒಂಬತ್ತೂವರೆ ಲಕ್ಷ ಎಕರೆ ಸರಕಾರಿ ಭೂಮಿಯನ್ನು ಹರಿಜನ, ಗಿರಿಜನರಿಗೂ ಇತರ ಭೂಹೀನರಿಗೂ, ಅತ್ಯಲ್ಪ ಭೂಮಿಯಿದ್ದವರಿಗೂ ಹಂಚಿರುವುದು ಕಡಿದಾಳ್‌ರಿಗೆ ಭೂಹೀನರ ಬಗ್ಗೆ ಇರುವ ಕಾಳಜಿಯನ್ನು ತೋರಿಸುತ್ತದೆ ಸಂದರ್ಶನ ಗೋವಿಂದೇಗೌಡ, ೧೭.೦೫.೨೦೦೮), (ಕಡಿದಾಳ್, ೧೯೯೦:೨೪೦-೨೪೧). ಮೈಸೂರ್ ವಿಧಾನ

ಮಂಡಲ, (ಮೈಸೂರು ರಾಜ್ಯದ ಭೂ ಸುಧಾರಣಾ ವಿಧೇಯಕದ ಸಂಯುಕ್ತ ಪರಿಶೀಲನಾ ಸಮಿತಿಯವರಿಂದ ತಿದ್ದುಪಡಿಯಾದ ಮೇಲೆ ರೇವಿನ್ಯೂ ಶಾಖೆಯ ಮಂತ್ರಿಗಳಾದ ಕಡಿದಾಳ್‌ರು ಕೊಟ್ಟ ವಿವರಣೆ, ೨೩.೦೩.೧೯೬೧).

ಮಂಜಪ್ಪನವರು ಈ ಮೇಲಿನ ಸುಧಾರಣೆಗಳೊಂದಿಗೆ ಮೈಸೂರು ಭೂಸುಧಾರಣ ವಿಧೇಯಕದ ಸಂಬಂಧ ಸಭೆಗೆ ಒಪ್ಪಿಸಿದ ಜಂಟಿಪರಿಶೀಲನ ಸಮಿತಿಯ ಚರ್ಚೆಯನ್ನು ೬೪ ದಿನಗಳ ಕಾಲ ಪರಿಶೀಲಿಸಿ ವರದಿಯನ್ನು ೨೫-೩-೧೯೬೧ರಂದು ವಿಧಾನಸಭೆಯ ಮುಂದಿಟ್ಟರು. ತಿದ್ದುಪಡಿಯಾದ ಭೂಸುಧಾರಣಾ ವಿಧೇಯಕಕ್ಕೆ ೧೫-೯-೧೯೬೧ರಂದು ವಿಧಾನಸಭೆಯ ಒಪ್ಪಿಗೆಯನ್ನು ಪಡೆಯಲಾಯಿತು. ಮತ್ತೆ ವಿಧಾನ ಪರಿಷತ್ತಿನಲ್ಲಿ ಮಂಡಿಸಿ ಅಲ್ಲಿ ಕೂಡ ಕಡಿದಾಳ್‌ರು ತಿದ್ದುಪಡಿಯನ್ನು ತಂದರು. ಅಂತಿಮವಾಗಿ ೧೮-೧೧-೧೯೬೧ರಂದು ವಿಧಾನಸಭೆಯ ಅಂಗೀಕಾರವನ್ನು ಭೂಸುಧಾರಣಾ ಕಾನೂನು ವಿಧಾನ ಪರಿಷತ್ತಿನ ಅನುಮೋದನೆಯನ್ನು ಪಡೆಯುವುದರ ಮೂಲಕ ೧೯೬೨ರಲ್ಲಿ ರಾಷ್ಟ್ರಪತಿಯವರ ಒಪ್ಪಿಗೆಯನ್ನು ಪಡೆಯಿತು. ೧೯೬೧ರಲ್ಲಿ ಈ ಮಸೂದೆಯನ್ನು ಮಂಡಿಸುವ ಸಮಯದಲ್ಲಿ ಹಲವು ವಿರುದ್ಧ ಟೀಕೆಗಳನ್ನು ಕೇಳಬೇಕಾಯ್ತು. ಆದರೂ ಸ್ವಲ್ಪವೂ ಹಿಂಜರಿಯದೆ ತಾವು ತಂದಂತಹ ಭೂ ಸುಧಾರಣೆಯ ಕಾರ್ಯವನ್ನು ಕಡಿದಾಳ್‌ರು ಹೀಗೆ ಸಮರ್ಥಿಸಿಕೊಂಡರು.

"...ಸರ್ವರಿಗೂ ಸಾಮಾಜಿಕ ನ್ಯಾಯವನ್ನು ಸಮಾನಾವಕಾಶವನ್ನು ದೊರಕಿಸಿ ಕೊಡುವುದೂ ಮತ್ತು ವ್ಯತ್ಯಾಸಗಳನ್ನು ತೊಡೆದು ಹಾಕುವುದೂ ಸುಖೀ ರಾಜ್ಯದ ಗುರಿಗಳು. ಈ ದೃಷ್ಟಿಯಿಂದ ಪರಿಶೀಲಿಸಿದರೂ ಭೂಸುಧಾರಣೆಗಳು ಅಗತ್ಯ. ಜಮೀನುಗಳ ವಿಷಯದಲ್ಲಿ ಅವರವರ ಇಷ್ಟಾನುಸಾರದ ಸಾಹಸಕ್ಕೆ ಧಾರಾಳವಾದ ಅವಕಾಶವಿರ ಬೇಕೆಂಬುದನ್ನು ಸಮರ್ಥಿಸಿ ಕೆಲವರು ಟೀಕೆ ಮಾಡಿರುತ್ತಾರೆ. ಈ ದೇಶದಲ್ಲಿ ಕೆಲವು ಐಶ್ವರ್ಯವಂತರು, ಬಡಬಗ್ಗರ ಮತ್ತು ಕೆಳಗೆ ಬಿದ್ದಿರುವವರ ವಿಷಯದಲ್ಲಿ ಸ್ವಲ್ಪವೂ ಕನಿಕರವಿಲ್ಲದವರಾಗಿದ್ದಾರೆಂದು ನಾನು ಟೀಕೆದಾರರಿಗೆ ಸ್ವಲ್ಪವೂ ಕನಿಕರವನ್ನು ತೋರಿಸುವುದಿಲ್ಲವೋ ಆ ದೇಶವು ಎಂದೆಂದಿಗೂ ಏಳಿಗೆಯಾಗಲಾರದು. ಮತ ಸಂಬಂಧವಾದ ಸಂಸ್ಥೆಗಳಿಗೆ ವಿನಾಯಿತಿ ಕೊಡಲು ಯಾವ ಅವಕಾಶವನ್ನು ಕಲ್ಪಿಸಿಲ್ಲವೆಂಬ ಕಾರಣದಿಂದ ವಿಧೇಯಕದಲ್ಲಿ ತಪ್ಪು ಹುಡುಕಿದ್ದಾರೆ. ಅಂಥವರಿಗೆ ನಾನು ಸೂಚಿಸುವುದಿಷ್ಟೆ. ಒಂದಾನೊಂದು ಕಾಲದಲ್ಲಿ ಮತವು ಈ ದೇಶದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿತು. ಆಗ ಸತ್ಯ, ಧರ್ಮ, ತ್ಯಾಗ, ಭೂತದಯಾ ಪಶ್ಚಾತ್ತಾಪ, ಭಗವಂತನಲ್ಲಿ ಅನನ್ಯ. ಭಕ್ತಿ ಮತ್ತು ಆತ್ಮಸಾಕ್ಷಾತ್ಕಾರ ಇವುಗಳಿಗೆ ಮತವು ಮಹತ್ತರವಾದ ಸ್ಥಾನವನ್ನು ಕೊಟ್ಟು ಬೆಳಗುತ್ತಿದ್ದಿತು. ಕೆಳಗೆ ಬಿದ್ದಿರುವವರಿಗೂ ಮತ್ತು ಬಡಗೇಣಿದಾರರಿಗೂ ಇಲ್ಲದ ಸಲ್ಲದ

ಕಷ್ಟಕಾರ್ಪಣ್ಯಗಳನ್ನು ಕೊಟ್ಟು ತನ್ನ ಏಳಿಗೆಯನ್ನು ಸಂಪಾದಿಸಬೇಕೆಂದು ಯಾವ ಮತವೇ ಆಗಲಿ ಹೇಳಬಯಸುವುದಿಲ್ಲ. ಭಾರತದ ತತ್ವಶಾಸ್ತ್ರವನ್ನು ನೋಡಿ, ಅವು ಸಮಾಜ ಸ್ವಾಮ್ಯವಾದದ ಶಾಸ್ತ್ರ, ಭಗವಂತನು ಸರ್ವರ ಹೃದಯದಲ್ಲೂ ನೆಲೆಸಿರುತ್ತಾನೆಂಬ ನಂಬಿಕೆಯೂ ಅದರ ಮೂಲಾಧಾರ. ನಾವು ಪ್ರತಿನಿತ್ಯವೂ ಭಗವಂತನನ್ನು ಆರಾಧಿಸುವಾಗ "ಸರ್ವೇಜನಾ ಸುಖಿನೋಭವಂತು" ಎಂದು ಹೇಳುತ್ತೇವೆ. ಸರ್ವರೂ ಸುಖವಾಗಿರಲಿ ಎಂಬ ಉಚ್ಚಧ್ಯೇಯವೇ ನಮ್ಮ ನಿತ್ಯ ಜಪವಾಗಿರಲಿ"(ವಿಧಾನ ಸಭೆಯಲ್ಲಿ ಮೈಸೂರು ರಾಜ್ಯದ ಭೂಸುಧಾರಣೆ ವಿಧೇಯಕ ಮಂಡನೆ ಸಂದರ್ಭದಲ್ಲಿ ಕಡಿದಾಳ್‌ರು ಕೊಟ್ಟ ವಿವರಣೆಯ ದಾಖಲೆಯಿಂದ, ೨೩.೦೩.೧೯೬೧).

ಈ ಸಂದರ್ಭದಲ್ಲಿ ಧರ್ಮ ಮತ್ತು ರಾಜಕಾರಣಗಳಿಂದಾಗಿ ಉಂಟಾದ ಸಮಸ್ಯೆಗಳನ್ನು ಬಿಡಿಸುತ್ತಿದ್ದು, ಕಾನೂನು ರಚನೆಯ ಹಿನ್ನೆಲೆಯಲ್ಲಿ ಅವರ ವಕೀಲಿ ವೃತ್ತಿಯ ಅಗಾಧ ಜ್ಞಾನ ಮತ್ತು ಜನಸಾಮಾನ್ಯರ ಪರವಾದ ಕಾಳಜಿಗಳು ಪ್ರಜ್ಞಾವಂತ ನಾಗರಿಕನಲ್ಲಿರಬಹುದಾದ ತುಡಿತಗಳು ವ್ಯಕ್ತವಾಗುತ್ತವೆ. ಕಡಿದಾಳ್‌ರ ಅಧ್ಯಕ್ಷತೆಯಲ್ಲಿ ತಂದ ೧೯೬೧ರ ಈ ಕಾಯಿದೆ ಅವರಿಗೆ ಗೇಣಿದಾರರ ಬಗ್ಗೆ ಅಪಾರ ಕಳಕಳಿ ಇಟ್ಟುಕೊಂಡಿದ್ದು ಹಾಗೂ ಸ್ವತಹ ಸ್ವತಃ ಗೇಣಿ ಅನುಭವವಿದ್ದು, ಆಸಕ್ತಿ ವಹಿಸಿದ ಕಾರಣಕ್ಕಾಗಿ ಈ ಕಾಯ್ದೆಯಲ್ಲಿ ಕೆಲವು ಕ್ರಾಂತಿಕಾರಕ ವಿಚಾರಗಳು ಸೇರಿ ಜಾರಿಗೆ ಬಂದವು ಎಂಬುದು ಇಲ್ಲಿ ಮುಖ್ಯವಾಗುತ್ತದೆ. ಅಂತಹ ಮುಖ್ಯವಾದ ಅಂಶಗಳು ಈ ಕೆಳಗಿನಂತಿವೆ.

೧. ಯಾವುದೇ ಸಂಸ್ಥೆಗಳು ಭೂಮಿಯನ್ನು ಪಡೆಯುವಂತಿಲ್ಲ.

೨. ಗೇಣಿಗೆ ಜಮೀನು ಕೊಡುವ ವ್ಯವಸ್ಥೆಯನ್ನು ನಿಲ್ಲಿಸುವುದು.

೩. ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ನ್ಯಾಯಾಧೀಶರು ಭೂಪಂಚಾಯ್ತಿಗಳನ್ನು ರೂಪಿಸುವುದು.

೪. ಸ್ವಂತ ವ್ಯವಸಾಯಕ್ಕಾಗಿ ಮಾತ್ರ ಭೂಮಿಯನ್ನು ಸ್ವಾಧೀನ ಪಡೆಯಬಹುದು.

೫. ಒಂದು ಕುಟುಂಬಕ್ಕೆ ಭೂ ಪರಿಮಿತಿ ೨೭ ಪ್ರಮಾಣಿತ ಎಕರೆಗಳಿಗೆ ಸೀಮಿತವಾಗಿರತಕ್ಕದ್ದು.

೬. ಐದು ಮಂದಿ ಇರುವ ಕುಟುಂಬ ೨೧೬ ಎಕರೆವರೆಗೆ ಒಣ ಭೂಮಿ ಹೊಂದಬಹುದು.

೭. ಗೇಣಿದಾರರು ನೀಡಬೇಕಾದ ಗೇಣಿ ಪ್ರಮಾಣದಲ್ಲಿ ಯಾವ ಬದಲಾವಣೆಯೂ ಇಲ್ಲ.

೮. ಜಮೀನ್ದಾರರು ಗೇಣಿದಾರರನ್ನು ಭೂಮಾಲೀಕರು ಒಕ್ಕಲೆಬ್ಬಿಸಬೇಕಾದರೆ ಒಂದು ವರ್ಷದೊಳಗೆ ತಕರಾರು ಅರ್ಜಿ ಸಲ್ಲಿಸಬಹುದಾಗಿತ್ತು.

೯. ಭೂಸುಧಾರಣೆಯಿಂದ ಜಮೀನು ಕಳೆದುಕೊಂಡವರಿಗೆ ಹತ್ತು ಸಾವಿರದವರೆಗೆ ಒಂದೇ ಕಂತಿನಲ್ಲಿ ಪರಿಹಾರ ನೀಡುವ ಅವಕಾಶ ನೀಡಲಾಗಿತ್ತು (ಕ್ಷೀರಸಾಗರ, ೧೯೮೫:೮೩-೮೪-

೮೫), (ರಾಜನ್, ೧೯೮೭ : ೨೦-೨೧-೨೨-೨೫), (ವಿಧಾನ ಸಭೆಯಲ್ಲಿ ಮೈಸೂರು ರಾಜ್ಯದ ಭೂ ಸುಧಾರಣೆ ಮಂಡನೆ ಸಂದರ್ಭದಲ್ಲಿ ಕಡಿದಾಳ್‌ರು ಕೊಟ್ಟ ವಿವರಣೆ, ೨೩.೦೩.೧೯೬೧).

ಇದಲ್ಲದೇ "ಗೇಣಿದಾರರ ಉಚ್ಚಾಟನೆಯನ್ನು ತಡೆಗಟ್ಟತಕ್ಕ ತಾತ್ಕಾಲಿಕ ರಕ್ಷಣೆಯ ಕಾನೂನನ್ನು" ೨೮-೧೧-೧೯೬೧ರಂದು ಜಾರಿಗೆ ತಂದರು. "ಕರ್ನಾಟಕ ಲ್ಯಾಂಡ್ ಅಕ್ವಿಷನ್ ಅಮೆಂಡ್‌ಮೆಂಟ್ ಆ್ಯಕ್ಟ್" ಇದು ೧೯೬೧ನೇ ಕರ್ನಾಟಕ ಭೂಸ್ವಾಧೀನ ತಿದ್ದುಪಡಿ ಕಾನೂನಾಗಿದೆ. ಇವುಗಳೊಂದಿಗೆ ಕಡಿದಾಳ್‌ರು ಕೆಲವು ವರ್ಗಗಳ ಭೂಮಾಲೀಕರಿಗೆ ಅಂದರೆ ಸಣ್ಣ ಹಿಡುವಳಿದಾರರು, ವಿಧವೆಯರೂ, ಅವಿವಾಹಿತ ಹೆಣ್ಣು ಮಕ್ಕಳು, ಸೈನಿಕರು, ನಾವಿಕರು, ವೈಮಾನಿಕರು ಇವರುಗಳಿಗೆ ತಮ್ಮ ವ್ಯವಸಾಯದ ಭೂಮಿಯನ್ನು ಗೇಣಿಗೆ ಕೊಡುವ ಅವಕಾಶವನ್ನು ಕಲ್ಪಿಸಿಕೊಡಲಾಗಿತ್ತು. ಅಲ್ಲದೆ ಗೇಣಿದಾರರು ಕೊಡತಕ್ಕ ಗೇಣಿಯಿಂದಲೇ ಜೀವನ ಸಾಗಿಸುತ್ತಿದ್ದ ಭೂಮಾಲೀಕರಿಗೆ ಗೇಣಿದಾರರ ಸ್ವಾಧೀನದಲ್ಲಿದ್ದ ಕೆಲವು ಭಾಗದ ಜಮೀನನ್ನು ಬಿಡಿಸಿಕೊಳ್ಳಲೂ ಕೂಡ ಅವಕಾಶವನ್ನು ಕಲ್ಪಿಸಿಕೊಟ್ಟಿದ್ದರು (ಕಡಿದಾಳ್, ೧೯೯೦:೨೫೮).

೧೯೬೧ರ ಕಾಯಿದೆಯ ಪ್ರಮುಖ ಲಕ್ಷಣಗಳನ್ನು ಗುರುತಿಸಬಹುದು.

೧. ಭೂಮಿಯನ್ನು ಗುತ್ತಿಗೆಗೆ ಕೊಡುವುದನ್ನು ನಿಷೇಧಿಸಿತು.

೨. ಭೂಮಿತಿ ನಿಗದಿ ಕೂಡ ಇದರ ಮತ್ತೊಂದು ಲಕ್ಷಣ.

೩. ಗೇಣಿ ನೀಡಿದ ಜಮೀನಿನ ಪುನರ್ ಸ್ವಾಧೀನ ಇದನ್ನು ಪ್ರತಿಬಂಧಿಸಿತು.

೪. ಆದರೆ ಉಗ್ರಾಣ, ಕಾರ್ಖಾನೆ, ಗೃಹ ನಿರ್ಮಾಣ ಅಥವಾ ಭೂಮಾಲೀಕ ಸ್ವತಃ ಬೇಸಾಯ ಮಾಡಲು ಬಯಸಿದಾಗ ಗೇಣಿದಾರ ಗುತ್ತಿಗೆ ಪಾವತಿ ಮಾಡದಿದ್ದರೆ ಅಥವಾ ಅನಧಿಕೃತವಾಗಿ ಒಳಗೇಣಿಗೆ ಅಥವಾ ಪರಬಾರೆಗೆ ನೀಡಿದಾಗ ಜಮೀನನ್ನು ಎರಡು ವರ್ಷಗಳಿಗಿಂತ ಹೆಚ್ಚಿಗೆ ಬೇಸಾಯ ಮಾಡದೆ ಇದ್ದಾಗ ಅಥವಾ ಜಮೀನನ್ನು ಪುನಃ ಸ್ವಾಧೀನಪಡಿಸಿಕೊಳ್ಳಲು ಕಾಯ್ದೆಯಲ್ಲಿ ಅವಕಾಶವಿತ್ತು. ಹಾಗೆಯೇ ಪುನರ್ ಸ್ವಾಧೀನ ನೀಡುವಾಗ ಭೂಮಾಲೀಕ ಅವಶ್ಯಕತೆಗಿಂತ ಹೆಚ್ಚಿನದನ್ನು ಪಡೆಯುವಂತಿರಲಿಲ್ಲ. ಹಾಗೆ ಪಡೆದುದಾದರೆ ಉಳಿದ ಜಮೀನು ಸರ್ಕಾರದ ವಶಕ್ಕೆ ಬರುತ್ತಿತ್ತು (ವಿಜಯ್, ೨೦೦೧: ೮೬೬-೮೬೭), (ಮೈಸೂರು ರಾಜ್ಯದ ಭೂ ಸುಧಾರಣಾ ವಿಧೇಯಕದ ಸಂಯುಕ್ತ ಪರಿಶೀಲನಾ ಸಮಿತಿಯಿಂದ ತಿದ್ದುಪಡಿಯಾದ ಮೇರೆಗೆ ರೇವಿನ್ಯೂ ಮಂತ್ರಿಯಾದ ಕಡಿದಾಳ್‌ರು ಕೊಟ್ಟ ವಿವರಣೆ, ೨೩.೩.೧೯೬೧).

೧೯೬೧ರ ಭೂಸುಧಾರಣಾ ಕಾಯಿದೆ ಸರ್ಕಾರದ ವಿಳಂಬ ನೀತಿಯಿಂದಾಗಿ ಮಸೂದೆ ೧೯೬೨ರಲ್ಲೇ ರಾಷ್ಟ್ರಪತಿಯವರ ಒಪ್ಪಿಗೆ ಪಡೆದರೂ ಈ ಶಾಸನ ಜಾರಿಗೆ ಬಂದಿದ್ದು ೧೯೬೫ರಲ್ಲಿ. ೧೯೬೧ರಲ್ಲೇ ಇದು

ಅಂಗೀಕೃತವಾದುದರಿಂದ ೧೯೬೧ರ ಕಾಯಿದೆ ಎಂದೇ ಹೆಸರು ಬಂದಿದೆ. ಸರ್ಕಾರದ ವಿಳಂಬ ನೀತಿಯಿಂದಾಗಿ ಜಮೀನ್ದಾರರಿಗೆ ಒಳ್ಳೆಯದಾಗಿತ್ತು. ಏಕೆಂದರೆ ಈ ಅವಧಿಯಲ್ಲಿ ಗೇಣಿದಾರರನ್ನು ಒಕ್ಕಲೆಬ್ಬಿಸಿದರು. ಒಂದೆಡೆ ಉಳುವವನಿಗೆ ಭೂಮಿ ಎನ್ನುವ ಕಾನೂನು ಇದ್ದುದರಿಂದ ಗೇಣಿದಾರ ಭೂಮಿಯ ಒಡೆತನ ಪಡೆಯಲು ಮುಂದಾದ. ಆದರೆ ಕಾನೂನು ಬಗ್ಗೆ ಎಚ್ಚರಿಕೆ ವಹಿಸಿದ ಜಮೀನ್ದಾರ ಗೇಣಿಕಾರರನ್ನು ಒಕ್ಕಲೆಬ್ಬಿಸಿ ಬರಿಗೈ ಮಾಡಿದರು. ಜೊತೆಗೆ ತಮ್ಮಲ್ಲಿದ್ದ ಸಾವಿರಾರು ಎಕರೆ ಭೂಮಿಯನ್ನು ಕೆಲವರು ಇತರ ಸಂಬಂಧಿಗಳ ಹೆಸರಿಗೆ ವರ್ಗಾಯಿಸಿದರೆ ಮತ್ತೆ ಉಳಿದವರು ಪರಭಾರೆ ಮಾಡಿದರು. ಸ್ವಂತ ಬೇಸಾಯಕ್ಕೆಂದು ಭೂಮಾಲೀಕ ಗೇಣಿಯನ್ನು ಪುನರ್ ಸ್ವಾಧೀನಪಡಿಸಿಕೊಳ್ಳಲು ಮಸೂದೆಯಲ್ಲಿ ಕಾನೂನುಬದ್ಧ ಅವಕಾಶವಿತ್ತು. ಬಹುಮಂದಿ ಇದರ ಉಪಯೋಗವನ್ನು ಚೆನ್ನಾಗಿ ಬಳಸಿಕೊಂಡರು. ಈ ವಿಳಂಬ ನೀತಿಗೆ ಅಧಿಕಾರಶಾಹಿ ವರ್ಗಗಳು ಕಾರಣವಾದವು. ಸರ್ಕಾರದಿಂದ ಬಂದಂತಹ ಕಾಯಿದೆಗಳನ್ನು ಬೇಗ ಜಾರಿಗೆ ತರುತ್ತಿರಲಿಲ್ಲ. ಭೂಸುಧಾರಣಾ ಕಾನೂನು ರಾಜ್ಯಮಟ್ಟದಲ್ಲಿ ರೆವಿನ್ಯೂ, ಹಣಕಾಸು ನ್ಯಾಯಾಡಳಿತ ಹಾಗೂ ಕರಡು ಲೇಖನ ವಿಭಾಗಗಳ ಅಧಿಕಾರಿಗಳು ಮತ್ತು ಕೇಂದ್ರ ಮಟ್ಟದಲ್ಲಿ ಅಧಿಕಾರಶಾಹಿಗಳ ಮೂಲಕ ಹಾದು ಹೋಗಬೇಕಾಯಿತು. ಆದರೆ ಈ ಆಡಳಿತ ವರ್ಗಗಳು ಸಮರ್ಪಕವಾಗಿ ಕಾರ್ಯಯೋಜನೆಗೆ ತರದೇ ಇರುವುದು ಕಾರಣವಾಗಿದೆ (ಕ್ಷಿರಸಾಗರ, ೧೯೮೫:೮೨).

ಇದೇ ಸಂದರ್ಭದಲ್ಲಿ ಕಡಿದಾಳ್‌ರು ಈ ಭೂಸುಧಾರಣೆ ಕಾಯ್ದೆ ತಂದಿದ್ದರಿಂದ ಇವರ ಪರಿಣಾಮ ಎದುರಿಸಬೇಕಾಯಿತು. ೧೯೬೨ರಲ್ಲಿ ಕರ್ನಾಟಕ ವಿಧಾನಸಭೆಗೆ ಸಾರ್ವತ್ರಿಕ ಚುನಾವಣೆ ನಡೆಯಬೇಕಾಗಿತ್ತು. ಕಡಿದಾಳ್‌ರ ಬಗ್ಗೆ ಜಮೀನುದಾರರಿಗೂ, ಕಾಫಿ ಪ್ಲಾಂಟರ್‌ಗಳಿಗೂ ಆಕ್ರೋಶವಿತ್ತು. ಹಾಗಾಗಿ ಭೂಮಾಲೀಕರು ಹಾಗೂ ಕೆಲವು ಕಾಂಗ್ರೆಸ್ಸಿಗರೂ ಚುನಾವಣೆಯಲ್ಲಿ ಅವರನ್ನು ಸೋಲಿಸಬೇಕೆಂದು ನಿರ್ಧಾರ ಮಾಡಿದ್ದರು. ಇವರ ವಿರುದ್ಧವಾಗಿ ಎ.ಪಿ.ಗೋವಿಂದೇಗೌಡರನ್ನು ವಿರೋಧ ಪಕ್ಷದ ಅಭ್ಯರ್ಥಿಯಾಗಿ ನಿಲ್ಲಿಸಿದರು. ಈ ಕಾರಣದಿಂದ ಕಡಿದಾಳ್‌ರಿಗೆ ಈ ಚುನಾವಣೆ ಮಹತ್ವದ ಘಟ್ಟವಾಗಿತ್ತು. ಇದೊಂದು ಅಗ್ನಿಪರೀಕ್ಷೆ ಕೂಡ ಆಗಿತ್ತು. ಇದು "ಬಡ ಗೇಣಿದಾರ ಹಾಗೂ ಶ್ರೀಮಂತ ಜಮೀನುದಾರರ ಹೋರಾಟವೆಂದೇ" ಪ್ರಸಿದ್ಧಿ ಪಡೆದಿತ್ತು. ಕಡಿದಾಳ್‌ರಿಗೆ ಈ ಸಂದರ್ಭದಲ್ಲಿ ಮಾಜಿ ಶಿಕ್ಷಣ ಸಚಿವರಾದ ಹೆಚ್.ಜಿ.ಗೋವಿಂದಗೌಡ ಸಹಾಯಕ್ಕೆ ಬಂದು ಚುನಾವಣೆಯನ್ನು ಸವಾಲು ಎಂಬಂತೆ ಸ್ವೀಕರಿಸಿದರು. ಕಡಿದಾಳ್‌ರು ಅಧಿಕಾರಾವಧಿಯಲ್ಲಿ ರೈತರ ಪರ ಹೋರಾಡಿದ್ದರಿಂದ ಇಷ್ಟೆಲ್ಲಾ ವಿರೋಧವಿದ್ದರೂ ಸುಮಾರು ಹದಿನಾರು ಸಾವಿರಕ್ಕೂ ಹೆಚ್ಚು ಮತಗಳನ್ನು ಪಡೆದು ಜಯಶಾಲಿಗಳಾಗಿದ್ದರು. ಇದು ಅವರ ಕಾರ್ಯಕ್ಷಮತೆಯನ್ನು ತೋರಿಸುತ್ತದೆ (ಸಂದರ್ಶನ : ಗೋವಿಂದೇಗೌಡ, ೧೭.೦೫.೨೦೦೮).

ಕಡಿದಾಳ್‌ರು ಭೂಸುಧಾರಣೆಗೆ ಸಂಬಂಧಪಟ್ಟಂತೆ ಸಮಗ್ರವಾದ ಕಾಯಿದೆಯನ್ನು ತಂದಿದ್ದರು. ಆದರೆ ಅವು ಪರಿಣಾಮಕಾರಿಯಾಗಿ ಜಾರಿಯಾಗುತ್ತಿರಲಿಲ್ಲ. ಇದಕ್ಕೆ ಕಾರಣ ಸರ್ಕಾರದಲ್ಲಿದ್ದವರ ಸಹಕಾರ

ಅವರಿಗೆ ಸಿಗುತ್ತಿರಲಿಲ್ಲ. ಅಲ್ಲಿ ಇದ್ದವರೆಲ್ಲ ಭೂಮಾಲೀಕರೇ ಆಗಿದ್ದು ಕಾಯಿದೆಗಳು ಜಾರಿಗೆ ಬರದಂತೆ ನಿಯಂತ್ರಿಸುತ್ತಿದ್ದರು. ಒಂದು ವೇಳೆ ಕಾಯಿದೆಗಳು ಜಾರಿಗೆ ಬಂದರೂ ಅದನ್ನು ವಿಧಾನಸಭೆಯಲ್ಲಿ ಚರ್ಚೆಯಾಗುವ ರೀತಿ ಮಾಡಿ ಕಾಯಿದೆಗಳನ್ನು ಜಾರಿಗೊಳ್ಳದಂತೆ ಮಾಡುತ್ತಿದ್ದರು. ಇದನ್ನೆಲ್ಲ ಭೂಮಾಲೀಕ ವರ್ಗವೇ ಕ್ರಮಬದ್ಧವಾಗಿ ಮಾಡುತ್ತಿತ್ತು. ಯಾವುದೇ ಒಂದು ಮಸೂದೆ ಜಾರಿಗೆ ಬರಬೇಕಾದರೆ ವರ್ಷಾನುಗಟ್ಟಲೇ ಕಾಯುವ ಹಾಗೇ ಮಾಡುತ್ತಿದ್ದರು. ಇದೆಲ್ಲದಕ್ಕೂ ಭೂಮಾಲೀಕ ವರ್ಗವೇ ಕಾರಣವಾಗಿತ್ತು. ಈ ರೀತಿಯ ವ್ಯವಸ್ಥೆಯಲ್ಲಿಯೇ ಕಡಿದಾಳ್‌ರು ೧೯೫೧ರಿಂದಲೇ ಹಂತ, ಹಂತವಾಗಿ ೧೯೬೧ರವರೆಗೆ ಸಮಗ್ರವಾಗಿ ಭೂಸುಧಾರಣೆ ಕಾಯ್ದೆಯನ್ನು ತರಲು ಪ್ರಯತ್ನಿಸಿದ್ದು ಕಂಡುಬಂದಿದೆ. ಆದರೆ ಇದೆಲ್ಲಾ ಮೀರಿ ಭೂಸುಧಾರಣೆ ಗಟ್ಟಿಗೊಂಡಿದ್ದು ದೇವರಾಜ ಅರಸ್ ಅವರು ಮುಖ್ಯಮಂತ್ರಿಯಾದ ಸಂದರ್ಭದಲ್ಲಿ, ಇದಕ್ಕೆ ಮೂಲ ಪ್ರೇರಣೆ ನೀಡಿದವರು ಕಡಿದಾಳ್‌ರೇ ಆಗಿದ್ದರು. ಕಡಿದಾಳ್‌ರ ಅಧಿಕಾರಾವಧಿಯಲ್ಲಿ ಪೂರ್ಣಪ್ರಮಾಣದಲ್ಲಿ ಹಾಗೂ ನೇರವಾಗಿ ಅನುಷ್ಠಾನಗೊಳಿಸದೇ ಇರಬಹುದು. ಪರೋಕ್ಷವಾಗಿ ಆ ಕೆಲಸವನ್ನು ಕಡಿದಾಳ್‌ರು ಮಾಡಿದ್ದಾರೆ. ವಕೀಲರಾಗಿ ಯಾವ ಯಾವ ಕಾಯಿದೆ, ಕಾನೂನುಗಳನ್ನು ರೂಪಿಸಬೇಕು ಎಂಬುದರ ಬಗ್ಗೆ ಅರಿವಿದ್ದರಿಂದ ಕಾಯಿದೆಗಳನ್ನು ರೂಪಿಸಲು ಸಾಧ್ಯವಾಯಿತು. ಪ್ರಾರಂಭದಿಂದಲೂ ಕಡಿದಾಳ್‌ರು ಕಾಯಿದೆಗಳನ್ನು ರೂಪಿಸಿ ಅದರಲ್ಲಿ ಕೊರತೆ ಕಂಡುಬಂದಾಗ ಮತ್ತೆ ಮತ್ತೆ ತಿದ್ದು ಮಾಡುತ್ತಿದ್ದರು. ಹೀಗೆ ೧೯೭೪ರವರೆಗೆ ತಿದ್ದುಪಡಿಯಾಗಿದ್ದು ಕಂಡುಬರುತ್ತದೆ. ಈ ರೀತಿಯಾಗಿ ತಿದ್ದುಪಡಿಯಾಗಲು ಮುಖ್ಯ ಕಾರಣ ಮೊಟ್ಟ ಮೊದಲು ರೂಪಿಸಿರುವುದು ಯಾವತ್ತೂ ಪೂರ್ಣ ಪ್ರಮಾಣದಲ್ಲಿ ಫಲ ನೀಡಲು ಸಾಧ್ಯವಿಲ್ಲ. ಯಾರೋ ಕೆಲವರಿಗೆ ಅನುಕೂಲ ವಾಗುತ್ತದೆ. ಕೆಲವರಿಗೆ ಅನಾನುಕೂಲವಾಗುತ್ತದೆ. ಆದರೆ ಇದು ಕ್ರಮಬದ್ಧವಾಗಿ ೧೯೫೧ರಿಂದ ೧೯೭೪ ರವರೆಗೆ ತಿದ್ದುಪಡಿಯಾಗಿದ್ದು, ಕಂಡುಬರುತ್ತದೆ. ಹೀಗೆ ೧ರಿಂದ ೧೫ ಬಾರಿ ತಿದ್ದುಪಡಿಯಾಗಿದ್ದರಿಂದ ೧೯೭೪ರಲ್ಲಿ ಒಂದು ಉತ್ತಮವಾದ ಭೂಸುಧಾರಣೆ ಬರಲು ಸಾಧ್ಯವಾಯಿತು. ಭೂಸುಧಾರಣೆಗೆ ಕಡಿದಾಳ್‌ರು ತಳಪಾಯ ಹಾಕದೆ ಇದ್ದರೆ ಒಂದೇ ಸಲ ಅಷ್ಟು ಪರಿಪಕ್ವವಾಗಿ ಬರಲು ಸಾಧ್ಯವಾಗುತ್ತಿರಲಿಲ್ಲ.

**ಟಿಪ್ಪಣಿಗಳು**

೧. ಕ್ಷೀರಸಾಗರ ಅವರು ವಿಜಯನಗರ ಸಾಮ್ರಾಜ್ಯದಲ್ಲಿ ಕಂಡುಬರುವ ಆಯಗಾರರ ಕುರಿತು 'ದಿಕ್ಕು ತಪ್ಪಿದ ಕರ್ನಾಟಕದ ಭೂಸುಧಾರಣೆ' ಎಂಬ ಕೃತಿಯಲ್ಲಿ ಬೆಳಕು ಚೆಲ್ಲಿದ್ದಾರೆ. ಆಯಗಾರರು ವಿಜಯನಗರದ ಕಾಲದಲ್ಲಿ ಗ್ರಾಮದಲ್ಲಿ ವಂಶಪಾರಂಪರ್ಯವಾಗಿ ಗೊತ್ತಾದ ಕೆಲಸಗಳನ್ನು ಮಾಡಬೇಕಿತ್ತು. ಹಾಗೂ ಈ ಕಾಲದಲ್ಲಿ ೧೨ ರೀತಿಯ ಆಯಗಾರರಿದ್ದರು. ಹನ್ನೆರಡು ಜನ ಆಯಗಾರರು ಮೂರು ರೀತಿಯ ಅಧಿಕಾರಿಗಳ ಕೈಕೆಳಗೆ ವೃತ್ತಿಗಳನ್ನು ನಿಭಾಯಿಸಬೇಕಿತ್ತು. ೧. ಶಾನುಭೋಗ ಮತ್ತು ಗೌಡ ಇವರು ಪ್ರತಿಯೊಂದು ಹಳ್ಳಿಯ ಲೆಕ್ಕಪತ್ರಗಳನ್ನು ೨. ಗ್ರಾಮದ ಕುಲ ಕರ್ಮಿಗಳು ೩. ಗ್ರಾಮ ಸೇವಕರು.

ಇವರ ಕೈಕೆಳಗೆ, ಹನ್ನೆರಡು ರೀತಿಯ ವಂಶವೃತ್ತಿಯವರಿದ್ದರು. ಅವರೆಂದರೆ ಶಾನುಭೋಗ, ಗೌಡ, ಕಮ್ಮಾರ, ಬಡಗಿ, ಅಗಸ, ಪಂಚಾಲ, ನಾಯಿಂದ, ಮಾದಿಗ, ಅಕ್ಕಸಾಲಿ, ತಳವಾರ, ನೀರಗಂಟಿ ಮತ್ತು ಕುಂಬಾರರಂತ್ತಿದ್ದು ಇವರು ಜೀವನ ನಡೆಸಲು ರೈತರು ಬೆಳೆದ ಬೆಳೆಯನ್ನು ನೀಡಬೇಕಿತ್ತು.

೨. ಟಿಪ್ಪು ಸುಲ್ತಾನ್ ತಂದ ಹೊಸ ಭೂಕಂದಾಯ ವ್ಯವಸ್ಥೆಯಲ್ಲಿ ತುಕಡಿಗಳನ್ನಾಗಿ ಮಾಡುವುದರೊಂದಿಗೆ ಕಂದಾಯ ವಸೂಲಿ ಮಾಡಲಾಗುತ್ತಿತ್ತು. ಪ್ರತಿಯೊಂದು ತುಕಡಿಯೂ ಐದು ಸಾವಿರ ಪಗೋಡಗಳಿಂದ ಕೂಡಿತ್ತು. ಈ ತುಕಡಿಯ ಅಡಳಿತವನ್ನು ಅಮಲ್ದಾರನಿಗೆ ವಹಿಸಲಾಗುತ್ತಿತ್ತು. ಅಮಲ್ದಾರನ ಕೈ ಕೆಳಗೆ ಒಬ್ಬ ಶಿರಸ್ತೆದಾರ ಮೂವರು ಗುಮಾಸ್ತರು, ಒಬ್ಬ ತರಫ ಹಣವನ್ನು ಮೊಹರು ಮಾಡಿ ಇಡುವುದಕ್ಕೆ ಒಬ್ಬ ಷರೀಫ್ ಹಾಗೂ ಒಬ್ಬ ಮುನ್ಷಿ ಇರುತ್ತಿದ್ದ. ಇಪ್ಪತ್ತರಿಂದ ಮೂವತ್ತು ತುಕಡಿಗಳಿಗೆ ಒಂದು ಅಸುಫ್ ಕಛೇರಿ ಇರುತ್ತಿತ್ತು. ಇದರಲ್ಲಿ ಒಬ್ಬ ಅಸುಫ, ಇಬ್ಬರು ಶಿರಸ್ತೆದಾರರು, ಇಬ್ಬರು ಗುಮಾಸ್ತರು, ೪೦ ಮಂದಿ ಜವಾನರಿರುತ್ತಿದ್ದರು. ಇವರಲ್ಲದೆ ಒಬ್ಬ ಷರೀಫ್ ಹಾಗೂ ಮುನ್ಷಿ ಇದ್ದು ಲೆಕ್ಕಾಚಾರಗಳನ್ನು ಪರ್ಷಿಯನ್ ಭಾಷೆಯಲ್ಲಿ ಬರೆದಿಡಲು ಒಬ್ಬ ಪರ್ಷಿಯನ್ ಶಿರಸ್ತೆದಾರ ಹಾಗೂ ಕೆಲವು ಗುಮಾಸ್ತರಿರುತ್ತಿದ್ದರು. ಇದೇ ಪದ್ಧತಿಯನ್ನು ಮೊಗಲ ಕಾಲದಲ್ಲೂ ಕಾಣುತ್ತೇವೆ.

೩. ಕ್ಷೀರಸಾಗರ ಅವರ ಅಭಿಪ್ರಾಯದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಹಿಂದೂ ರಾಜ್ಯಾಡಳಿತ ಪದ್ಧತಿಯನ್ನು ಪುನರ್ ಸ್ಥಾಪಿಸಲು ಮತ್ತೆ ಇನಾಂತಿ ಪದ್ಧತಿಯನ್ನು ಜಾರಿಗೆ ತಂದು ದೇವಸ್ಥಾನ, ಮಠ ಮುಂತಾದವುಗಳಿಗೆ ಉದಾರವಾಗಿ ನೀಡಿದ್ದರೆಂದು ತಿಳಿಸಿದ್ದಾರೆ. ಮಹಾರಾಜರು ತಮಗೆ ಬೇಕಿದ್ದವರಿಗೆ ಮತ್ತು ಹತ್ತಿರದ ಬಂಧುಗಳಿಗೆ ಎರಡು ರೀತಿಯ ಭೂ ಮಂಜೂರಾತಿಗಳನ್ನು ಮಾಡಿದರು.

೩.೧. **ಕಾಯಂ ಗುತ್ತಾ :** ಹಳ್ಳಿಯ ಸುತ್ತ ಇರುವ ಜಮೀನನ್ನು ಶಾಶ್ವತವಾಗಿ ಅನುಭೋಗಕ್ಕೆ ಮಂಜೂರು ಮಾಡುವುದು.

೩.೨. **ನಿರುಪ :** ಒಂದು ಗೊತ್ತಾದ ಕಾಲದವರೆಗೆ ಅನುಭೋಗಕ್ಕೆ ಜಮೀನನ್ನು ಮಂಜೂರು ಮಾಡುವುದು. ಈ ರೀತಿಯ ಮಂಜೂರಾತಿಗಳು ಸಾಕಷ್ಟು ಪ್ರಮಾಣದಲ್ಲಿ ಮಾಡಲಾಯಿತು. ಸರ್ಕಾರದ ಜಮೀನನ್ನು ರೈತವಾರಿ ಪದ್ಧತಿಯಲ್ಲಿ ಕೃಷಿಗೆ ಒಳಪಡಿಸುತ್ತಿದ್ದರು. ಇದರಲ್ಲಿ ಸರ್ಕಾರದ ಭೂಮಿಗೆ ಗೇಣಿದಾರರಿಂದ ರೈತರು ಬೆಳೆದ ಬೆಳೆಯಲ್ಲಿ ಗೊತ್ತಾದ ಪಾಲಿನ ಧಾನ್ಯವನ್ನು ಸರ್ಕಾರಕ್ಕೆ ಒಪ್ಪಿಸುತ್ತಿದ್ದರು. ಕಂದಾಯದಿಂದ ವಿನಾಯಿತಿ ಪಡೆದ ಭೂಮಿಯಲ್ಲಿ ರೈತವಾರಿ ಪದ್ಧತಿಯಲ್ಲಿ ಇದ್ದ ಸ್ಥಳಗಳಲ್ಲಿ ಬಹಳಷ್ಟು ಭೂ ಒಡೆಯರು ಹಿಡುವಳಿಗಳನ್ನು ಗೇಣಿದಾರರಿಂದ ಕೃಷಿ ಮಾಡುತ್ತಿದ್ದರು. ವಾರ, ಮೂಕಪ್ಪ, ಅರೆಗಂದಾಯ, ವೊಲಗಂದಾಯ ಎಂಬ ಗೇಣಿಪದ್ಧತಿಗಳು ಕಂಡುಬರುತ್ತಿತ್ತು.

೩.೩. ಹೆಚ್ಚಿನ ವಿವರಕ್ಕಾಗಿ ಕ್ಷೀರಸಾಗರ ಅವರ "ದಿಕ್ಕುತಪ್ಪಿದ ಕರ್ನಾಟಕದ ಭೂಸುಧಾರಣೆ", ಕೃತಿ ನೋಡಿ

೪. ಭಾರತದಲ್ಲಿ ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಜಮೀನ್ದಾರಿ ಮತ್ತು ರೈತವಾರಿ ಪದ್ಧತಿಗಳು ಪ್ರಭಲವಾಗಿದ್ದವು.

**ಜಮೀನ್ದಾರಿ ಪದ್ಧತಿ :** ಈ ಪದ್ಧತಿಯಲ್ಲಿ ದೊಡ್ಡ ಪ್ರಮಾಣದಲ್ಲಿ ಭೂಮಿಯ ಒಡೆತನವನ್ನು ಜಮೀನ್ದಾರರು ಹೊಂದಿದ್ದು ಸಂಪೂರ್ಣ ಹಕ್ಕನ್ನು ಪಡೆದುಕೊಂಡರು. ಇದರಲ್ಲಿ ಮುಖ್ಯವಾಗಿ ಪಾಳೆಯ ಗಾರರ ಪ್ರಾಬಲ್ಯವನ್ನು ಕಾಣಬಹುದು. ಇವರು ಭೂಕಂದಾಯದಿಂದ ಹೊರತಾಗಿದ್ದರು. ಬ್ರಿಟಿಷರು ಇವರ ಆಳ್ವಿಕೆಯನ್ನು ರಾಜಕೀಯವಾಗಿ ಬೆಂಬಲಿಸಿದ್ದರು.

**ರೈತವಾರಿ ಪದ್ಧತಿ :** ರೈತವಾರಿ ಪದ್ಧತಿಯಲ್ಲಿ ಭೂ ಒಡೆತನವನ್ನು ರೈತರಿಗೆ ಕೊಡಲಾಗುತ್ತಿತ್ತು. ಇವರು ನೇರವಾಗಿ ಸರ್ಕಾರಕ್ಕೆ ಕಂದಾಯ ಕಟ್ಟುತ್ತಿದ್ದರು. ರೈತವಾರಿ ಕ್ಷೇತ್ರಗಳಲ್ಲಿ ಶೇಕಡ ೫೦ ಭಾಗವನ್ನು ಆಕ್ರಮಿಸಿಕೊಂಡಿದ್ದರು ಎಂಬುದಾಗಿ ಅಭಿಪ್ರಾಯ ಪಟ್ಟಿದ್ದಾರೆ.

೫. ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗವು ಪ್ರಕಟಿಸಿರುವ ತಂಬಂಡ ವಿಜಯ್ ಪೂಣಚ್ಚ ಸಂಪಾದಕತ್ವದ "ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ೪"(೨೦೦೧)ರಲ್ಲಿ ವೆಲೇರಿಯನ್ ರೋಡಿಗ್ರಸ್, ಎಸ್. ಸಿರಾಜ್ ಅಹಮದ್(ಅನು) ಅವರ "ಭೂ ಸುಧಾರಣಾ ಕಾಯಿದೆಯ ರಾಜಕಾರಣ" ಎಂಬ ಲೇಖನ ಉದಾಹರಿಸ ಬಹುದು.

ಪ್ರಸ್ತುತ ಅಧ್ಯಯನವು ಕಡಿದಾಳ್ ಮಂಜಪ್ಪನವರ ಕಾಲಘಟ್ಟಕ್ಕೆ ಸಂಬಂಧಿಸಿದಂತೆ ಸ್ವಾತಂತ್ರ್ಯೋತ್ತರ ಮಲೆನಾಡಿನ ಭೂಹೋರಾಟ ಮತ್ತು ಭೂಸುಧಾರಣೆಯ ವಿವಿಧ ಹಂತಗಳನ್ನು ಅಧ್ಯಯನ ಮಾಡುವುದರೊಂದಿಗೆ ಕಡಿದಾಳ್ ಅವರ ಜೀವನ ಪರಿಸರ ಪ್ರಭಾವ ಹಾಗೂ ಮೈಸೂರ್ ಕಾಂಗ್ರೆಸ್ ಪಕ್ಷದೊಂದಿಗಿನ ಸಂಬಂಧವನ್ನು ವಿಶ್ಲೇಷಿಸುವ ಪ್ರಯತ್ನವನ್ನು ಮಾಡಿದ್ದೇನೆ. ಲಭ್ಯವಿರುವ ಪ್ರಕಟಿತ, ಅಪ್ರಕಟಿತ ಮಾಹಿತಿಗಳನ್ನು ಅಭ್ಯಾಸ ಮಾಡುವ ಮೂಲಕ ಕಡಿದಾಳ್‌ರ ಕಾಲಘಟ್ಟದಲ್ಲಿರುವಂತಹ ಅವರ ಒಡನಾಡಿಗಳ ಸಂದರ್ಶನದ ಮೂಲಕ ಅನೇಕ ವಿವರಗಳನ್ನು ಕಲೆ ಹಾಕಲಾಗಿದೆ.

ಕಡಿದಾಳ್‌ರು ಒಬ್ಬ ಗೇಣಿದಾರನ ಮಗನಾಗಿ ಭೂ ಹೋರಾಟದ ಸಕಾರಕ್ಕೆ ಕಾರಣವಾದ ಮಲೆನಾಡಿನ ಭೂವ್ಯವಸ್ಥೆ, ಕಡಿದಾಳ್ ರ ಕುಟುಂಬ, ಶಿಕ್ಷಣ ಸೈದ್ಧಾಂತಿಕವಾದ ಪ್ರಭಾವ, ಪ್ರೇರಣೆಗಳು ಚರ್ಚಿಸುವುದರ ಮೂಲಕ ಅವರ ಕ್ರಿಯೆ ಮತ್ತು ಚಿಂತನೆಗಳಲ್ಲಿ ತೊಡಗಿರುವ ಕಡಿದಾಳ್ ರ ರಾಜಕಾರಣದ ಸ್ವರೂಪವನ್ನು ಗಾಂಧೀವಾದದ ಸೈದ್ಧಾಂತಿಕತೆಯ ಹಿನ್ನೆಲೆಯಲ್ಲಿ ಗ್ರಹಿಸಲಾಗಿದೆ. ಕಡಿದಾಳರು ಭೂ ಹೋರಾಟದ ಮೂಲಕ ಭೂ ಸುಧಾರಣೆಯನ್ನು ಕೈಗೊಳ್ಳುವಲ್ಲಿ ಪ್ರಯತ್ನಪಟ್ಟಿದ್ದು, ಅದನ್ನು ಕಾರ್ಯರೂಪಕ್ಕೆ ತರುವಲ್ಲಿ ಉಂಟಾದ ಸಮಸ್ಯೆಗಳನ್ನು ಕುರಿತಂತೆ ಸ್ಪಷ್ಟಪಡಿಸಲಾಗಿದೆ. ಇಂತಹ ಸಂಕೀರ್ಣವಾದ ವಿಷಯ ವಿಮರ್ಶಿಸುವಲ್ಲಿ ಉಂಟಾದ ಮಿತಿಯ ನಡುವೆಯು ಆ ಕಾಲಘಟ್ಟದಲ್ಲಾದ ರಾಜಕೀಯ ಪ್ರಕ್ರಿಯೆಗಳನ್ನು ಸಂದರ್ಶನ, ಪತ್ರಿಕಾ ಹೇಳಿಕೆ, ಬಿಡಿಬರಹ, ಭಾಷಣ, ಜೀವನ ಚರಿತ್ರೆಯ ಮೂಲಕ ಮಾಹಿತಿಯನ್ನು ಹಾಗೂ ಅದಕ್ಕೆ ಸಂಬಂಧಿಸಿದ ವಿವರಗಳನ್ನು ಚರ್ಚೆ ಮಾಡುವ ಪ್ರಯತ್ನ ಮಾಡಲಾಗಿದೆ.

ಕಡಿದಾಳ್‌ರು ಒಬ್ಬ ರಾಜಕಾರಣಿಯಾಗಿ, ಸಾಹಿತಿಯಾಗಿ ಗುರುತಿಸಿಕೊಳ್ಳುವುದರೊಂದಿಗೆ ಭೂಹೋರಾಟವನ್ನು ಬದುಕಿನ ಭಾಗವಾಗಿಯೇ ಮಾಡಿಕೊಂಡಿರುವುದು ಗಮನಾರ್ಹವಾದ ಅಂಶವಾಗಿದೆ. ಸ್ವಾತಂತ್ರ್ಯಪೂರ್ವದಲ್ಲಿಯೇ ಮಲೆನಾಡಿನ ಭಾಗದಲ್ಲಿ ಹಲವು ದಶಕಗಳ ಕಾಲ ಭೂ ಒಡೆತನದ ಪ್ರಾಬಲ್ಯ ಹೊಂದಿದ್ದ ಭೂಮಾಲೀಕರ ಶೋಷಣೆಯನ್ನು ತಪ್ಪಿಸಲು ವಕೀಲ ವೃತ್ತಿಯ ಜೊತೆ ಜೊತೆಯಲ್ಲಿಯೇ ಗೇಣಿದಾರರನ್ನು ಸಂಘಟಿಸುವ ಮೂಲಕ ಮಲೆನಾಡಿನಲ್ಲಿ ರೈತರಪರ ಹೋರಾಟ ಆರಂಭಿಸಿದ ಆದ್ಯ ವ್ಯಕ್ತಿಗಳಲ್ಲಿ ಕಡಿದಾಳ್‌ರು ಪ್ರಮುಖರು. ೧೯೪೫ರಲ್ಲಿ ಮಲೆನಾಡಿನ ಗೇಣಿದಾರ ಸಂಘ ಸ್ಥಾಪಿಸಿದ್ದು, ಈ ಸಂಘಟನೆಯ ಪ್ರೇರಣೆಯ ಮೂಲಕ ಸಾಗರದ ರೈತ ಸಂಘ ಸ್ಥಾಪಿಸಿದ್ದರು. ಕಡಿದಾಳ್‌ರು ಈ ಎರಡು ಸಂಘಟನೆಗಳನ್ನು ಒಂದುಗೂಡಿಸಿ ಮಲೆನಾಡ ರೈತ ಸಂಘವಾಗಿ ಪರಿವರ್ತನೆಗೊಳಿಸಿರುವುದು

ಮಹತ್ವದಾಗಿದೆ. ಕಡಿದಾಳರ ಈ ಸಂಘಟನೆಗಳ ಮೂಲಕ ಗೇಣಿದಾರರು ಜಾಗೃತಿಗೊಂಡು ರೈತರು ಜಮೀನ್ದಾರರ ವಿರುದ್ಧ ಹೋರಾಡಿ ತಮ್ಮ ಹಕ್ಕು ಮತ್ತು ಸ್ವಾತಂತ್ರ್ಯ ಪಡೆಯಲು ಮುಂದಾಗಿರುವುದಕ್ಕೆ ಕಡಿದಾಳ್‌ರ ಶ್ರಮ ಮುಖ್ಯವಾಗಿದೆ. ಗೇಣಿದಾರ ಮತ್ತು ಭೂಮಾಲೀಕರ ನಡುವಿನ ಸಮಸ್ಯೆಯನ್ನು ಬಗೆಹರಿಸುವಾಗ ಗಾಂಧೀ ಮಾರ್ಗವನ್ನು ಅನುಸರಿಸುವಲ್ಲಿ ಅನಿಸರಿಸಲಿ ಕಡಿದಾಳರ ಪಾತ್ರ ಗಮನಾರ್ಹವಾಗಿದೆ. ಭಾರತದ ಇತಿಹಾಸದ ಬಹುತೇಕ ಕಡೆ ಈ ಬಗೆಯ ಚಳುವಳಿಗಳು ಹಿಂಸಾತ್ಮಕವಾಗಿ ಅಂತ್ಯವನ್ನು ಕಂಡದ್ದೆ ಹೆಚ್ಚು.[೧] ಆದರೆ ಕಡಿದಾಳರು ಆ ಬಗೆಯ ಮಾರ್ಗಗಳಿಂದ ಹೊರನಿಂತು ಶಾಂತಿಯುತವಾದ ಪ್ರತಿಭಟನೆಯನ್ನು ಮಲೆನಾಡಿನಲ್ಲಿ ಮಾಡಿರುವುದು ಕರ್ನಾಟಕದ ರೈತ ಹೋರಾಟಗಾರರ ಇತಿಹಾಸದಲ್ಲಿ ಮೈಲಿಗಲ್ಲಾಗಿದೆ.

ಮಲೆನಾಡಿನ ಪ್ರಮುಖ ಭಾಗವಾದ ಕಾಗೋಡಿನಲ್ಲಿ ಶತ ಶತಮಾನಗಳಿಂದ ಭೂಮಾಲೀಕರ ದಬ್ಬಾಳಿಕೆ ವಂಚನೆ, ಶೋಷಣೆಗಳಿಗೆ ತುತ್ತಾದವರು ಗೇಣಿದಾರರು ಎಂದು ಈಗಾಗಲೇ ಪ್ರಸ್ತುತ ವಿವಿಧ ಅಧ್ಯಾಯಗಳಲ್ಲಿ ವಿವರಿಸಿರುವುದು ಸರಿಯಷ್ಟೆ. ತಮ್ಮ ಶ್ರಮದ ಫಲದಲ್ಲಿ ನ್ಯಾಯಯುತವಾದ ಪಾಲು ಪಡೆಯದೆ ಆರ್ಥಿಕ ಭದ್ರತೆ, ಶೈಕ್ಷಣಿಕ ಸವಲತ್ತುಗಳಲ್ಲಿದೆ, ಜೀತಗಾರಿಕೆಯಲ್ಲಿಯೂ ಬದುಕುತ್ತಿದ್ದವರು ಈ ಗೇಣಿದಾರರು. ಇಂತಹ ಶೋಷಣೆಯ ವಿರುದ್ಧ ಗೇಣಿದಾರರ ಚಳುವಳಿ ನಡೆಯಲು ಕಡಿದಾಳ್‌ರು ಸ್ಫೂರ್ತಿಯಾಗಿದ್ದರು. ಇವರು ಪ್ರಾರಂಭದಿಂದಲೂ ಗೇಣಿದಾರರನ್ನು ಸಂಘಟಿಸಿ ೧೯೫೧ರಲ್ಲಿ ಈ ಚಳುವಳಿ ಐತಿಹಾಸಿಕ ಮಹತ್ವ ಪಡೆಯಲು ಕಾರಣರಾದರು. 'ಸತ್ಯಾಗ್ರಹ' ಮಾದರಿಯನ್ನು ಮುಂದಿಟ್ಟುಕೊಂಡು ಹೊರಹೊಮ್ಮಿದ ಸಂದರ್ಭಗಳನ್ನು, ಘಟನೆಗಳನ್ನು ಪ್ರಸ್ತುತ ನಿಬಂಧವು ಅಲ್ಲಲ್ಲಿ ವಿವರಿಸಲು ಪ್ರಯತ್ನಿಸಿದೆ. ಕರ್ನಾಟಕದ ರೈತ ಹೋರಾಟಗಳಲ್ಲಿ ಕಾಗೋಡು ಚಳುವಳಿ ಪ್ರಮುಖ ಮೈಲಿಗಲ್ಲಾಗಲು ಕಡಿದಾಳರ ಪ್ರಯತ್ನ ಈ ಸಂದರ್ಭದಲ್ಲಿ ಗಮನಾರ್ಹವಾದುದು ಮತ್ತು ಗಂಭೀರವಾದುದು.

ಕಾಗೋಡಿನ ಜಮೀನ್ದಾರರ ವಿರುದ್ಧವಾಗಿ ಗೇಣಿಪಾಲಿನಲ್ಲಾದ ಅನ್ಯಾಯವನ್ನು ಸರಿಪಡಿಸಲು ಮಂಜಪ್ಪನವರ ಮಾರ್ಗದರ್ಶನದಲ್ಲಿ ಹೋರಾಟ ಆರಂಭವಾಗಿದ್ದು, ಸರಿಯಷ್ಟೆ, ಈ ಸಂದರ್ಭದಲ್ಲಿ ಗೇಣಿದಾರರ ಪರವಾದ ಹೋರಾಟದ ನಾಯಕತ್ವವು ಕಾಂಗ್ರೆಸಿಗರಾಗಿದ್ದ ಕಡಿದಾಳರದೇ ಆಗಿತ್ತು. ಇಲ್ಲಿ ಜಮೀನ್ದಾರರು ಕಾಂಗ್ರೆಸಿಗರೇ ಆಗಿದ್ದರು. ಮತ್ತು ಆಗ ಕಾಂಗ್ರೆಸ್ ಪಕ್ಷದ ಆಡಳಿತದ ಸರ್ಕಾರದಲ್ಲಿ ಭಾರೀ ಭೂಮಾಲೀಕರೇ ಇದ್ದರು. ಈ ಸಂದರ್ಭದಲ್ಲಿ ಇವರು ಗೇಣಿ ಪದ್ಧತಿ ನಾಶವಾಗಬೇಕೆಂದು ಪ್ರಮಾಣಿಕವಾಗಿ ಪ್ರಯತ್ನಿಸಿ ಭೂಮಾಲೀಕರೇ ಪ್ರಧಾನವಾಗಿದ್ದ ಸರ್ಕಾರದ ವಿರುದ್ಧವೇ ಧ್ವನಿ ಎತ್ತಿರುವುದು ಗಮನಾರ್ಹವಾದುದು. ಕಾಗೋಡು ಚಳುವಳಿಯನ್ನು ಆರಂಭಿಸಲು ಕಾರಣವಾದುದು ಮಹತ್ವದ ಅಂಶವಾಗಿದೆ. ಭೂಮಾಲೀಕರ ಪಟ್ಟಭದ್ರ ಹಿತಾಸಕ್ತಿಗಳು ಪ್ರಬಲವಾಗಿದ್ದ ಕಾಂಗ್ರೆಸ್ ಸರ್ಕಾರದಲ್ಲಿ ಕಡಿದಾಳ್‌ರ ಗಾಂಧೀವಾದಿ ತತ್ವ ಚಿಂತನೆಗಳಿಗೆ ಮಹತ್ವ ಇರಲಿಲ್ಲ. ಸಮಾಜವಾದಿ ಪಕ್ಷ ಬೆಳೆಸುವ

ಸಮಾಜವಾದಿಗಳು ಕಾಗೋಡು ಚಳುವಳಿಯಲ್ಲಿ ಭಾಗವಹಿಸಿ ನಂತರ ಅದಕ್ಕೆ ಅವರು ನಾಯಕತ್ವವನ್ನು ನೀಡಿದ್ದರಿಂದ ಕಾಗೋಡು ಚಳುವಳಿಗೆ ರೂಪುರೇಷೆ ನೀಡಿದ ಕಡಿದಾಳ್‌ರು ನೊಂದುಕೊಂಡು ಸತ್ಯಾಗ್ರಹದಿಂದ ನಿರ್ಗಮಿಸುವವರೆಗೆ ಉಂಟಾಯಿತು.

ಕಾಗೋಡು ಚಳುವಳಿಯಿಂದ ಹಿಂದೆ ಸರಿದ ನಂತರ ಸರ್ಕಾರದ ಮಟ್ಟದಲ್ಲಿ ಭೂಸಮಸ್ಯೆಗೆ ಒಂದು ಶಾಶ್ವತ ಪರಿಹಾರ ಕಂಡುಕೊಳ್ಳಬೇಕು ಎನ್ನುವ ಚಿಂತನೆಯಲ್ಲಿಯೇ ಅವರ ತತ್ವ, ಆದರ್ಶಗಳಿಗೆ ಅಡ್ಡಿಯಾಗಿದ್ದು, ಭೂಮಾಲೀಕರ ಲಾಬಿಯೇ ಎನ್ನುವುದು ಮೇಲ್ನೋಟಕ್ಕೆ ಕಂಡುಬಂದಿದೆ. ಕಡಿದಾಳರು ತನ್ನ ಹೋರಾಟಕ್ಕೆ ಮಹತ್ವ ಸಿಗದೆ ಇದ್ದರೂ ಕಾಂಗ್ರೆಸ್ ಪಕ್ಷದ ಆಡಳಿತದ ಸರ್ಕಾರದಲ್ಲಿದ್ದುಕೊಂಡು ಕರ್ನಾಟಕದಲ್ಲಿ ಭೂ ಸುಧಾರಣೆಗೆ ತಳಪಾಯ ಹಾಕಿ ಗೇಣಿ ಶಾಸನಗಳನ್ನು ಜಾರಿಗೆ ತರುವುದರ ಮೂಲಕ ಸಮಾಜದಲ್ಲಿ ಮತ್ತು ಆರ್ಥಿಕ ವ್ಯವಸ್ಥೆಯಲ್ಲಿ ಸಂಪೂರ್ಣವಾಗಿ ಕ್ರಾಂತಿಕಾರಕವಾದ ಬದಲಾವಣೆಯಾಗಲು ಕೊನೆಯವರೆಗೂ ಪ್ರಯತ್ನಪಟ್ಟಿದ್ದರು. ನಂತರದ ವರ್ಷಗಳಲ್ಲಿ ಅವುಗಳು ದೇವರಾಜ ಅರಸರ ಕಾಲದಲ್ಲಿ ಸಾಕಾರವಾಗಲು ಕಡಿದಾಳ್‌ರೇ ಸ್ಫೂರ್ತಿ ಎಂದರೆ ಉತ್ಪ್ರೇಕ್ಷೆಯಲ್ಲ.

ಆರ್ಥಿಕ ವ್ಯವಸ್ಥೆಯಲ್ಲಿ ಬದಲಾವಣೆ ತರುವ ನಿಟ್ಟಿನಲ್ಲಿ ಕಡಿದಾಳರು ಕೆಂಗಲ್ ಹನುಮಂತಯ್ಯನವರ ಸಚಿವ ಸಂಪುಟದಲ್ಲಿ ಕಂದಾಯ, ನೀರಾವರಿ ಮತ್ತು ಲೋಕೋಪಯೋಗಿ ಮಂತ್ರಿಗಳಾದ ಸಂದರ್ಭದಲ್ಲಿ ಸರ್ಕಾರದ ಮಟ್ಟದಲ್ಲಿ ಹೋರಾಡಿದ್ದಾರೆ. ಭೂ ಸಮಸ್ಯೆಗಳನ್ನು ಕಾಯ್ದೆಗಳ ರೂಪದಲ್ಲಿ ತರಲು ಪ್ರಯತ್ನಪಟ್ಟು ಭೂ ಸಮಸ್ಯೆಗೆ ಶಾಶ್ವತವಾದ ಪರಿಹಾರ ತಂದುಕೊಡುವುದರ ಮೂಲಕ ಭೂಸುಧಾರಣಾ ರುವಾರಿಯೆನಿಸಿಕೊಂಡಿದ್ದಾರೆ. ಸರಕಾರಿ ಭೂಮಿ ಹರಾಜಿನ ಮೂಲಕ ಶ್ರೀಮಂತರ ಪಾಲಾಗುತ್ತಿದ್ದದನ್ನು ತಪ್ಪಿಸಲು ಹೊಸ ಕಾನೂನು ರಚಿಸಿ ಭೂಹೀನ ಕೃಷಿಕರಿಗೆ ಭೂಮಿಯನ್ನು ಕೊಡಿಸಿದ್ದು ಮಹತ್ವದಾಗಿದೆ. ಈ ಸಂದರ್ಭದಲ್ಲಿ ಸುಮಾರು ಒಂಭತ್ತುವರೆ ಲಕ್ಷ ಎಕರೆ ಸರ್ಕಾರಿ ಜಮೀನನ್ನು ಹರಿಜನ, ಗಿರಿಜನರಿಗೂ ಮತ್ತು ಇತರ ಭೂಹೀನರಿಗೂ, ಕಡಿಮೆ ಭೂಮಿ ಇದ್ದವರಿಗೂ ಹಂಚುವುದರ ಮೂಲಕ ಭೂಹೀನರಿಗೆ ಅನುಕೂಲವಾಗುವಂತೆ ಮಾಡಿದ್ದಾರೆ.

೧೯೫೪ರಲ್ಲಿ ದೇವದಾಯ, ಧರ್ಮದಾಯ ಇನಾಂಗಳನ್ನು ಸಂಪೂರ್ಣವಾಗಿ ರದ್ದುಗೊಳಿಸಬೇಕೆಂದು ವಿಧೇಯಕವನ್ನು ಮಂಡಿಸಿದಾಗ ಕರ್ನಾಟಕದಾದ್ಯಂತ ಪ್ರತಿಭಟನೆ ವ್ಯಕ್ತವಾಯಿತು. ಪಟ್ಟಭದ್ರರೆಲ್ಲರೂ ಒಂದೆಡೆ ಸೇರಿಕೊಂಡು ಕಡಿದಾಳ್‌ರು ನಾಸ್ತಿಕರು, ಬ್ರಾಹ್ಮಣ ವಿರೋಧಿಯೆಂದು ಆರೋಪವನ್ನು ಮಾಡಿದರು. ಆದರೆ ಕಡಿದಾಳ್‌ರು ದೇವರು ಧರ್ಮದ ಹೆಸರಿನಲ್ಲಿ ನಡೆಯುವ ಮೌಢ್ಯವನ್ನು, ಕಂದಾಚಾರವನ್ನು ಶೋಷಣೆಯನ್ನು ತಪ್ಪಿಸಲು ಈ ವಿಧೇಯಕವನ್ನು ಮಂಡಿಸಿರುವುದು ಕುತೂಹಲಕಾರಿಯಾದ ವಿಚಾರವಾಗಿದೆ. ಈ ವಿಧೇಯಕಗಳ ಹಿಂದೆ ಇದ್ದ ಅವರ ಜನಪರ ಕಾಳಜಿ ಹಾಗೂ ಬಡ ರೈತರ ನೋವಿನ ಬಗ್ಗೆ ಇದ್ದ ಅವರ ಕಳಕಳಿ ಈ ನಿಟ್ಟಿನಲ್ಲಿ ಮಹತ್ವದ್ದಾಗಿದೆ. ಬಡಜನರ, ಕೂಲಿಕಾರರ ಹಿಂದುಳಿದವರ

ಶೋಷಿತರ ಏಳಿಗೆಗಾಗಿ ರೂಪುಗೊಂಡ ಈ ಬಗೆಯ ವಿಧೇಯಕಗಳನ್ನು ತಂದದ್ದು. ಪ್ರಜಾಪ್ರಭುತ್ವದ ಆ ಕಾಲಘಟ್ಟದಲ್ಲಿ ಮೈಲುಗಲ್ಲಾಗಿದೆ. ಈ ವಿಧೇಯಕಗಳ ಜೊತೆಯಲ್ಲಿಯೇ ಮೈಸೂರು ಟೆನಿನ್ಸಿ ಕಾಯಿದೆ, ೧೯೬೧ರ ಭೂಸುಧಾರಣೆಯ ಕಾಯ್ದೆಯನ್ನು ತಂದಿರುವುದನ್ನು ಈಗಾಗಲೇ ಚರ್ಚೆ ಮಾಡಲಾಗಿದೆ (ಈ ಅಂಶಕ್ಕೆ ಸಂಬಂಧಿಸಿದಂತೆ ಹೆಚ್ಚಿನ ಮಾಹಿತಿಗಾಗಿ ಅಧ್ಯಾಯ ೪ನ್ನು ನೋಡಿ). ಭೂಸುಧಾರಣಾ ಶಾಸನವನ್ನು ಮಂಡಿಸಿದಾಗ ಹಲವಾರು ಶ್ರೀಮಂತ ರಾಜಕಾರಣಿಗಳು ಟೀಕೆ ಮಾಡಿ ಕಡಿದಾಳರನ್ನು ಖಂಡಿಸಿದರು. ಆದರೂ ಕಡಿದಾಳರು ಧೃತಿಗೆಡದೆ ತಮ್ಮ ಕಾರ್ಯವನ್ನು ಸಮರ್ಥಿಸಿಕೊಂಡರು. ಹೀಗೆ ೧೯೫೧ರಿಂದ ೧೯೬೧ರವರೆಗೆ ಕಡಿದಾಳ್‌ರು ಸತತವಾಗಿ ಗೇಣಿದಾರ ಮತ್ತು ಸಣ್ಣರೈತರ ಪರವಾದ ಮಸೂದೆಯನ್ನು ತರಲು ಜೀವನವನ್ನು ತೇಯ್ದುದದ್ದರಿಂದ ೧೯೭೪ರಲ್ಲಿ ದೇವರಾಜ ಅರಸರ ಕಾಲದಲ್ಲಿ ಉತ್ತಮವಾದ ಭೂ ಸುಧಾರಣೆ ಮಸೂದೆ ಬರಲು ಸಾಧ್ಯವಾಯಿತು.

ಗಾಂಧೀಜಿಯವರ ಸತ್ಯಗ್ರಹ ಮಾರ್ಗವನ್ನು ಯಾವ ಕಾರಣಕ್ಕೂ ಬಿಟ್ಟು ಕೊಡದೆ ರಾಜಕೀಯದಲ್ಲಿ ಮೂಲೆಗೆ ಒತ್ತಲ್ಪಟ್ಟರೂ ಕಡಿದಾಳ್‌ರು ಆದರ್ಶವಾದಿ ರಾಜಕಾರಣದ ಛಾಪನ್ನು ಕರ್ನಾಟಕದ ರಾಜಕೀಯದಲ್ಲಿ ಮುಂದುವರಿಯಲೂ ಪ್ರಯತ್ನಪಟ್ಟಿರುವುದು ಆಧುನಿಕ ಕರ್ನಾಟಕದ ರಾಜಕೀಯ ಆಯಾಮಗಳಲ್ಲಿ ಒಂದು ಪ್ರಮುಖ ಘಟ್ಟವೆಂದು ಪರಿಗಣಿಸಬಹುದು.

**ಟಿಪ್ಪಣಿ**

೧. ೧೯೨೦ರ ದಶಕದಲ್ಲಿ ನಡೆದ ಮಲಬಾರಿನ ಮಾಪೆಲ್ಲೀ ಚಳುವಳಿ ಅಥವಾ ೧೯೬೬ರಲ್ಲಿ ನಡೆದ ತೇಲಂಗಣ ಚಳವಳಿಯನ್ನು ಇಲ್ಲಿ ಉದಹರಿಸಬಹುದಾಗಿದೆ.

# ಅನುಬಂಧಗಳು

೧. ಗ್ರಂಥಸೂಚಿ

೨. ಸಂದರ್ಶಿತ ವ್ಯಕ್ತಿಗಳು

೩. ನಕ್ಷೆಗಳು

೪. ಛಾಯಾಚಿತ್ರಗಳು

೧

# ಗ್ರಂಥಸೂಚಿ

## ಅ. ಪ್ರಕಟಿತ ಕನ್ನಡ ಗ್ರಂಥಗಳು

ಅಂಬಳಿಕೆ ಹಿರಿಯಣ್ಣ, ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೯.

ಅರುಣ್ ಜೋಳದ ಕೂಡ್ಲಿಗಿ, ಸೊಂಡೂರು ಭೂಹೋರಾಟ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

ಕಡಿದಾಳ ಮಂಜಪ್ಪ, ಪಂಜರವಳ್ಳಿಯ ಪಂಜು, ಕರ್ನಾಟಕ ಪುಸ್ತಕ ಪ್ರಾಧಿಕಾರ ಬೆಂಗಳೂರು, ೧೯೯೪.

ಕಡಿದಾಳ ಮಂಜಪ್ಪ, ನನಸಾಗದ ಕನಸು, ಕಡಿದಾಳ್ ಪ್ರಕಾಶನ, ಬೆಂಗಳೂರು, ೧೯೯೦.

ಕವಂಟೆ ಎಸ್.ಎಚ್., ಪೂಜಾರ್ ವಿ.ಜಿ., ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ, ಕಡಿದಾಳ್ ಮಂಜಪ್ಪ, ಕರ್ನಾಟಕ, ವಿಧಾನ ಸಭೆ ಸಚಿವಾಲಯ, ವಿಧಾನಸೌಧ, ಬೆಂಗಳೂರು ೧೯೯೯.

ಕಮಲೇಶ ಕೆ.ಆರ್., ಹೆಜ್ಜೆಯ ಗುರುತು, ಲಕ್ಷ್ಮಿ ಮುದ್ರಣಾಲಯ, ಬೆಂಗಳೂರು, ೨೦೦೦.

ಕಾಳೇಗೌಡ ನಾಗವಾರ, ಆನಂದಮೂರ್ತಿ, ಜಿ.ವಿ(ಸಂ) ಶಾಂತವೇರಿ ಗೋಪಾಲಗೌಡ ನೆನಪಿನ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೭.

ಕ್ಷೀರಸಾಗರ, ದಿಕ್ಕುತಪ್ಪಿದ ಕರ್ನಾಟಕ ಭೂಸುಧಾರಣೆ, ಸಿಯಡ್ಸ ಚಾರ್ಲ್ಸ್ ಕ್ಯಾಂಬೆಲ್ ರೋಡ್ ಕಾಕ್ಸ್ ಟೌನ್, ಬೆಂಗಳೂರು, ೧೯೮೫.

ಕೋಣಂದೂರು ವೆಂಕಪ್ಪಗೌಡ, ಜೀವಂತ ಜ್ವಾಲೆ, ಯಶಸ್ವೀ ಪ್ರಕಾಶನ, ಬೆಂಗಳೂರು, ೧೯೮೧.

ಕೋಣಂದೂರು ವೆಂಕಪ್ಪಗೌಡ, ಕಾಗೋಡು ರೈತ ಹೋರಾಟದ ರೂವಾರಿ ಹೆಚ್.ಗಣಪತಿಯಪ್ಪನವರ ಜೀವನ ಚರಿತ್ರೆ, ಯಶಸ್ವೀ ಪ್ರಕಾಶನ, ಬೆಂಗಳೂರು ೨೦೦೧.

ಗೋವಿಂದರಾಜು ಸಿ.ಆರ್., ಕರ್ನಾಟಕ ಏಕೀಕರಣ ಚಳುವಳಿ ಮತ್ತು ಕನ್ನಡ ಸಾಹಿತ್ಯ, ಎಸ್.ಬಿ.ಎಸ್. ಪಬ್ಲಿಕೇಷನ್ಸ್, ಬೆಂಗಳೂರು, ೧೯೯೮.

ಗೋಪಾಲರಾವ್ ಎಚ್.ಎಸ್., ಕರ್ನಾಟಕ ಏಕೀಕರಣ ಇತಿಹಾಸ, ನವಕರ್ನಾಟಕ ಪ್ರಕಾಶನ, ಬೆಂಗಳೂರು ೧೯೯೬.

ಗೋಪಾಲರಾವ್ ಎಚ್.ಎಸ್., ನಮ್ಮ ನಾಡು ಕರ್ನಾಟಕ, ನವ ಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು ೨೦೦೩.

ಚಂದ್ರಶೇಖರ ಸಿ.ಬಿ., ಕಾಗೋಡು ಒಂದು ನೆನಪು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೭.

ಚಂದ್ರಶೇಖರ ಎಸ್., ದಕ್ಷಿಣ ಭಾರತ : ವಸಾಹತುಶಾಹಿ, ರಾಷ್ಟ್ರೀಯತೆ ಮತ್ತು ಸಂಘರ್ಷ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

ಚಂದ್ರಶೇಖರ ರಾ.ನಂ.(ಸಂ), ಇದು ನಮ್ಮ ಕರ್ನಾಟಕ (ವಸತು ವಾಚಿಕೆ), ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೫.

ಚಂದ್ರಶೇಖರ ಎಸ್., ಆಧುನಿಕ ಕರ್ನಾಟಕದ ಆಂದೋಲನಗಳು, ಅಕ್ಷರ ಜೋಡಣೆ, ಸುಪ್ರೀಂ ಟೆಕ್ನಾಲಜೀಸ್, ಬೆಂಗಳೂರು, ೨೦೦೨.

ತಂಬಂಡ ವಿಜಯ ಪೂಣಚ್ಚ, ರೈತ ಚಳುವಳಿಗಳು ೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

ತಂಬಂಡ ವಿಜಯ ಪೂಣಚ್ಚ(ಸಂ), ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ೪, ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

ದೇ.ಜ.ಗೌ. ಮತ್ತು ಕಮಲೇಶ್ ಕೆ.ಆರ್.(ಸಂ), ಕರ್ನಾಟಕ ರಾಜಕೀಯ ಚಿಂತನೆ, ಲಕ್ಷ್ಮೀ ಮುದ್ರಣಾಲಯ, ಬೆಂಗಳೂರು, ೨೦೦೩.

ಪಾಟೀಲ ಜೆ.ಎಸ್., ಕರ್ನಾಟಕ ಭೂಸುಧಾರಣಾ ಆಧಿನಿಯಮ ೧೯೬೧, ರಾಮಾಶ್ರಯ ಪಬ್ಲಿಕೇಶನ್ಸ್, ಧಾರವಾಡ.

ಪೀರ್ ಭಾಷಾ, ಸಮಾಜವಾದಿ ಹೋರಾಟಗಾರರ ಸಂದರ್ಶನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೭.

ಪುಣೇಕರ್ ಎಸ್.ಎನ್., ಕರ್ನಾಟಕ ಲ್ಯಾಂಡ್ ರೆವಿನ್ಯೂ ಆ್ಯಕ್ಟ್ ಅಥವಾ, ಭೂಕಂದಾಯ ಕಾಯಿದೆ, ೧೯೬೪, ರಾಮಾಶ್ರಯ ಪಬ್ಲಿಕೇಶನ್ಸ್ ಧಾರವಾಡ, ೨೦೦೭.

ಪುಟ್ಟಣ್ಣ ವೈ.ಎಸ್., **ನಾನು ಕಂಡ ಮಲೆನಾಡು,** ಪ್ರಕಾಶಕರು ಶ್ರೀ ಕೆ.ಎಂ.ದಿನೇಶ್, ಬೆಂಗಳೂರು, ೧೯೯೪.

ಬಸವರಾಜ, **ಶಿವಮೊಗ್ಗ ರೈತ ಚಳುವಳಿ,** ಸಮುದಾಯ ಪ್ರಕಾಶನ, ಬೆಂಗಳೂರು, ೧೯೮೧.

ಬಿಳುಮನೆ ರಾಮದಾಸ್, **ಭೂಸುಧಾರಣಾ ರೂವಾರಿ ಕಡಿದಾಳ್ ಮಂಜಪ್ಪ,** ಪ್ರಕಟಣೆ, ಕಡಿದಾಳ್ ಮಂಜಪ್ಪನವರ ಜನ್ಮಶತಮಾನೋತ್ಸವ, ಸಮಿತಿ, ಬೆಂಗಳೂರು, ೨೦೦೭.

ಬೋರಲಿಂಗಯ್ಯ ಹಿ.ಚಿ., ಹುಚ್ಚಪ್ಪ ಮಾಸ್ತರ ಎನ್.(ಸಂ), **ಕಾಗೋಡು ಚಳುವಳಿ, ಸುವರ್ಣ ಸಂಪುಟ,** ಮಲೆನಾಡು ಜನಪದ ಲೋಕ, ಸಾಗರ, ೨೦೦೨.

ಮುಝಫರ್ ಅಸ್ಸಾದಿ, **ಭಾರತ ಮತ್ತು ಕರ್ನಾಟಕದಲ್ಲಿ ರೈತ ಹೋರಾಟಗಳು,** ಅರಿವು ಬರಹ, ಸಂಚಿಕೆ (೧೪, ೧೯೯೮).

ಮೂರ್ತಿ ಎನ್., **ಭಾರತ ರಾಜಕೀಯ ಸುಧಾರಣೆ,** ದ.ಸಂ.ಸಂ, ಪ್ರಕಾಶನ, ಬೆಂಗಳೂರು, ೨೦೦೬.

ಮೋಹನ್ ಕೃಷ್ಣ ರೈ, **ಪ್ರಭುತ್ವ ಮತ್ತು ಜನತೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೪.

ರಹಮತ್ ತರೀಕೆರೆ, **ಲೋಕ ವಿರೋಧಿಗಳ ಜೊತೆಯಲ್ಲಿ** ಕನ್ನಡ ಸಂಘ, ಕ್ರೈಸ್ತ ಕಾಲೇಜ್, ಬೆಂಗಳೂರು, ೨೦೦೬

ರಮೇಶ ಚಿ.ಗೋ., **ಕರ್ನಾಟಕದ ಮುಖ್ಯ ಮಂತ್ರಿಗಳು,** ದಿವ್ಯಚಂದ್ರ ಪ್ರಕಾಶನ, ಬೆಂಗಳೂರು ೧೯೯೯.

ರಾಜನ್ ಎಂ.ಎ.ಎಸ್., **ಕರ್ನಾಟಕದಲ್ಲಿ ಭೂಸುಧಾರಣೆ ನಾನು ಸಹ ಹತ್ತಿರದಿಂದ ಕಂಡೆ,** ಡಿ.ವಿ.ಎಸ್ ಪ್ರಕಾಶನ, ಗಾಂಧಿನಗರ, ಬೆಂಗಳೂರು, ೧೯೮೭.

ರಾಜಶೇಖರ್ ಜಿ., **ಕಾಗೋಡು, ಸತ್ಯಾಗ್ರಹ,** ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೮೦.

ಲಕ್ಷ್ಮಣ್ ತೆಲಗಾವಿ(ಸಂ), **ಚರಿತ್ರೆ ಅಧ್ಯಯನ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

ವಿಷ್ಣುಮೂರ್ತಿ ಹೆಚ್.ಸಿ.(ಸಂ), **ಗೋಪಾಲಗೌಡ ಶಾಂತವೇರಿ, ಅಂತರಂಗ ಬಹಿರಂಗ,** ಅನನ್ಯ ಪ್ರಕಾಶನ, ಧಾರವಾಡ, ೧೯೯೯.

ವಿಷ್ಣುಮೂರ್ತಿ ಹೆಚ್.ಸಿ., **ಗೋಪಾಲಗೌಡ ಡೈರಿ ಪತ್ರಗಳು ಇತ್ಯಾದಿ,** ಅನನ್ಯ ಪ್ರಕಾಶನ, ಧಾರವಾಡ, ೧೯೯೯.

ವಿಷ್ಣುನಾಯಕ, **ದುಡಿಯುವ ಕೈಗಳ ಹೋರಾಟದ ಕಥೆ,** ಡಾ. ದಿನಕರ, ದೇಸಾಯಿ, ಸ್ಮರಣ ಪ್ರತಿಷ್ಠಾನ, ಅಂಕೋಲ ಉ.ಕ., ೨೦೦೪.

ವೀರಭದ್ರಪ್ಪ ಬಿಸ್ಲಳ್ಳಿ(ಸಂ), **ಪ್ರೋಫೆಸರ್ ಎಂ.ಡಿ.ಎನ್.**, ಅಭಿರುಚಿ ಪ್ರಕಾಶನ ಸರಸ್ವತಿಪುರಂ ಮೈಸೂರು, ೨೦೦೬.

ವೆಂಕಟೇಶ ಕೆ.ಜಿ., **ಕರ್ನಾಟಕ ಇತಿಹಾಸ(೧೯೩೯-೧೯೮೫)**, ವಿದ್ಯಾರ್ಥಿ ಪ್ರಕಾಶನ, ಶಿವಮೊಗ್ಗ.

ಶಿವರಾಮ ಕಾರಂತ, **ಚೋಮನದುಡಿ, ಸರಸಮ್ಮನ ಸಮಾಧಿ, ಬೆಟ್ಟದ ಜೀವ, ಹೆತ್ತಾಳಾ ತಾಯಿ**, ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೨೦೦೧.

ಶ್ರೀಪಾದಶೆಟ್ಟಿ, **ದಿನಕರ ದೇಸಾಯಿ**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೫.

ಷೇಕ್ ಅಲಿ(ಪ್ರ.ಸಂ), **ಕರ್ನಾಟಕ ಚರಿತ್ರೆ ಸಂಪುಟ ೬ ಮತ್ತು ೭**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

ಸುರೇಶ್ ಭೀ. ಹೂಗಾರ, **ಕರ್ನಾಟಕದ ಪ್ರಮುಖ ಐತಿಹಾಸಿಕ ಸ್ಥಳಗಳು**, ವಾಷಸ್ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೮

ಸೂರ್ಯನಾಥ ಯು. ಕಾಮತ್(ಪ್ರ.ಸಂ), **ಕರ್ನಾಟಕ ರಾಜ್ಯ ಗ್ಯಾಸೆಟಿಯರು(ಭಾಗ ೨)**, ರಾಜ್ಯ ಸರ್ಕಾರದ ಪ್ರಕಟಣೆ, ಬೆಂಗಳೂರು, ೧೯೮೫.

ಸೂರ್ಯನಾಥ ಯು.ಕಾಮತ್, **ಕ್ವಿಟ್ ಇಂಡಿಯಾ ಮೂವಮೆಂಟ್ ಇನ್ ಕರ್ನಾಟಕ**, ಬೆಂಗಳೂರು, ೧೯೮೫.

ಹಯವದನ ರಾವ್(ಸಂ) **ಮೈಸೂರು ಗ್ಯಾಸೆಟಿಯರ್, ಸಂಪುಟ ೧-೫**, ಮೈಸೂರು ಸರ್ಕಾರ, (ಬೆಂಗಳೂರು ೧೯೩೭, ೧೯೨೯, ೧೯೩೦).

ಹಾ.ಮಾ.ನಾಯಕ, **ಪ್ರಗತಿ ಪಥ, ಡಿ.ದೇವರಾಜ ಅರಸು ಕರ್ನಾಟಕದ ಮುಖ್ಯಮಂತ್ರಿ**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೧೯೭೬.

ಹಾರೋಗದ್ದೆ ಉಷಾ ರಮೇಶ್ ನಾಯಕ, **ಶಿವಮೊಗ್ಗ, ಜಿಲ್ಲೆಯ ಶತಮಾನದ ಮಹಾನ್ ಪ್ರತಿಭೆಗಳು**, ಭೂಮಿಕಾ ಪ್ರಕಾಶನ, ಬೆಂಗಳೂರು, ೨೦೦೨.

ಹೊ.ಶ್ರೀನಿವಾಸಯ್ಯ(ಸಂ), **ಹೋರಾಟ ಶ್ರೀ**, ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ಬೆಂಗಳೂರು, ೧೯೯೬.

## ಆ. ಪ್ರಕಟಿತ ಇಂಗ್ಲೀಷ್ ಗ್ರಂಥಗಳು

ಆಸತೋಷ್ ವರ್ಶಿನಿ, **ಡೆಮಾಕ್ರಸಿ ಡೆವಲಪ್ ಮೆಂಟ್ ಆ್ಯಂಡ್ ದಿ ಕಂಟ್ರಿಸೈಡ್ ಅರ್ಬನ್ ರೂರಲ್ ಸ್ಟ್ರಗಲ್ಸ್ ಇನ್ ಇಂಡಿಯಾ**, ಕೇಂಬ್ರಿಡ್ಜ್, ೧೯೯೫.

೨. ಇರ್ಫಾನ್ ಹಬೀಬ್, ದಿ ಅಗ್ರೇರಿಯಯನ್ ಸಿಸ್ಟಮ್ ಆಫ್ ಮೊಗಲ್ ಇಂಡಿಯಾ, ೧೫೫೬-೧೭೦೭, ಮುಂಬೈ, ೧೯೬೨.

೩. ನಾಡಕರ್ಣಿ ಎಂ.ವಿ., ಫಾರ್ಮರ್ಸ್ ಮೂವಮೆಂಟ್ ಇನ್ ಇಂಡಿಯಾ, ನವದೆಹಲಿ, ೧೯೮೭.

೪. ನೀಲಕಂಠಶಾಸ್ತ್ರಿ ಕೆ.ವಿ, ದಿ ಜೋಳಾಸ್, ಮದ್ರಾಸ್ ಯುನಿವರ್ ಸಿಟಿ, ಮದ್ರಾಸ್ ೧೯೫೫.

೫. ದಯಾನಂದ ಕುಮಾರ್, ಪೆಸೆಂಟ್ ಮೂವಮೆಂಟ್ ಇನ್ ಮಲೆನಾಡು ಎ.ಡಿ., ೧೭೯೯-೧೮೮೧, ಕುವೆಂಪು, ಯುನಿರ್ವಸಿಟಿ, ಶಿವಮೊಗ್ಗ, ೧೯೯೯(ಅಪ್ರಕಟಿತ).

ಧನಂಜಯ, ಕರ್ನಾಟಕ ರಾಜ್ಯ ರೈತ ಸಂಘ, ಎ. ಸೋಸಿಯಾಲಜಿಕಲ್ ಸ್ಟಡಿ ಆಫ್ ಪೆಸೆಂಟ್ ಆರಗನೈಜೆಷನ್ಸ್, ಕುವೆಂಪು ಯನಿರ್ವಸಿಟಿ, ಶಿವಮೊಗ್ಗ, ೧೯೯೮.

ಧನಗಿರೆ ಡಿ.ಎನ್., ಪೆಸೆಂಟ್ ಮೂವಮೆಂಟ್ ಇನ್ ಇಂಡಿಯಾ, ದೆಹಲಿ, ೧೯೮೨.

ಬಿಪನ್ ಚಂದ್ರ, ಇಂಡಿಯಾನ ಸ್ಟ್ರಗಲ್ ಫಾರ್ ಇಂಡಿಪೆಂಡೆನ್ಸ್, ನವದೆಹಲಿ, ೧೯೮೭.

ಮುಝಫರ್ ಆಸ್ಸಾದಿ, ಪೆಸೆಂಟ್ ಮೂವ್ ಮೆಂಟ್ ಇನ್ ಕರ್ನಾಟಕ, ೧೭೮೦-೯೪, ದೆಹಲಿ, ೧೯೯೭.

ಹಂಜಾ ಆಲಾವಿ, ಪೆಸೆಂಟ್ ರೆವಲ್ಯೂಷನ್ಸ್, ಪೆಸೆಂಟ್ ಸ್ಟ್ರಗಲ್ಸ್ ಇನ್ ಇಂಡಿಯಾ, ಎರ್.ಆರ್. ದೇಸಾಯಿ(ಸಂ), ದೆಹಲಿ, ೧೯೮೨.

### ೩. ಅಪ್ರಕಟಿತ ಗ್ರಂಥಗಳು

ಅನಿತಾ ಬಿ.ಎಸ್., ಕಡಿದಾಳ್ ಮಂಜಪ್ಪನವರ ವ್ಯಕ್ತಿತ್ವ ಮತ್ತು ಸಾಹಿತ್ಯ, ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ, ೧೯೯೪.

ಕೀರ್ತಿನಾಥ್ ಜಿ.ಎನ್., ಶಿವಮೊಗ್ಗ ಜಿಲ್ಲೆಯಲ್ಲಿ ಸಮಾಜವಾದಿ ಚಳುವಳಿಗಳು(೧೯೪೦-೧೯೭೮), ಎಂ.ಫಿಲ್., ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫.

ಬಸವರಾಜಪ್ಪ ಎಚ್.ಈ., ಚಿತ್ರದುರ್ಗ ಪ್ರದೇಶದ ಭೂಹಿಡುವಳಿಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ, ಪಿ.ಹೆಚ್.ಡಿ ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಮಲ್ಲಿಕಾರ್ಜುನ ಎಂ.ಸಿ., ಆಧುನಿಕ ಕಥನ ಸಾಹಿತ್ಯದಲ್ಲಿ ಭೂ ಹೋರಾಟದ ಪ್ರತಿನಿಧಿಕರಣ, ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೭.

ಮೈಸೂರು ಗೆಜೆಟ್, ಜನವರಿ ೧೧, ೧೮೮೧, ಮೈಸೂರು ಸರಕಾರ, ಮೈಸೂರು.

ಮೈಸೂರು ಗೆಜೆಟ್, ಮಾಚ್ -೫, ೧೮೮೧, ಮೈಸೂರ ಸರಕಾರ, ಮೈಸೂರು.

ಮೈಸೂರು ಗೆಜೆಟ್, ಏಪ್ರಿಲ್ ೧೧, ೧೮೮೬, ಮೈಸೂರು ಸರಕಾರ, ಮೈಸೂರು.

ಮೈಸೂರು ಲ್ಯಾಂಡ್ ರೆವಿನ್ಯೂ ಕೊಡುಗೆ ಅನುಸಾರವಾಗಿ ರಚಿಸಿದ ನಿಬಂಧಗಳು, ಮೈಸೂರು ಸರಕಾರ, ಮೈಸೂರು, ೧೯೩೭.

## ಈ. ಪ್ರಕಟಿತ ಲೇಖನಗಳು


ಕಡಿದಾಳ ಮಂಜಪ್ಪ "ಗೇಣಿರೈತರ ಬಗ್ಗೆ ಸರ್ಕಾರದ ಸಹಾನುಭೂತಿ ಇರಲಿಲ್ಲ", **ಕಾಗೋಡು ಚಳುವಳಿ ಸುವರ್ಣ ಸಂಪುಟ**, ಹಿ.ಚಿ.ಬೋರಲಿಂಗಯ್ಯ ಮತ್ತು ಹುಚ್ಚಪ್ಪ ಮಾಸ್ತರ (ಸಂ), ಮಲೆನಾಡು ಜಾನಪದ ಲೋಕ, ಗಾಂಧೀ ಮಂದಿರ, ಸಾಗರ, ೨೦೦೨.

ಕಬಸೆ ಅಶೋಕ ಮೂರ್ತಿ "ಕಡಿದಾಳ್ ಮಂಜಪ್ಪ" **ಕಾಗೋಡು ಚಳುವಳಿ ಸುವರ್ಣ ಸಂಪುಟ**, ಹಿ.ಚಿ.,ಬೋರಲಿಂಗಯ್ಯ ಮತ್ತು ಹುಚ್ಚಪ್ಪ ಮಾಸ್ತರ, ಮಲೆನಾಡು ಜಾನಪದ ಲೋಕ, ಗಾಂಧೀ ಮಂದಿರ ಸಾಗರ, ೨೦೦೨.

ಕೃಷ್ಣಯ್ಯರ್ ಎ.ಎಸ್., "ಸಂಸ್ಥಾಕಾಂಗ್ರೆಸ್", **ಕರ್ನಾಟಕ ರಾಜಕೀಯ ಚಿಂತನೆ**, ದೇ.ಜ.ಗೌ, ಕಮಲೇಶ ಕೆ.ಆರ್., ಸಂ., ಲಕ್ಷ್ಮೀ ಮುದ್ರಣಾಲಯ, ಬೆಂಗಳೂರು ೨೦೦೩.

ಗಣಪತಿಯಪ್ಪ ಹೆಚ್., "ಕಾಗೋಡು ಸತ್ಯಾಗ್ರಹದ ಹುಟ್ಟು ಮತ್ತು ಬೆಳವಣಿಗೆ", **ಕಾಗೋಡು ಚಳುವಳಿ ಸುವರ್ಣ ಸಂಪುಟ**, ಹಿ.ಚಿ.ಬೋರಲಿಂಗಯ್ಯ ಮತ್ತು ಹುಚ್ಚಪ್ಪ ಮಾಸ್ತರ, ಮಲೆನಾಡು ಜಾನಪದ ಲೋಕ, ಗಾಂಧೀ ಮಂದಿರ ಸಾಗರ, ೨೦೦೨.

ಚಂದ್ರಶೇಖರ ಸಿರಿವಂತೆ ಎನ್., "ಕಾಗೋಡು ಸತ್ಯಾಗ್ರಹ ಮತ್ತು ಭೂಸುಧಾರಣೆ" **ಕಾಗೋಡು ಚಳುವಳಿ, ಸುವರ್ಣ ಸಂಪುಟ**, ಹಿ.ಚಿ.ಬೋರಲಿಂಗಯ್ಯ ಮತ್ತು ಹುಚ್ಚಪ್ಪ ಮಾಸ್ತರ(ಸಂ), ಮಲೆನಾಡು ಜಾನಪದ ಲೋಕ, ಗಾಂಧೀ ಮಂದಿರ, ಸಾಗರ, ೨೦೦೨.

ತಂಬಂಡ ವಿಜಯ್ ಪೂಣಚ್ಚ "ಭಾರತದ ರಾಷ್ಟ್ರೀಯ ಹೋರಾಟ" **ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ೪, ಚರಿತ್ರೆ**. ಟಿ.ಪಿ.ವಿಜಯ್ (ಸಂ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

ತಂಬಂಡ ವಿಜಯ್ ಪೂಣಚ್ಚ, "ಕರ್ನಾಟಕ ರೈತ ಚಳುವಳಿಗಳ ಮೇಲೆ ಟಿಪ್ಪಣಿಗಳು", **ರೈತ ಚಳುವಳಿಗಳು, ಏಕೀಕರಣೋತ್ತರ ಕರ್ನಾಟಕ ಚಳುವಳಿಗಳು**, ಟಿ.ಪಿ.ವಿಜಯ್(ಸಂ), ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೦.

ಪ್ರಾಣೇಶರಾವ್ ಬಿ.ಆರ್., "ಭೂದಾನ ಚಳುವಳಿ" **ಕರ್ನಾಟಕ ರಾಜಕೀಯ ಚಿಂತನೆ**, ದೇ.ಜ.ಗೌ, ಕಮಲೇಶ, ಕೆ.ಆರ್.(ಸಂ), ಲಕ್ಷ್ಮಿ ಮುದ್ರಣಾಲಯ, ಬೆಂಗಳೂರು ೨೦೦೩.

ಪುಟ್ಟಸ್ವಾಮಯ್ಯ "ಎಸ್.ಎನ್. ಜೀವನ ದರ್ಶನ", **ಕರ್ನಾಟಕ ರಾಜಕೀಯ ಚಿಂತನೆ**, ದೇ.ಜ.ಗೌ. ಕಮಲೇಶ, ಕೆ.ಅರ್.(ಸಂ), ಲಕ್ಷ್ಮಿ ಮುದ್ರಣಾಲಯ, ಬೆಂಗಳೂರು, ೨೦೦೩.

ಬಸವಾನಿ ರಾಮಶರ್ಮ, "ಕಾಗೋಡು ಗೇಣಿರೈತರ ಹುಟ್ಟು ಹರವು" **ಕಾಗೋಡು ಚಳುವಳಿ ಸುವರ್ಣ ಸಂಪುಟ**, ಮಲೆನಾಡು ಜಾನಪದಲೋಕ, ಗಾಂಧಿ ಮತ್ತು ಮಂದಿರ, ಸಾಗರ, ೨೦೦೨.

ಮುರುಘಪರ ಅಸ್ಸಾದಿ "ರೈತ ಚಳುವಳಿ" **ಕನ್ನಡ ವಿಶ್ವವಿದ್ಯಾಲಯ, ವಿಶ್ವಕೋಶ ೪**, ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೧.

ರಾಮ್‌ರತನ್ ಜಿ., "ಮೈಸೂರು ಸಂಸ್ಥಾನದಲ್ಲಿ ಪ್ರಜಾಪ್ರತಿನಿಧಿ ಸಭೆ ಮತ್ತು ಇನಾಮ್ ಭೂ ಸಂಬಂಧಗಳು", **ಚರಿತ್ರೆ ಅಧ್ಯಯನ ಸಂಪುಟ** ೧, ಸಂಚಿಕೆ ೧, ಲಕ್ಷ್ಮಣ್ ತೆಲಗಾವಿ(ಸಂ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೫.

ರಾಘವೇಂದ್ರ ರಾವ್ ಕೆ.ಎಸ್., ಸಿರಾಜ್ ಅಹಮದ್, "ಗಾಂಧಿಯುಗ ಮತ್ತು ಭಾರತದ ರಾಷ್ಟ್ರೀಯ ಹೋರಾಟ" **ಕನ್ನಡ ವಿಶ್ವವಿದ್ಯಾಲಯ, ವಿಶ್ವಕೋಶ-೪, ಚರಿತ್ರೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೭.

ವಿಷ್ಣುನಾಯ್ಕ, "ಉತ್ತರ ಕನ್ನಡ ಜಿಲ್ಲೆಯಲ್ಲಿ ನಡೆದ ಸಮಾಜವಾದಿ ರೈತ ಆಂದೋಲನ" **ಜೀವಂತ ಜ್ವಾಲೆ**, ವೆಂಕಪ್ಪಗೌಡ(ಸಂ), ಯಶಸ್ವಿ ಪ್ರಕಾಶನ, ಬೆಂಗಳೂರು, ೧೯೮೧.

ವಿಠಲಮೂರ್ತಿ, "ರೈತ ಚಳುವಳಿ" **ಕರ್ನಾಟಕ ರಾಜಕೀಯ ಚಿಂತನೆ**, ದೇ.ಜ.ಗೌ ಮತ್ತು ಕಮಲೇಶ ಕೆ.ಆರ್.(ಸಂ), ಲಕ್ಷ್ಮಿ ಮುದ್ರಣಾಲಯ, ಬೆಂಗಳೂರು, ೨೦೦೩.

ವಿಜಯಲಕ್ಷ್ಮಿ, "ಪ್ರಜಾಪಕ್ಷ ಮತ್ತು ಪ್ರಜಾಮಿತ್ರ ಮಂಡಳಿ", **ಕರ್ನಾಟಕ ರಾಜಕೀಯ ಚಿಂತನೆ**, ದೇ.ಜ.ಗೌ, ಕಮಲೇಶ(ಸಂ), ಲಕ್ಷ್ಮೀ ಮುದ್ರಣಾಲಯ, ಬೆಂಗಳೂರು, ೨೦೦೩.

ವೆಲೀರಿಯನ್ ರೋಡ್ರಿಗಸ್ ಎಸ್., ಸಿರಾಜಿ ಅಹಮದ್, "ಭೂಸುಧಾರಣಾ ಕಾಯಿದೆಯ ರಾಜಕಾರಣ", ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ೪, ಚರಿತ್ರೆ, ವಿಜಯ ಟಿ.ಪಿ.(ಸಂ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

ಶಾಂತವೇರಿ ಗೋಪಾಲಗೌಡ, "ಕಾಗೋಡು ಚಲೋ" ಜೀವಂತ ಜ್ವಾಲೆ, ಕೋಣಂದೂರು ವೆಂಕಪ್ಪಗೌಡ, ಯಶಸ್ವಿ ಪ್ರಕಾಶನ ಬೆಂಗಳೂರು, ೧೯೮೧

ಸೆಬಾಸ್ಟಿನ್ ಜೋಸೆಫ್ ಎಂ., "೧೮೩೦-೩೧ರಲ್ಲಿ ನಗರ ಡಿವಿಷನಿನಲ್ಲಿ ನಡೆದ ರೈತರ ದಂಗೆ ಒಂದು ವಿವೇಚನೆ" **ಕಾಗೋಡು ಚಳುವಳಿ ಸುವರ್ಣ ಸಂಪುಟ**, ಹಿ.ಚಿ.ಬೋರಲಿಂಗಯ್ಯ ಮತ್ತು ಹುಚ್ಚಪ್ಪ ಮಾಸ್ತರ(ಸಂ), ಮಲೆನಾಡ ಜಾನಪದ ಲೋಕ, ಗಾಂಧೀನಗರ, ಸಾಗರ ೨೦೦೨

**ಉ. ಕರ್ನಾಟಕ ರಾಜ್ಯ ಪತ್ರಗಾರ ಇಲಾಖೆ, ವಿಧಾನಸೌಧ, ಬೆಂಗಳೂರು, ಇಲ್ಲಿ ದೊರೆತಿರುವ ಪ್ರಾಥಮಿಕ ಆಕರಗಳು**

೧. ಸಂಗ್ರಹದ ಹೆಸರು : ಕಡಿದಾಳ್ ಮಂಜಪ್ಪ,

ಅ. News paper clippings

ಆ. ವಿಧಾನ ಸಭೆಯ ನಡವಳಿಕೆಗಳು

೧. ಟೆನನ್ಸಿ ಆ್ಯಕ್ಟ್ ಮೇಲಿನ ಚರ್ಚೆಗೆ ಸ್ಪಷ್ಟೀಕರಣ, ೧೯೫೩, ಮಾರ್ಚ್ ೨೭, ೧೯೫೩

೨. ಮೈಸೂರ್ ಇನಾಮ್ ಪದ್ಧತಿಯ ಮಸೂದೆಯ ಮೇಲೆ ಜಂಟಿ ಸೆಲೆಕ್ಟ್ ಸಮಿತಿಯ ಒಪ್ಪಿಗೆ ಕುರಿತು ಸ್ಪಷ್ಟೀಕರಣ, ೧೯೫೩, ಏಪ್ರಿಲ್ ೧೧

೩. ಮೈಸೂರ್ ವಿಧಾನಮಂಡಲ, ಮೈಸೂರು ರಾಜ್ಯದ ಭೂಸುಧಾರಣಾ ವಿಧೇಯಕ, (ಸಂಯುಕ್ತ ಪರಿಶೀಲನಾ ಸಮಿತಿಯವರಿಂದ ತಿದ್ದುಪಡಿಯಾದ ಮೇರೆಗೆ) ರೆವಿನ್ಯೂ ಶಾಖೆಯ ಮಂತ್ರಿಗಳಾದ ಶ್ರೀ ಕಡಿದಾಳ್ ಮಂಜಪ್ಪನವರು ಕೊಟ್ಟ ವಿವರಣೆ(೧೯೬೧).

ಊ. ಕಡಿದಾಳ ಮಂಜಪ್ಪನವರ ಬಿಡಿಬರಹಗಳು ಮತ್ತು ಭಾಷಣಗಳು

೧. ಪುಸ್ತಕಗಳು

೧ ಹೊಲಸಾದ ರಾಜಕಾರಣ ಹದಗೆಟ್ಟ ಆಡಳಿತ

೨. ನಾವು; ನಮ್ಮ ರಾಷ್ಟ್ರ ಮತ್ತು ರಾಜಕಾರಣಗಳು

೩. ನಮ್ಮ ವಿಕೃತ ಗುಣಗಳ ನಮ್ಮ ಪ್ರಬಲ ಶತ್ರುಗಳು

೨. ಭಾಷಣಗಳು

೧. ಮೈಸೂರು ರಾಜ್ಯದ ಭೂಸುಧಾರಣ ವಿಧೇಯಕ ಮಂಡನೆಯ ಸಂದರ್ಭದಲ್ಲಿ ಕೊಟ್ಟ ವಿವರಣೆ.

೨. ಭಾರತ ಸ್ವಾತಂತ್ರ್ಯದ ರಜತ ಮಹೋತ್ಸವ ಸಂದರ್ಭದಲ್ಲಿ ೧೯-೧೧-೧೯೭೨ರಲ್ಲಿ ಸ್ವಾತಂತ್ರ್ಯ ಯೋಧರ ಮೇಳವನ್ನು ಉದ್ದೇಶಿಸಿ ಮಾಡಿದ ಭಾಷಣ.

೩. ೧೯೭೪ರಂದು ನವ ನಿರ್ಮಾಣ ಕ್ರಾಂತಿಯ ಉದ್ಘಾಟನಾ ಸಮಾರಂಭದಲ್ಲಿ ಮಾಡಿದ ಭಾಷಣ.

೪. ಆಲ್ ಕರ್ನಾಟಕ ಲಾಯರ್ಸ್ ಕಾನ್‌ಫರೆನ್ಸ್ , ೧೯೮೫ ಶಿವಮೊಗ್ಗದಲ್ಲಿ ಮಾಡಿದ ಭಾಷಣ

೫. ಬೀದರ್‌ನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ನಲವತ್ತೊಂದನೆಯ ಅಧಿವೇಶನವನ್ನು ಉದ್ದೇಶಿಸಿ ಮಾಡಿದ ಭಾಷಣ, ಕನ್ನಡ ಸಾಹಿತ್ಯ ಪರಿಷತ್ತು.

೬. ಅಖಿಲ ಭಾರತ ಸರ್ವೋದಯ ಸಮ್ಮೇಳನ ಶಿವಮೊಗ್ಗದಲ್ಲಿ ನಡೆದಾಗ ಸ್ವಾಗತ ಸಮಿತಿಯ ಅಧ್ಯಕ್ಷರಾಗಿ ಸ್ವಾಗತ ಭಾಷಣ ಮಾಡಿದ್ದು.

೭. ಕರ್ನಾಟಕ ಪ್ರದೇಶ ಸಮಾಜವಾದಿ ವೇದಿಕೆಯ ಆರಂಭದ ದಿನ ಮಾಡಿದ ಅಧ್ಯಕ್ಷ ಭಾಷಣ

೮. ಚುನಾವಣೆಗಳು, ಸಾರ್ವಜನಿಕ ಮನವಿಯ ಪ್ರತಿಗಳನ್ನು ರಾಷ್ಟ್ರೀಯ ಜಾಗೃತಿ ಮಂಡಳಿಯಿಂದ ಪ್ರಕಟಿಸಿದ್ದು,

೯. ಗಡಿನಾಡ ಕನ್ನಡಿಗರ ಸಮ್ಮೇಳನದಲ್ಲಿ ಮಾಡಿದ ಭಾಷಣ

೫೩. ಪತ್ರಿಕೆಗಳು

ಅ. ದಿನಪತ್ರಿಕೆಗಳು

೧. ಪ್ರಜಾವಾಣಿ, ಬೆಂಗಳೂರು (೧೬-೫-೧೯೫೧)

೨. ಪ್ರಜಾವಾಣಿ, ಬೆಂಗಳೂರು (೩೧-೫-೧೯೫೧)

೩. ಪ್ರಜಾವಾಣಿ, ಬೆಂಗಳೂರು (೨೯-೯-೧೯೭೭)

೪. ಡೆಕ್ಕನ್ ಹೆರಾಲ್ಡ್ (೨೦-೪-೧೯೭೫)

೫. ಡೆಕ್ಕನ್ ಹೆರಾಲ್ಡ್ ಭಾನುವಾರದ ಸಂಚಿಕೆ ೫ ಮತ್ತು ೧೧ ಜನವರಿ ೧೯೮೪, ಮಂಜಪ್ಪ ಕಡಿದಾಳ, ಲ್ಯಾಂಡ್ ರಿಫಾರ್ಮ್ಸ್ ಇನ್ ಕರ್ನಾಟಕ

೬. ಸಂಯುಕ್ತ ಕರ್ನಾಟಕ, ದಾವಣಗೆರೆ, ೨೦-೧೨-೨೦೦೭

೭. ಜನ ಹೋರಾಟ, ಶಿವಮೊಗ್ಗ, ೨೨-೧೨-೨೦೦೭

೮. ಡೆಕ್ಕನ್ ಹೆರಾಲ್ಡ್ (೨೦-೪-೧೯೭೫)

ಆ. ವಾರ ಪತ್ರಿಕೆ

೧. 'ಶ್ರೀ ಸಾಮಾನ್ಯ' ಸಿದ್ದಾಪುರ (೪-೭-೧೯೭೭)

೨. ಸಾಪ್ತಾಹಿಕ ಪುರವಣಿ (೮-೭-೨೦೦೭)

೩. ಛಲಗಾರ ತೀರ್ಥಹಳ್ಳಿ (೦೯-೦೩-೨೦೦೮)

**ನಿಯತಕಾಲಿಕೆಗಳು**

೧. ಸೀತಾರಾಮ ಐಯ್ಯಂಗಾರ್ ಎನ್.ಕೆ.(ಸಂ), ೧೯೫೬ ಜೂನ್ ೧೬ ಮಿಂಚು, ಶಿವಮೊಗ್ಗ

೨. ಸೀತಾರಾಮ ಐಯ್ಯಂಗಾರ್ ಎನ್.ಕೆ.(ಸಂ), ೧೯೫೬ ನವೆಂಬರ್ ೨೬, ಜಾಗೃತಿ, ಶಿವಮೊಗ್ಗ

೩. ತಾಯಿನಾಡು, ಜುಲೈ ೧೯, ೧೯೫೬

೪. ಸಂಕ್ರಮಣ, ಆಗಸ್ಟ್ ೧೯೯೮

೨

## ಸಂದರ್ಶಿತ ವ್ಯಕ್ತಿಗಳು

೧. ಶ್ರೀ ನಾಗಪ್ಪಗೌಡ್ರು (ಮಂಜಪ್ಪ ಕಡಿದಾಳರವರ ಸಹೋದರ), ಹಾರೋಗಳಿಗೆ, ತೀರ್ಥಹಳ್ಳಿ ಶಿವಮೊಗ್ಗ, ೫.೦೪.೨೦೦೮.

೨. ಶ್ರೀ ಕೆ.ರವಿಕುಮಾರ್ ಜಗಳೂರ್ ದಾವಣಗೆರೆ ಜಿಲ್ಲೆ, ೨೪.೪.೨೦೦೮.

೩. ಶ್ರೀ ಹೆಚ್.ಜಿ.ಗೋವಿಂದೆಗೌಡ್ರು, ಮಾಜಿ ಶಿಕ್ಷಣ ಸಚಿವರು, ಕೊಪ್ಪ ತಾಲ್ಲೂಕು ಗುಣವಂತೆ, ೧೭.೦೫.೨೦೦೮.

೪. ಶ್ರೀ ಶೇಷಪ್ಪ ಹೆಗಡೆ, ಸ್ವಾತಂತ್ರ್ಯ ಹೋರಾಟಗಾರರು, ಮೇಗರವಳ್ಳಿ, ತೀರ್ಥಹಳ್ಳಿ, ಶಿವಮೊಗ್ಗ, ೧೮.೦೫.೨೦೦೮.

೫. ಶ್ರೀ ಹೆಚ್.ಗಣಪತಿಯಪ್ಪ, ಕಾಗೋಡು ಚಳುವಳಿಯ ರುವಾರಿ, ಬಸವನಹೊಳೆ, ಸಾಗರ, ಶಿವಮೊಗ್ಗ, ೨೦.೦೫.೨೦೦೮.

೬. ಡಾ. ಹಿ.ಚಿ.ಬೋರಲಿಂಗಯ್ಯ, ಪ್ರಾಧ್ಯಾಪಕರು, ಬುಡಕಟ್ಟು ಅಧ್ಯಯನ ವಿಭಾಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೦೮.೦೭.೨೦೦೯.

೭. ಡಾ.ಕಾಳೇಗೌಡ ನಾಗವಾರ, ನಿವೃತ್ತ ಪ್ರಾಧ್ಯಪಕರು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೮.೦೯.೨೦೦೮.

೩

# ನಕ್ಷೆಗಳು

ಶಿವಮೊಗ್ಗ ಜಿಲ್ಲೆ

ಸೊರಬ
ಶಿಕಾರಿಪುರ
ಕಾಗೋಡು
ಸಾಗರ
ಶಿವಮೊಗ್ಗ
ಭದ್ರಾವತಿ
ಹೊಸನಗರ
ತೀರ್ಥಹಳ್ಳಿ

ನಕ್ಷೆಯ ಕೃಪೆ – ಜಿ.ಎನ್.ಕೀರ್ತಿನಾಥ್ ಅವರ ಶಿವಮೊಗ್ಗ ಜಿಲ್ಲೆಯ ಸಮಾಜವಾದಿ ಚಳುವಳಿ ಎಂ.ಫಿಲ್ ಅಪ್ರಕಟಿತ ಸಂಪ್ರಬಂಧ




ಕಾಗೋಡು ಚಳವಳಿ ಪ್ರದೇಶದ ನಕ್ಷೆ

ನಕ್ಷೆಯ ಕೃಪೆ – ಹಿ.ಚಿ.ಬೋರಲಿಂಗಯ್ಯ ಮತ್ತು ಹುಚ್ಚಪ್ಪ ಮಾಸ್ತರ ಅವರ ಕೃತಿ – 'ಕಾಗೋಡು ಚಳುವಳಿ'

೪

# ಛಾಯಾಚಿತ್ರಗಳು



ಛಾಯಾಚಿತ್ರ ಕೃಪೆ : ಕಡಿದಾಳ್ ವಿಶ್ವನಾಥ

ಶ್ರೀ ಕಡಿದಾಳ್ ಮಂಜಪ್ಪ



ಛಾಯಾಚಿತ್ರ ಕೃಪೆ : ಕಡಿದಾಳರ ಆತ್ಮಕತೆ ಯಾದ 'ನನಸಾಗದ ಕನಸು'

ಶ್ರೀ ಸಿದ್ಧವನಹಳ್ಳಿ ನಿಜಲಿಂಗಪ್ಪನವರಿಗೆ ಮುಖ್ಯಮಂತ್ರಿ ಪದವಿಯನ್ನು ಒಪ್ಪಿಸುತ್ತಿರುವಾಗ



ಛಾಯಾಚಿತ್ರ ಕೃಪೆ : ಕಡಿದಾಳರ ಆತ್ಮಕತೆ ಯಾದ 'ನನಸಾಗದ ಕನಸು'

ಶ್ರೀ ಜವಹರಲಾಲ್ ನೆಹರೂರವರೊಂದಿಗೆ
ಕಡಿದಾಳ್ ಮಂಜಪ್ಪನವರು



ಕಡಿದಾಳ್‌ರು
ಪ್ರಥಮ
ಮಂತ್ರಿಮಂಡಲದ
ಸದಸ್ಯರೊಂದಿಗೆ

ಛಾಯಾಚಿತ್ರ ಕೃಪೆ : ಕಡಿದಾಳರ ಆತ್ಮಕತೆ ಯಾದ 'ನನಸಾಗದ ಕನಸು'



ಶ್ರೀ ಜಯಚಾಮರಾಜ
ಒಡೆಯರ್, ಶ್ರೀ ಲಾಲ್
ಬಹದ್ದೂರ್ ಶಾಸ್ತ್ರಿ,
ಮತ್ತಿತ್ತರ ಗಣ್ಯರೊಡನೆ



ಛಾಯಾಚಿತ್ರ ಕೃಪೆ : ಕಡಿದಾಳರ ಆತ್ಮಕತೆ ಯಾದ 'ನನಸಾಗದ ಕನಸು'

ಕಾಂಗ್ರೆಸ್ ಅಧ್ಯಕ್ಷ ಯು. ಎನ್.ಧೇಬರ್‌ರೊಡನೆ ಕೆಂಗಲ್ ಹನುಮಂತಯ್ಯ ಮತ್ತು ಕಡಿದಾಳ್

ಛಾಯಾಚಿತ್ರ ಕೃಪೆ : ಕಡಿದಾಳರ ಆತ್ಮಕತೆ ಯಾದ 'ನನಸಾಗದ ಕನಸು'



ಜಯಪ್ರಕಾಶನಾರಾಯಣ ಅವರೊಂದಿಗೆ ಕಡಿದಾಳ್‌ರು



ಛಾಯಾಚಿತ್ರ ಕೃಪೆ : ಕಡಿದಾಳರ ಆತ್ಮಕತೆ ಯಾದ 'ನನಸಾಗದ ಕನಸು'

ಮುಖ್ಯಮಂತ್ರಿ ಬಿ.ಡಿ.ಜತ್ತಿ ಅವರೊಂದಿಗೆ ಕಡಿದಾಳ್‌ರು



ಛಾಯಾಚಿತ್ರ ಕೃಪೆ : ಕಡಿದಾಳ್ ವಿಶ್ವನಾಥ

ಶ್ರೀ ಕಡಿದಾಳ್‌ರು ಸಚಿವರಾದ ಸಂದರ್ಭದಲ್ಲಿ ತೀರ್ಥಹಳ್ಳಿ ದೇವಂಗಿಯಲ್ಲಿ ಅಭಿನಂದನೆಯನ್ನು ಸ್ವೀಕರಿಸಿ ಮಾತನಾಡುತ್ತಿರುವುದು

ಛಾಯಾಚಿತ್ರ ಕೃಪೆ : ಕಡಿದಾಳ್ ವಿಶ್ವನಾಥ



ಶ್ರೀ ಕಡಿದಾಳ್‌ರ ಅಭಿನಂದನಾ ಸಮಾರಂಭದಲ್ಲಿದ್ದ ಶ್ರೀ ಕುವೆಂಪು, ಎಸ್.ವಿ.ಕೃಷ್ಣಮೂರ್ತಿ, ಬಿಹಾರದ ರಾಜ್ಯಪಾಲರದ ಆರ್.ಆರ್.ದಿವಾಕರ, ಡಿ.ಆರ್.ವೆಂಕಪ್ಪಗೌಡ, ಡಿ.ಆರ್.ರತ್ನಾಕರ



ಛಾಯಾಚಿತ್ರ ಕೃಪೆ : ಹೆಚ್.ಗಣಪತಿಯಪ್ಪ

ಶ್ರೀ ಕಡಿದಾಳ್‌ರೊಂದಿಗೆ ಎಚ್.ಗಣಪತಿಯಪ್ಪನವರು



ಛಾಯಾಚಿತ್ರ ಕೃಪೆ : ಹೆಚ್.ಜಿ.ಗೋವಿಂದೇಗೌಡ

ಶ್ರೀ ಕಡಿದಾಳ್‌ರೊಂದಿಗೆ ಮಾಜಿ ಶಿಕ್ಷಣ ಸಚಿವ ಹೆಚ್.ಜಿ.ಗೋವಿಂದೆಗೌಡರು



ಛಾಯಾಚಿತ್ರ ಕೃಪೆ : ಹೆಚ್.ಗಣಪತಿಯಪ್ಪ

ಕಡಿದಾಳ್ ಅವರು ಸತ್ಯಾಗ್ರಹಿಗಳನ್ನು ಉದ್ದೇಶಿಸಿ ಭಾಷಣ ಮಾಡಿದ ಕಾಗೋಡಿನ ಅರಳಿಕಟ್ಟೆ



ಛಾಯಾಚಿತ್ರ ಕೃಪೆ : ಹೆಚ್.ಗಣಪತಿಯಪ್ಪ

ಕಾಗೋಡಿನ ರೈತರ ಗೇಣಿ ಗದ್ದೆ



ರೈತರ ಸಭೆ ನಡೆಸುತ್ತಿದ್ದ ಈಶ್ವರ ದೇವಸ್ಥಾನ

ಛಾಯಾಚಿತ್ರ ಕೃಪೆ : ಹೆಚ್.ಗಣಪತಿಯಪ್ಪ



ಕಾಗೋಡಿನ ಒಡೆಯರ ಮನೆ

ಛಾಯಾಚಿತ್ರ ಕೃಪೆ : ಹೆಚ್.ಗಣಪತಿಯಪ್ಪ

